## ಸಂಪಾದಕ ಮಂಡಳಿ

ಡಾ. ಕೆ.ವಿ.ನಾರಾಯಣ

ಡಾ. ಕರೀಗೌಡ ಬೀಚನಹಳ್ಳಿ

ಡಾ. ಹಿ.ಚಿ.ಬೋರಲಿಂಗಯ್ಯ

ಡಾ. ಟಿ.ಆರ್.ಚಂದ್ರಶೇಖರ

ಡಾ. ಅಮರೇಶ ನುಗಡೋಣಿ

# ವಚನ ಸಾವಿರ

ಸಂಪಾದಕ

ಪ್ರೊ. ಓ.ಎಲ್. ನಾಗಭೂಷಣಸ್ವಾಮಿ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# VACHANA SAAVIRA

Edited by
**Prof. O.L. Nagabhushanaswamy**
No. 115, 'Abhudaya'
13th Cross, Wilson Garden
Bangalore 560 027

Published by
**Dr. H.C. Boralingaiah**
Director, Prasaranga
Kannada University, Hampi
Vidyaranya 583 276

Pages: viii+14+390 **Price: Rs. 150/-**

First Impression: 2004

www.kavihampi.org



ಪ್ರಕಟಣೆ
**ಡಾ. ಹಿ.ಚಿ. ಬೋರಲಿಂಗಯ್ಯ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಬೆಲೆ : ರೂ. ೧೫೦.೦೦**

ಮುಖಪುಟ : ಕೆ.ಕೆ. ಮಕಾಳಿ

ಅಕ್ಷರ ಸಂಯೋಜನೆ
ವಿದ್ಯಾರಣ್ಯ ಗಣಕ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮುದ್ರಣ
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು

# ಬಯಲನು ತುಂಬುವ
# ಆಲಯದ ಬೆಳಕಿನ ಬೀಜಗಳು

ಕನ್ನಡ ವಿಶ್ವವಿದ್ಯಾಲಯ ಕನ್ನಡ ಸಂಸ್ಕೃತಿಯ ಬಹುತ್ವದ ನೆಲೆಗಳನ್ನು ಹುಡುಕುವ, ಗಟ್ಟಿಗೊಳಿಸುವ, ಹರಡುವ ಕಾಯಕವನ್ನು ನೋಂಪಿಯಂತೆ ನಡೆಸಿಕೊಂಡು ಬಂದಿದೆ. ಕನ್ನಡ ಸಂಸ್ಕೃತಿಯನ್ನು ಮತ್ತೆ ಮತ್ತೆ ನಿರ್ವಚನ ಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿ ಕನ್ನಡ ವಿಶ್ವವಿದ್ಯಾಲಯವು ಒಂದು ಆಡುಂಬೊಲವಾಗಿ ಕಾರ್ಯ ನಿರ್ವಹಿಸುತ್ತಿದೆ. ನಮಗೆ ಗೊತ್ತಿರುವ ಸಂಸ್ಕೃತಿಯ ಅರ್ಥಗಳ ಆಚೆಗೆ ಅನೂಹ್ಯ ಲೋಕಗಳ ಕಡೆಗೆ ತನ್ನನ್ನು ಮತ್ತು ಕನ್ನಡಿಗರನ್ನು ಒಯ್ಯುವ ಪಯಣದ ದಾರಿಗಳನ್ನು ರೂಪಿಸುವ ಮಹತ್ವದ ಸಾಹಸದ ಹೆಜ್ಜೆಗಳು ಮೂಡಿಬಂದಿವೆ. ಇದು ನಿರಂತರ ನಡೆಯಬೇಕಾದ ಬಹುದಾರಿಗಳ ಮಹಾಯಾನ.

ಇಪ್ಪತ್ತೊಂದನೆಯ ಶತಮಾನದ ಆರಂಭದಲ್ಲಿ ಜಾಗತೀಕರಣದ ಈ ಸಂಕ್ರಮಣ ಸ್ಥಿತಿಯಲ್ಲಿ ಕನ್ನಡ ವಿಶ್ವವಿದ್ಯಾಲಯದ ರಚನೆ ಮತ್ತು ಕಾರ್ಯಗಳು ಸವಾಲಿನವು ಮತ್ತು ಜವಾಬ್ದಾರಿಯವೂ ಆಗಿವೆ. 'ಕನ್ನಡ' ಎನ್ನುವ ಪರಿಕಲ್ಪನೆಯನ್ನು ಭಾಷೆ, ಸಾಹಿತ್ಯ, ಬದುಕು ಮತ್ತು ಅದರ ಆಧುನಿಕ ಸನ್ನಿವೇಶಗಳಲ್ಲಿ ಅರ್ಥೈಸುವ ಮತ್ತೆ ಕಟ್ಟುವ ಕೆಲಸವನ್ನು ಕನ್ನಡ ವಿಶ್ವವಿದ್ಯಾಲಯ ಒಂದು ಕಾಯಕದಂತೆ ಕೈಗೆತ್ತಿಕೊಂಡಿದೆ. ಕನ್ನಡ ಮತ್ತು ಅಭಿವೃದ್ಧಿ ಎನ್ನುವ ಎರಡು ಪರಿಕಲ್ಪನೆಗಳು ಎದುರುಬದುರಾಗುವ ಆತಂಕ ಒಂದು ಕಡೆಯಾದರೆ, ಅವು ಒಂದನ್ನೊಂದು ಪ್ರಭಾವಿಸಿ ನೆರವಾಗುವ ಆವರಣವನ್ನು ನಿರ್ಮಾಣ ಮಾಡುವುದು ಇನ್ನೊಂದೆಡೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯವು ಈ ಸಂಬಂಧಿಯಾದ ಹೊಸ ಆಲೋಚನೆಗಳ ಸಂವಾದ ಮತ್ತು ಅದರ ಆನ್ವಯಿಕ ಸಾಧನೆಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಬಯಸಿದೆ.

ಮಾಹಿತಿ ತಂತ್ರಜ್ಞಾನವು ಜಾಗತೀಕರಣದ ಪ್ರಮುಖ ಅಸ್ತ್ರವಾಗಿ ಪ್ರಯೋಗವಾಗುತ್ತಿರುವಾಗ ಈ ಅಸ್ತ್ರವನ್ನು ಕನ್ನಡದ ಅಭಿವೃದ್ಧಿಗಾಗಿ ಬಳಸುವ ಹೊಣೆಗಾರಿಕೆಯು ಕನ್ನಡ ವಿಶ್ವವಿದ್ಯಾಲಯದ ಮೇಲೆ ಇದೆ. ಕನ್ನಡ ತಂತ್ರಾಂಶಗಳ ಅಭಿವೃದ್ಧಿಯ ಎಲ್ಲಾ ತೊಡಕುಗಳನ್ನು ನಿವಾರಿಸಿಕೊಂಡು ಮುಂದೆ ಸಾಗಬೇಕೆನ್ನುವ ಉದ್ದೇಶದಿಂದ ಕನ್ನಡ ವಿಶ್ವವಿದ್ಯಾಲಯ ಈ ಸಂಬಂಧ ಸಾಹಿತಿಗಳ, ಭಾಷಾತಜ್ಞರ, ತಂತ್ರಜ್ಞರ ಸಮಾಲೋಚನೆ ಯನ್ನು ನಡೆಸಿ ಕನ್ನಡವು ಸರ್ವವ್ಯಾಪಿಯಾಗಿ ಬೆಳೆಯಲು ಶ್ರಮಿಸುತ್ತಿದೆ.

ಕನ್ನಡವು ಕಾಗದರಹಿತ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತಿರುವಾಗಲೂ ಪುಸ್ತಕ ರೂಪದಲ್ಲಿ ಕನ್ನಡ ಕೃತಿಗಳ ಪ್ರಕಟಣೆ ಸಮಾನಾಂತರವಾಗಿ ಕ್ರಿಯಾಶೀಲವಾಗಿ ನಡೆಯುವುದು ಬಹಳ ಮುಖ್ಯವಾದದ್ದು. ತಾಂತ್ರಿಕ-ಮೌಖಿಕ ಮಾಧ್ಯಮದಲ್ಲಿ ಕನ್ನಡವು ಬಳಕೆಯಾಗುತ್ತಿರುವಾಗಲೇ ಕಾಗದದಲ್ಲಿ ಕನ್ನಡ ಅಕ್ಷರಗಳು ಮುದ್ರಣಗೊಂಡು ಕಣ್ಣಿಗೆ, ಕಿವಿಗೆ ಮತ್ತು ಮನಸ್ಸಿಗೆ ಕನ್ನಡವನ್ನು ಸಂವಹನಗೊಳಿಸುವ ಪ್ರಕ್ರಿಯೆ ನಿರಂತರವಾಗಿ ನಡೆಯಬೇಕಿದೆ. ಇಲ್ಲಿ ಪ್ರಕಟ ಗೊಳ್ಳುವ ಮಾಧ್ಯಮದೊಂದಿಗೆ ಅಭಿವ್ಯಕ್ತಗೊಳ್ಳುವ ಚಿಂತನಾ ಶರೀರವೂ ಮುಖ್ಯವಾದದ್ದು. ಭಾಷೆ, ಸಾಹಿತ್ಯ, ಕಲೆಗಳು, ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ ಎನ್ನುವ ಬೌದ್ಧಿಕ ಗಡಿ ರೇಖೆಗಳನ್ನು ಕಳಚಿಕೊಂಡು ಕನ್ನಡ ಜ್ಞಾನವು ಕನ್ನಡ ವಿಶ್ವವಿದ್ಯಾಲಯದಲ್ಲಿ ರೂಪುಗೊಳ್ಳುವ ಮತ್ತು ಪ್ರಕಟಗೊಳ್ಳುವ ಪ್ರಕ್ರಿಯೆ ನಡೆಯುತ್ತಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಇಂಥ ಪ್ರಕ್ರಿಯೆಯ ಅನಂತರೂಪಗಳನ್ನು ಸಾಕಾರಗೊಳಿಸುವ ಒಂದು ನವರಂಗ. ಈ ಪ್ರಕಟಣೆಗಳು ಚಿಂತನೆ ಮತ್ತು ಪ್ರಯೋಗಗಳ ಫಲಗಳಾಗಿರುವುದರ ಜೊತೆಗೆ ಕರ್ನಾಟಕವನ್ನು ಮತ್ತು ಕನ್ನಡ ಸಂಸ್ಕೃತಿಯನ್ನು ಇಪ್ಪತ್ತೊಂದನೇ ಶತಮಾನದುದ್ದಕ್ಕೂ ಮುನ್ನಡೆಸುವ ಬೆಳಕಿನ ಬೀಜಗಳಾಗಿವೆ. ಈ ಆಶಯದ ಹಿನ್ನೆಲೆಯಲ್ಲಿ ರೂಪುಗೊಂಡ ಪ್ರಸ್ತುತ ಕೃತಿ 'ವಚನ ಸಾವಿರ'. ವಚನಗಳು ಕನ್ನಡದ ವಿಶಿಷ್ಟ ರಚನೆಗಳು. ಈ ವಚನ ಸಾವಿರ ಕೃತಿಯನ್ನು ಕನ್ನಡಿಗರ ಕೈಯಲ್ಲಿಡಲು ವಿಶ್ವವಿದ್ಯಾಲಯಕ್ಕೆ ತುಂಬಾ ಸಂತೋಷವೆನಿಸುತ್ತದೆ. ಇದೊಂದು ಅಪೂರ್ವವಾದ ಪ್ರಯತ್ನ. ಯಾವುದೇ ವಿಂಗಡಣೆಗಳಿಲ್ಲದೆ ವಚನಕಾರರ ವಚನಗಳನ್ನು ಅಕಾರಾದಿಯಾಗಿ ಇಲ್ಲಿ ನೀಡಲಾಗಿದೆ. ವಚನಗಳು ಮತ್ತು ಓದುಗರ ನಡುವೆ ಯಾವುದೇ ಬಗೆಯ ಉಪಾಧಿ ಇರಬಾರದೆಂಬ ಉದ್ದೇಶದಿಂದ ಇದನ್ನು ಸಿದ್ಧಪಡಿಸಲಾಗಿದೆ. ಇಂತಹ ಸಾವಿರದ ಅರವತ್ತೆಂಟು ವಚನಗಳನ್ನು ಪ್ರೊ. ಓ.ಎಲ್. ನಾಗಭೂಷಣಸ್ವಾಮಿ ಅವರು ಸಂಪಾದಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮ ಅಭಿನಂದನೆಗಳು.

ಬಿ.ಎ. ವಿವೇಕ ರೈ

ಕುಲಪತಿ

# ಪರಿವಿಡಿ

# ಪ್ರಸ್ತಾವನೆ

ವಚನಗಳು ಕನ್ನಡದ ಅಪೂರ್ವ ರಚನೆಗಳು. ಇದುವರೆಗೆ ಲಭ್ಯವಾಗಿರುವ ಸುಮಾರು ಇಪ್ಪತ್ತು ಸಾವಿರ ವಚನಗಳಲ್ಲಿ ಬಸವಣ್ಣನವರ ವಚನಗಳು, ಅಕ್ಕನ ವಚನಗಳು, ಅಲ್ಲಮನ ಮತ್ತು ಚನ್ನಬಸವಣ್ಣನ ಕೆಲವು ವಚನಗಳು, ಒಟ್ಟು ಸುಮಾರು ಒಂದು ಸಾವಿರದಷ್ಟು ವಚನಗಳ ಅತಿ ಪರಿಚಯದಿಂದ ಇಡೀ ವಚನ ಸಾಹಿತ್ಯವೇ ಸುಪರಿಚಿತವಾಗಿಬಿಟ್ಟಿದೆ ಎಂಬ ಭ್ರಮೆಯೂ ಬೆಳೆದುಕೊಂಡಿದೆ. ಆಯ್ದ ವಚನಗಳ ಅತಿಪರಿಚಯದಿಂದಾಗಿಯೇ ಇಡೀ ವಚನ ಸಾಹಿತ್ಯವೇ ಸುಲಭ, ಸರಳ, ಸುಸ್ಪಷ್ಟ ಎಂಬ ಭ್ರಮೆ ಗಟ್ಟಿಯಾಗಿ ನೆಲೆಗೊಂಡಿದೆ. ವಚನಗಳ ವೈವಿಧ್ಯವಾಗಲೀ, ಅವು ಒಳಗೊಂಡಿರುವ ವಿಚಾರಗಳ ತಾಕಲಾಟವಾಗಲೀ ಮುಖ್ಯವೆಂದು ಅನ್ನಿಸಿಯೇ ಇಲ್ಲದಿರುವುದು ಸಾಂಸ್ಕೃತಿಕ ದುರಂತವೇ ಸರಿ. ವಚನ ಲೋಕದ ವೈವಿಧ್ಯ ಮತ್ತು ವೈರುಧ್ಯಗಳನ್ನು ಪರಿಚಯಿಸುವುದೇ ಪ್ರಸ್ತುತ ಸಂಕಲನದ ಮುಖ್ಯ ಉದ್ದೇಶವಾಗಿದೆ. ವಚನಗಳ ಹೊಸ ಓದುವಿಕೆಗೆ ಅವಕಾಶ ದೊರೆತೀತು ಎಂಬ ಹಂಬಲ ಈ ಸಂಕಲನದ ಹಿಂದಿದೆ.

ಹನ್ನೆರಡನೆಯ ಶತಮಾನದಲ್ಲಿ ವಚನಗಳು ರಚನೆಗೊಂಡ ಸುಮಾರು ೨೫-೩೦ ವರ್ಷಗಳ ಕಾಲಾವಧಿಯು ತೀವ್ರವಾದ ಸ್ಥಿತ್ಯಂತರಗಳ ಅವಧಿಯಾಗಿತ್ತೆಂದು ಇಂದು ತಿಳಿದಿದ್ದೇವೆ. ಲೋಕ ದೃಷ್ಟಿ, ಲೋಕಾನುಭವ ಮಂಡನೆಯ ಸ್ವರೂಪ ಇವೆಲ್ಲವೂ ಬದಲಾದ ಅವಧಿ ಅದು. ನಗರೀಕರಣದ ಪರಿಣಾಮವಾಗಿ ಕಸುಬುಗಳಿಗೆ, ಕಸುಬುದಾರರಿಗೆ ದೊರೆತ ಪ್ರಾಮುಖ್ಯ, ಮಹಿಳೆಯರೂ ಸೇರಿದಂತೆ ವಿವಿಧ ಕಸುಬುಗಳ ಜನ ತಮ್ಮ ಅನುಭವದ ಹಿನ್ನೆಲೆಯಲ್ಲೇ ವಿಚಾರಗಳನ್ನು ಮಂಡಿಸುವುದಕ್ಕೆ ದೊರೆತ ಸ್ವಾತಂತ್ರ್ಯ, ಆಧ್ಯಾತ್ಮಿಕ ಸಮಾನತೆಯ ಆದರ್ಶ ಇವುಗಳಿಂದಾಗಿ ವೈವಿಧ್ಯ ಮತ್ತು ವೈರುಧ್ಯಮಯ ವಚನ ಪಠ್ಯಗಳು ಸೃಷ್ಟಿಯಾದವು. ಇಷ್ಟದೈವದ ಕಲ್ಪನೆಗೆ ದೊರೆತ ಪ್ರಾಮುಖ್ಯ, ವೈಯಕ್ತಿಕ ಅನುಭವವೇ ಅಥವ ವೈಯಕ್ತಿಕ ಅನುಭವವೂ ಪ್ರಮಾಣ ಎಂಬ ದೃಢವಿಶ್ವಾಸ ಇವು ವಚನಗಳ ಹಿನ್ನೆಲೆಯಲ್ಲಿವೆ.

ಈ ವಚನ ಪಠ್ಯಗಳು ತತ್ಕಾಲೀನ ಅಗತ್ಯಗಳಿಗಾಗಿ ರೂಪುಗೊಂಡ ರಚನೆಗಳು, ನಿಜ. ಆದರೆ ವೈಯಕ್ತಿಕ ಅನುಭವ ಪ್ರಮಾಣವನ್ನು ಒಳಗೊಂಡಿರುವುದರಿಂದ ಮತ್ತು ಮನುಷ್ಯ ಅಸ್ತಿತ್ವದ, ಮನುಷ್ಯ ಮನಸ್ಸಿನ ಮೂಲಭೂತ ವಿಚಾರಗಳ ಮಂಡನೆಯ

ಕಾರಣದಿಂದ ವಚನಗಳಿಗೆ ಕಾಲಾತೀತ ಗುಣಗಳೂ ಪ್ರಾಪ್ತವಾಗಿವೆ. ಅಂದರೆ, ವಚನ ಪಠ್ಯಗಳೊಡನೆ ನಡೆಸುವ ಸಂವಾದದಿಂದ ಅವುಗಳನ್ನು ಸಮಕಾಲೀನಗೊಳಿಸಿಕೊಳ್ಳಲು ಸಾಧ್ಯವಿದೆ. ಸಮಕಾಲೀನಗೊಳಿಸಿಕೊಳ್ಳುವುದೆಂದರೆ ವಚನ ಪಠ್ಯಗಳಲ್ಲಿನ ವಿಚಾರಗಳನ್ನು ಸಾರ್ವಕಾಲಿಕ ಸತ್ಯವೆಂದೇ ಒಪ್ಪಿಕೊಳ್ಳಬೇಕೆಂದು ಅರ್ಥವಲ್ಲ. ವಚನಕಾರರ ನಡುವೆಯೇ ನಡೆದಂಥ ಸಂವಾದವನ್ನು ನಾವೂ ನಡೆಸುವುದು ಅಗತ್ಯವೆಂದಷ್ಟೇ ಅರ್ಥ. ಆದರೆ, ಕನ್ನಡದಂಥ ಪ್ರಾದೇಶಿಕ ಭಾಷೆಗಳಲ್ಲಿ ರೂಪುಗೊಳ್ಳುತ್ತಿದ್ದ ವೈಚಾರಿಕತೆ ಹತ್ತೊಂಬತ್ತನೆಯ ಶತಮಾನದ ವೇಳೆಗೆ ತುಂಡುಗಡೆದು ಹೋದದ್ದು ಚಾರಿತ್ರಿಕ ಸಂಗತಿ. ಕನ್ನಡದಂಥ ಭಾಷೆಗಳು ಇಂದು ಪಡೆದುಕೊಂಡಿರುವ ಪಾಶ್ಚಾತ್ಯ ತಿಳಿವಳಿಕೆಯ ಹಿನ್ನೆಲೆಯನ್ನು ಇಲ್ಲವಾಗಿಸಿಕೊಳ್ಳುವುದು ಅಸಾಧ್ಯ. ಆದರೆ, ಸ್ವೀಕೃತ ಪಾಶ್ಚಾತ್ಯ ವೈಚಾರಿಕ ತಿಳಿವಳಿಕೆಗೆ ವಚನ ಪಠ್ಯಗಳನ್ನು ಹೊಂದಿಸಿಕೊಳ್ಳುವುದೋ, ಪಾಶ್ಚಾತ್ಯರು ಇಂದು ಹೇಳುತ್ತಿರುವ ಸಂಗತಿ ಅಂದೇ ಕನ್ನಡದಲ್ಲಿ ವ್ಯಕ್ತವಾಗಿದೆ ಎಂದು ಒಣ ಹೆಮ್ಮೆಪಟ್ಟುಕೊಳ್ಳುವುದೋ, ಎರಡೂ ಸರಿಯಾದ ದಾರಿಗಳಲ್ಲ. ಲಭ್ಯವಿರುವ ವಚನ ಪಠ್ಯಗಳ ಮೂಲಕವೇ ಕನ್ನಡದ ವೈಚಾರಿಕತೆಯ ರೂಪು-ರೇಖೆಗಳನ್ನು ಗುರುತಿಸಿಕೊಳ್ಳುವುದು ದೊಡ್ಡ ಬೌದ್ಧಿಕ ಸಾಹಸವೇ ಆಗುತ್ತದೆ.

ಸುಮಾರು ಸಾವಿರ ವರ್ಷಗಳಷ್ಟು ಕಾಲ ಕನ್ನಡದ ಜನ ಸಮುದಾಯ ಈ ರಚನೆಗಳನ್ನು ಕಾಪಾಡಿಕೊಂಡು ಬಂದಿದೆ. ಹಾಗೆ ಕಾಪಾಡಿಕೊಂಡು ತಲೆಮಾರಿನಿಂದ ತಲೆಮಾರಿಗೆ ದಾಟಿಸಿಕೊಂಡು ಬರುವುದಕ್ಕೆ ಬೇರೆ ಬೇರೆ ಕಾರಣಗಳು ಇವೆ. ವಚನಗಳನ್ನು ಧರ್ಮ ಪ್ರತಿಪಾದನೆಯೆಂದು, ಶಾಸ್ತ್ರ ನಿರೂಪಣೆಯೆಂದು, ಕಾವ್ಯಾತ್ಮಕವೆಂದು, ಸಾಮಾಜಿಕ ಹೋರಾಟದ ಭಾಷಿಕ ಪ್ರತಿಫಲನವೆಂದು, ಅಧ್ಯಾತ್ಮ ಸಾಧನೆಯ ತೋರು ಕುರುಹುಗಳೆಂದು, ವೈಯಕ್ತಿಕ ತೊಳಲಾಟ ಹುಡುಕಾಟಗಳ ದಾಖಲೆಗಳೆಂದು, ಚಾರಿತ್ರಿಕ ಆಕರಗಳೆಂದು, ಇತ್ಯಾದಿಯಾಗಿ ತಮತಮಗೆ ಮುಖ್ಯವೆಂದು ತೋರುವ ಕಾರಣಕ್ಕೆ ವಚನಗಳನ್ನು ಗಮನಿಸಬೇಕೆಂದು ಬಯಸುವ ಮನಸ್ಸುಗಳು ವಚನಗಳನ್ನು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಸಂಗ್ರಹಿಸಿ ನಮ್ಮ ಕಾಲದವರೆಗೆ ತಲುಪಿಸಿದ್ದಾರೆ.

ನಮ್ಮ ಕಾಲದವರೆಗೆ ಸಾಗಿ ಬಂದಿರುವ ವಚನ ಪಠ್ಯಗಳೆಲ್ಲ 'ಸಂಗ್ರಹ'ಗಳ ಮೂಲಕವೇ ಒದಗಿ ಬಂದಿವೆ ಎಂಬುದು ಮುಖ್ಯವಾದ ಸಂಗತಿಯಾಗಿ ತೋರುತ್ತದೆ. ಸಂಗ್ರಹದ ಕಲ್ಪನೆಯೇ ವಿಚಿತ್ರವಾದ ವಿರೋಧಾಭಾಸವನ್ನು ಹೊಂದಿದೆ. ಪ್ರಾಚೀನ ಕಾಲದ ಸಂಗ್ರಹಗಳು ಅನೇಕ ಪಠ್ಯಗಳನ್ನು ಉಳಿಸಿ ಕಾಪಾಡಿದಂತೆಯೇ ಅಸಂಖ್ಯ ಪಠ್ಯಗಳು ಕಣ್ಮರೆಯಾಗಲೂ ಕಾರಣವಾಗಿವೆ. ಸಂಗ್ರಹದ ಉದ್ದೇಶವೇ ಸಂಗ್ರಹದೊಳಗೆ ಸೇರುವ ಮತ್ತು ಸೇರದಿರುವ ವಚನಗಳು ಯಾವುವು ಎಂದು ನಿರ್ಧರಿಸುತ್ತದೆಯಷ್ಟೆ. ಷಟ್‌ಸ್ಥಲ, ಸ್ತೋತ್ರ, ಬೆಡಗು, ಶಾಸ್ತ್ರ, ಆಚರಣೆ ಇಂಥ ಸ್ಥಲಕಟ್ಟುಗಳ ಹೆಸರೇ ವಚನ ಸಂಗ್ರಹಗಳ ಹಿಂದಿನ ಉದ್ದೇಶವನ್ನೂ ಸೂಚಿಸುತ್ತವೆ. ಹೀಗೆ ತಮ್ಮ ತಮ್ಮ ಉದ್ದೇಶಕ್ಕೆ ಹೊಂದಿಕೆಯಾಗದೆಂದು 'ಸಂಗ್ರಹಿಸದೆ' ಬಿಟ್ಟು ಬಿಟ್ಟ ವಚನಗಳು ಕಣ್ಮರೆಯಾಗಿ ಹೋದವೆಂದು ಊಹಿಸಬಹುದು.

ವಚನ ಪಠ್ಯಗಳ ಅರ್ಥವಂತಿಕೆಗೂ ವಚನ ಸಂಗ್ರಹ ಮತ್ತು ಜೋಡಣೆಗಳು ಎಷ್ಟರಮಟ್ಟಿಗೆ ಕಾರಣವೆಂಬ ಪ್ರಶ್ನೆ ಕುತೂಹಲವನ್ನು ಹುಟ್ಟಿಸುತ್ತದೆ. ಸಂಗ್ರಹ ಮತ್ತು ಜೋಡಣಾ ಕ್ರಮಗಳು ವಚನಗಳ ಅರ್ಥವಂತಿಕೆಯ ಚೌಕಟ್ಟನ್ನು ನಿರ್ಮಿಸಿಬಿಡುತ್ತವೆ. ಶೂನ್ಯಸಂಪಾದನೆಗಳು ನಿರ್ದಿಷ್ಟ ವಿಚಾರಧಾರೆಯನ್ನು ಸಮರ್ಥಿಲು ನಾಟಕೀಯ ಸನ್ನಿವೇಶ ಮತ್ತು ಕಥನಗಳ ಚೌಕಟ್ಟಿನೊಳಗೆ ವಚನಗಳನ್ನು ಜೋಡಿಸಿ ಸಂಗ್ರಹಿಸಿದ್ದರ ಪರಿಣಾಮವಾಗಿಯೇ ನಾವು ಇಂದು ಅಲ್ಲಮ-ಸಿದ್ಧರಾಮ, ಅಲ್ಲಮ-ಮುಕ್ತಾಯಕ್ಕ ಇತ್ಯಾದಿ ಸಂದರ್ಭ ಸಂವಾದಗಳನ್ನು ಚಾರಿತ್ರಿಕ ಸತ್ಯಗಳೋ ಎಂಬಂತೆಯೇ ಗ್ರಹಿಸಲು ತೊಡಗಿದ್ದೇವೆ. ಅದರಂತೆಯೇ ಷಟ್‌ಸ್ಥಲಾನುಗುಣ ಸಂಪಾದನೆ ಇತ್ಯಾದಿಗಳು ಕೂಡ ವಚನ ಪಠ್ಯಗಳ ಅರ್ಥವಂತಿಕೆಯ ಸೀಮೆಯನ್ನು ನಿರ್ಧರಿಸುತ್ತವೆ. ಅಥವ ವ್ಯಾಖ್ಯಾನವೇ ಅರ್ಥವಾಗಿ ಪರಿವರ್ತನೆಯಾಗುವ ಬಗೆಯನ್ನು ಈ ಎಲ್ಲ ಸಂಗ್ರಹಗಳಲ್ಲಿ ಕಾಣುತ್ತೇವೆ. ಬಹುಮುಖಿಯಾದ, ವೈವಿಧ್ಯ ಮತ್ತು ವೈರುಧ್ಯಗಳಿಂದ ಕೂಡಿರುವ ವಚನ ಪಠ್ಯಗಳನ್ನು ಒಟ್ಟಾರೆಯಾಗಿ ಏಕಾರ್ಥದ, ಏಕರೂಪದ ವಾಙ್ಮಯವಾಗಿ ಮಂಡಿಸುವ ಕಾರ್ಯವನ್ನು ಪ್ರಾಚೀನ ಸಂಗ್ರಹಗಳು ಮಾಡಿದವೆಂದು ಹೇಳಲು ಸಾಧ್ಯವಿದೆ.

ಇಪ್ಪತ್ತನೆಯ ಶತಮಾನದ ಮೊದಲು ಆಯ್ದ ವಚನಗಳಿಗೆ ವ್ಯಾಖ್ಯಾನವನ್ನು, ಟೀಕುಗಳನ್ನು ಬರೆಯುವ ಸಂಪ್ರದಾಯವಿತ್ತು. ಸಾಮಾನ್ಯವಾಗಿ ಈ ಟೀಕು ಮತ್ತು ವ್ಯಾಖ್ಯಾನಗಳು ವೀರಶೈವ ಧರ್ಮದ ಕಲ್ಪಿತ, ಅಂಗೀಕೃತ ನಂಬಿಕೆ, ಧೋರಣೆ, ಪರಿಕಲ್ಪನೆಗಳು ಬಿಡಿ ವಚನಗಳಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದನ್ನು ಪ್ರತಿಪಾದಿಸುವ ಆಸಕ್ತಿಯನ್ನು ಹೊಂದಿದ್ದವು. ಇಪ್ಪತ್ತನೆಯ ಶತಮಾನದಲ್ಲಿ ವೀರಶೈವ ಧರ್ಮಶಾಸ್ತ್ರ ನಿರ್ಣಯದ ಆಕರಗಳೆಂದು, ವಿಶಾಲ ಹಿಂದೂ ಧರ್ಮದ ಮುಖ್ಯ ಆಸಕ್ತಿಗಳನ್ನೆ ಕನ್ನಡದಲ್ಲಿ ವ್ಯಕ್ತಪಡಿಸುವ ಪಠ್ಯಗಳೆಂದು, ನವೋದಯ ಮತ್ತು ನವ್ಯ ಸಾಹಿತ್ಯ ಚಿಂತನೆಗಳು ಒಪ್ಪಿಕೊಂಡಿದ್ದ ಕಾವ್ಯಸ್ವರೂಪದ ಉತ್ತಮ ನಿದರ್ಶನಗಳೆಂದು, ಸಾಮಾಜಿಕ ಅಸಮಾನತೆ ಮತ್ತು ಜಾತಿ ವಿನಾಶ ಹೋರಾಟಗಳಿಗೆ ಸ್ಫೂರ್ತಿ ತುಂಬುವ ಪ್ರಾಚೀನ ಪಠ್ಯಗಳೆಂದು, ಹೀಗೆ ಮುಖ್ಯವಾಗಿ ನಾಲ್ಕು ಬಗೆಯಲ್ಲಿ ವಚನಗಳನ್ನು ಗಮನಿಸಲಾಗಿದೆ. ಐದನೆಯ ಇನ್ನೊಂದು ಬಗೆಯೆಂದರೆ ನಿರ್ದಿಷ್ಟ ವಚನಕಾರರ ಪಠ್ಯಗಳನ್ನು ಸಂಪಾದಿಸಿ ಪ್ರಕಟಿಸುವ ಬಗೆ. ಇಂಥ ಸಂಪಾದನೆಗಳಲ್ಲಿ ವಚನಗಳು 'ನಿದರ್ಶನ' ಮಾತ್ರವಾಗಿರುತ್ತವೆ, ಅವುಗಳ ಹಿಂದಿರುವ ವಿಚಾರ, ತಾತ್ವಿಕತೆಗಳೇ ನಿದರ್ಶನ' ಅಥವಾ 'ಪ್ರಧಾನ' ಸತ್ಯಗಳಾಗಿರುತ್ತವೆ. ರೂಢಿಯಾಗಿರುವ ಸಂಗ್ರಹ ಪದ್ಧತಿ ಮತ್ತು ಜೋಡಣಾ ಕ್ರಮಗಳನ್ನು ಕೈಬಿಟ್ಟು ವಚನಗಳನ್ನು ಓದುಗರೆದುರು ಮಂಡಿಸಲು ಸಾಧ್ಯವೇ ಎಂಬುದು ಈ ಸಂಗ್ರಹವನ್ನು ರೂಪಿಸುವುದಕ್ಕೆ ಪ್ರೇರಣೆಯನ್ನು ನೀಡಿರುವ ವಿಚಾರ.

ವಿಚಾರ ಹೀಗಿದ್ದರೂ ಸಂಪೂರ್ಣವಾಗಿ ವ್ಯಾಖ್ಯಾನಮುಕ್ತವಾದ ಸಂಗ್ರಹವಿರಲು ಸಾಧ್ಯವೇ ಇಲ್ಲ. ಸಂಗ್ರಹವು ಆಯ್ಕೆಯನ್ನು ಆಧರಿಸಿಯೇ ನಡೆಯುವುದರಿಂದ ಆಯ್ಕೆ

ಮತ್ತು ನಿರಾಕರಣೆಗಳೇ ಸಂಪಾದಕರ ವ್ಯಾಖ್ಯಾನವೂ ಆಗುತ್ತದೆಯಲ್ಲವೇ? ಅಷ್ಟರಮಟ್ಟಿಗೆ ವ್ಯಾಖ್ಯಾನ ಸಾಧ್ಯತೆಯನ್ನು ಒಪ್ಪಿಕೊಳ್ಳಲೇಬೇಕು. ನಮ್ಮ ಸಮಕಾಲೀನ ಪ್ರಶ್ನೆ ಕಾಳಜಿಗಳಿಗೆ ಪ್ರತಿಧ್ವನಿಯಂತಿರುವ ವಚನಗಳಿಗೆ ಪ್ರಾಮುಖ್ಯ ನೀಡಬೇಕು, ಅಭಿವ್ಯಕ್ತಿಯ ತೀವ್ರತೆಗೆ ಮೊದಲ ಮನ್ನಣೆ ಇರಬೇಕು, ವಚನ ಪಠ್ಯಗಳ ವೈವಿಧ್ಯ ಓದುಗರ ಗಮನಕ್ಕೆ ಬರುವಂತಿರಬೇಕು, ಸಾಧ್ಯವಾದಷ್ಟೂ ಹೆಚ್ಚಿನ ಸಂಖ್ಯೆಯ ವಚನಕಾರರ ರಚನೆಗಳು ಸೇರ್ಪಡೆಯಾಗಬೇಕು; ಆಚರಣೆ, ಮತ ಪ್ರತಿಪಾದನೆ, ಶಾಸ್ತ್ರವಿಚಾರ ಚರ್ಚೆ, ಯೋಗ, ದರ್ಶನ, ಅನುಭಾವ ಇತ್ಯಾದಿ ವಿಷಯಗಳ ಬಗ್ಗೆ ಬೋಧನೆ, ಇಂಥ ಸಂಗತಿಗಳಿಗೆ ಪ್ರಾಮುಖ್ಯ ನೀಡಿರುವ ವಚನಗಳನ್ನು ಕೈಬಿಡಬೇಕೆಂಬುದು ಪ್ರಸ್ತುತ ಸಂಗ್ರಹದ ಹಿಂದಿನ ಕಾಳಜಿ.

ವಚನಗಳನ್ನು ಆಯ್ಕೆ ಮಾಡಿದ ನಂತರ ಅವನ್ನು ಜೋಡಿಸಿಕೊಡುವುದು ಹೇಗೆ ಎಂಬ ಪ್ರಶ್ನೆ ಎದುರಾಗುತ್ತದೆ. ಒಂದು ಸಾಧ್ಯತೆಯೆಂದರೆ ವಿವಿಧ ವಿಷಯಗಳ ಬಗ್ಗೆ ಭಿನ್ನ ನಿಲುವುಗಳನ್ನು, ವಿವರಗಳನ್ನು ಒಳಗೊಂಡ ವಚನಗಳನ್ನು ಒಂದೊಂದೆಡೆಯಲ್ಲಿ ಜೋಡಿಸುವುದು. ನಿದರ್ಶನಕ್ಕೆ ಕುರುಹು ಅಗತ್ಯ ಮತ್ತು ಅನಗತ್ಯ ಎಂಬ ಧೋರಣೆಯ ವಚನಗಳನ್ನು ಒಟ್ಟಿಗೆ ಇಡುವುದರಿಂದ ವಚನಲೋಕದ ವಿಚಾರ ವೈವಿಧ್ಯ ಸ್ಪಷ್ಟವಾಗಬಹುದು. ಆದರೆ ಈ ಬಗೆಯ ಕ್ರಮವು ನಿಜವಾಗಿ ಶೂನ್ಯಸಂಪಾದನೆಯ ಜೋಡಣೆಯ ಕ್ರಮವೇ ಆಗಿದೆ. ಇದನ್ನೇ ಶ್ರೀ ಸಂ.ಶಿ. ಭೂಸನೂರುಮಠ ಅವರ ಸಂಪಾದನೆಯು ಪರಿಷ್ಕೃತ ರೂಪದಲ್ಲಿ ಅಳವಡಿಸಿಕೊಂಡಿದೆ.

ವಚನಕಾರರನ್ನು ಮತ್ತು ವಿಷಯಗಳನ್ನು ಗಮನದಲ್ಲಿರಿಸಿಕೊಂಡು ಪ್ರತಿಯೊಂದು ವಿಭಾಗದಲ್ಲೂ ಆಯ್ದ ವಚನಕಾರರನ್ನು ಅದೇ ಕ್ರಮದಲ್ಲಿ ನೀಡುವುದು ಇನ್ನೊಂದು ಸಾಧ್ಯತೆ. ಆದರೆ ಈ ಕ್ರಮವು ಬಸವೇಶ್ವರರ ಷಟ್‌ಸ್ಥಲ ವಚನಗಳು ಮೊದಲಾಗಿ ವಿವಿಧ ವಚನಕಾರರ ಪ್ರತ್ಯೇಕ ಸಂಕಲನಗಳ ಮಾದರಿಯದೇ ಇನ್ನೊಂದು ರೂಪವಾಗುತ್ತದೆ.

ನಾನು, ನೀನು, ಅದು, ಅವರು, ಎಂಬಂತೆ ವಚನದ ಸಂಬೋಧನಾ ವಿಷಯ/ ಕೇಳುಗರನ್ನು ಅನುಸರಿಸಿ ವಿಭಾಗಕ್ರಮವನ್ನು ರೂಪಿಸುವುದು ಸಾಧ್ಯವಿದ್ದರೂ ಅದರ ಉಪಯುಕ್ತತೆ ತೀರ ಸೀಮಿತವಾದದ್ದಾಗುತ್ತದೆ. ನೆನಪು, ಅರಿವು, ಕುರುಹು, ಮಾಯೆ, ಶರಣ-ವ್ಯಕ್ತಿತ್ವ, ಸ್ಥಾವರ-ಜಂಗಮ, ಕಾಯ-ಮನಸ್ಸು, ಶೀಲ-ಆಚಾರ, ವ್ಯಕ್ತಿ-ವ್ಯಕ್ತಿ ಸಂಬಂಧ ಭಾಷೆ, ಕಾಲ, ಸಮಾನತೆ-ಸಮಾಧಾನ (ಮೇಲು-ಕೀಳು), ಬಯಲು, ಅನುಭಾವ, ಹೆಣ್ಣು, ಅಂತರಂಗ-ಬಹಿರಂಗ, ಇತ್ಯಾದಿಯಾಗಿ ಪ್ರಮುಖ ಪರಿಕಲ್ಪನೆಗಳನ್ನು ಗುರುತಿಸಿ ದ್ವಂದ್ವಾತ್ಮಕ ಚಿಂತನೆಗಳನ್ನು ಕುರಿತು ಒಂದು ಸಮಗ್ರ ನೋಟ ನೀಡುವಂಥ ಜೋಡಣೆಯನ್ನೂ ಮಾಡಬಹುದು. ಆದರೆ ಈ ಎಲ್ಲ ಜೋಡಣೆಗಳಲ್ಲೂ ಸಂಪಾದಕರ ಮಧ್ಯಪ್ರವೇಶ ಮತ್ತು ವ್ಯಾಖ್ಯಾನಗಳು, ಅರ್ಥ ನಿರ್ಧಾರಗಳು ಮುನ್ನೆಲೆಗೆ ಬಂದು ನಿಲ್ಲುತ್ತವೆಯೇ ಹೊರತು ವಚನಗಳನ್ನು ಓದುಗರು ತಮಗೆ ಬೇಕಾದಂತೆ ಸ್ವೀಕರಿಸುವ ಸ್ವಾತಂತ್ರ್ಯ ಇರುವುದಿಲ್ಲ.

ಪ್ರಸ್ತುತ ಸಂಕಲನಕ್ಕಾಗಿ ಆಯ್ದ ವಚನಗಳನ್ನು ಜೋಡಿಸುವ ಕ್ರಮ ಯಾವುದಿರಬೇಕು ಎಂಬ ಪ್ರಶ್ನೆಗೆ ಎರಡು ಅಂಶಗಳು ಮಾರ್ಗದರ್ಶನ ಮಾಡಿದವು. ಮೊದಲನೆಯದು ವಚನಗಳು ಸೃಷ್ಟಿಯಾದ ಪರಿಸರದ ವಾಸ್ತವ, ಇನ್ನೊಂದು ಓದುಗರ ಮನಸ್ಸಿನಲ್ಲಿ ಅರ್ಥನಿರ್ಮಾಣವಾಗುವ ವಿಧಾನ. ವಚನಗಳ ಪರಿಚಯವಿರುವ ಓದುಗರು ತಿಳಿದಿರುವಂತೆ ಈ ಎಲ್ಲ ರಚನೆಗಳೂ ಸಂವಾದಗಳೇ ಆಗಿವೆ. ವಿವಿಧ ಮನೋಧರ್ಮ, ವೃತ್ತಿ, ಹಿನ್ನೆಲೆಗಳಿಂದ ಬಂದ ಮನಸ್ಸುಗಳು ಬದುಕನ್ನು ಕುರಿತು ನಡೆಸಿದ ಸಂವಾದಗಳೇ ವಚನಗಳು. ಸಂವಾದದ ಮುಕ್ತತೆ ಪ್ರತಿಫಲಿತವಾಗುವಂತೆ ಸಂಗ್ರಹದ ಜೋಡಣೆ ಇರಬೇಕೆನ್ನುವ ಆಶಯದೊಂದಿಗೆ ಈ ಸಂಕಲನ ರೂಪುಗೊಂಡಿದೆ. ಹತ್ತು ಜನ ಸೇರಿ ನಡೆಸುವ ಮಾತುಕತೆಯಲ್ಲಿ ವಿಚಾರ ಭೃಂಗಗತಿಯಲ್ಲಿ ವಿಸ್ತರಿಸುವುದನ್ನು ನಾವೆಲ್ಲರೂ ಗಮನಿಸಿರುತ್ತೇವಲ್ಲವೇ? ಮಾತನಾಡುವವರು, ಅದು ನಿಜವಾದ ಸಂವಾದವಾಗಿದ್ದರೆ, ಹಿರಿತನ-ಕಿರಿತನಗಳ ಕ್ರಮವನ್ನೇನೂ ಅನುಸರಿಸದೆ ತಮ್ಮ ಭಾವ, ವಿಚಾರಗಳನ್ನು ವ್ಯಕ್ತಪಡಿಸುತ್ತಾರಷ್ಟೇ? ವಚನ ಸಂವಾದದ ವಾಸ್ತವವೂ ಹೀಗೆಯೇ ಇದ್ದಿರಬೇಕು. ಆನಂತರದ ಕಾಲದಲ್ಲಿ ಒಂದೊಂದು ಉಕ್ತಿಗೂ ಸಂದರ್ಭವನ್ನು ಕಲ್ಪಿಸಿ ಸಂವಾದಕ್ಕೆ ಚೌಕಟ್ಟು ಒದಗಿಸುವ ಪ್ರಯತ್ನಗಳು ನಡೆದವು. ಕಾಲ ಸಂದಂತೆ ಚೌಕಟ್ಟೇ ಮುಖ್ಯವಾಗಿ ಅದರೊಳಗಿನ ಚಿತ್ರದ ಪ್ರಾಮುಖ್ಯ ಕಳೆದುಹೋಯಿತು. ಆದುದರಿಂದ ಎಲ್ಲ ವಚನಗಳನ್ನೂ ಮೊದಲ ಸಾಲುಗಳ ಅಕಾರಾದಿಯಲ್ಲಿ ಜೋಡಿಸುವುದರಿಂದ ವಾಸ್ತವ ಸಂವಾದದ ಮುಕ್ತತೆಯನ್ನು ಮತ್ತೆ ಮುನ್ನೆಲೆಗೆ ತರಬಹುದೆಂಬ ಅಭಿಪ್ರಾಯದಲ್ಲಿ ಈಗಿನ ಜೋಡಣೆಯ ಕ್ರಮವನ್ನು ಅನುಸರಿಸಲಾಗಿದೆ. ವಚನ ರಚನೆಗಳಲ್ಲಿ ಮೊದಲ ಸಾಲು, ಕೆಲವೊಮ್ಮೆ ಮೊದಲ ಪದ, ಇಡೀ ವಚನದ ಪ್ರಮುಖ ಆಶಯಗಳಲ್ಲಿ ಒಂದನ್ನು ಸೂಚಿಸುವಂತಿರುತ್ತದೆ. ಆದುದರಿಂದಲೇ ಮೊದಲ ಸಾಲುಗಳ ಅಕಾರಾದಿ ಜೋಡಣೆ ನಿರ್ದಿಷ್ಟ ವಿಷಯವನ್ನು ಕುರಿತ ಹಲವು ಮನಸ್ಸುಗಳ ಸಂವಾದವನ್ನು ಮಂಡಿಸುವ ಸಾಧ್ಯತೆಯನ್ನು ಹೊಂದಿರುತ್ತದೆ. ಉದಾಹರಣೆಗೆ 'ನೋಡು' 'ಕಳವು' 'ನಾನು' ಮೊದಲಾದ ಪದಗಳಿಂದ ಆರಂಭವಾಗುವ ವಚನಗಳೆಲ್ಲ ಒಂದೆಡೆಯಲ್ಲಿ ಸಂಗ್ರಹಗೊಳ್ಳುವುದರಿಂದ ಆಯಾ ವಿಚಾರಗಳನ್ನು ಕುರಿತು ಹಲವು ಮನಸ್ಸುಗಳ ವಿಚಾರವೆಲ್ಲ ಒಂದೆಡೆಯಲ್ಲಿ ಸಂವಾದವಾಗಿ ದೊರೆಯುತ್ತದೆ. ವಚನಕಾರರು ಎಷ್ಟೆಂದರೂ ತಮ್ಮ ವ್ಯಕ್ತಿತ್ವವನ್ನು ಬಯಲಾಗಿಸುವ ಆದರ್ಶವನ್ನು ಹೊಂದಿದ್ದವರು. ವಚನಕಾರರಿಗೆ ಪ್ರಾಮುಖ್ಯ ನೀಡಿ ಜೋಡಿಸುವುದಕ್ಕಿಂತ ವಚನಗಳನ್ನೇ ಮುನ್ನೆಲೆಗೆ ತರುವುದಕ್ಕೆ ಸಹಾಯವಾಗುವುದೆಂದು ಈಗಿನ ಕ್ರಮವನ್ನು ಆರಿಸಿಕೊಂಡದ್ದಾಗಿದೆ. ವಚನಕಾರರು ಮುಖ್ಯವಾದರೂ ಅವರಿಗಿಂತ ವಚನಗಳು ಮುಖ್ಯ.

ಇನ್ನು ಓದುಗರ ಮನಸ್ಸಿನಲ್ಲಿ ಅರ್ಥ ನಿರ್ಮಾಣವಾಗುವ ವಿಧಾನ. ನಮ್ಮ ನಮ್ಮ ಮನಸ್ಸುಗಳನ್ನೇ ನೋಡಿಕೊಂಡರೆ ನಾವು ಓದುವ ವಿಷಯ ಇತರ ಹಲವು ಹತ್ತು ಸಂಗತಿಗಳೊಡನೆ ಬೆರೆತು ತನ್ನದೇ ಅರ್ಥವಂತಿಕೆಯನ್ನು ಸೃಷ್ಟಿಸಿಕೊಳ್ಳುವುದು ಗಮನಕ್ಕೆ

ಬರುತ್ತದೆ. ವಚನಗಳಂಥ ರಚನೆಗಳಂತೂ ಬಿಡಿ ಬಿಡಿಯಾಗಿಯೂ ಅರ್ಥಪೂರ್ಣವೇ ಆಗಿವೆ. ಪರಿಚಿತವಾದ ಸಂಗ್ರಹ ಮತ್ತು ಜೋಡಣೆಯ ವಿಧಾನಗಳನ್ನು ಕೈಬಿಟ್ಟು ಮುಕ್ತಸಂವಾದ ರೂಪದಲ್ಲಿ ಜೋಡಣೆಗೊಂಡಿರುವ ಈ ವಚನಗಳನ್ನು ಓದುತ್ತ ಓದುಗರ ಮನಸ್ಸಿನಲ್ಲಿ ವಚನಗಳ ನಡುವೆ ಹೊಸಬಗೆಯ ಸಂಬಂಧಗಳು ಕಲ್ಪಿತಗೊಳ್ಳುವ ಅವಕಾಶವಿರುತ್ತದೆ. ವಚನಗಳ ಅರ್ಥವಂತಿಕೆಯ ನಿರ್ಣಯದ ಜವಾಬ್ದಾರಿಯನ್ನು ಸಂಗ್ರಾಹಕ ಸಂಪಾದಕರ ಬದಲಾಗಿ ಓದುಗರಿಗೆ ಮರಳಿ ದೊರೆಯುವಂತೆ ಮಾಡುವುದು ನಮ್ಮ ಕಾಲದ ಆದರ್ಶಕ್ಕೆ ತಕ್ಕುದಾಗಿಯೇ ಇದೆ.

ಇಷ್ಟಾಗಿಯೂ ಮೊದಲ ಸಾಲುಗಳ ಅಕಾರಾದಿಯಲ್ಲಿ ಜೋಡಿಸುವುದು ಕೂಡ, ಇತರ ಕ್ರಮಗಳಿಗೆ ಹೋಲಿಸಿದರೆ ನಿರ್ಲಿಪ್ತವಾಗಿರಬಹುದಾದರೂ, ಒಂದು ಕ್ರಮವೇ ಆಗಿದೆ. ಮರಳಿ ಮರಳಿ ಯಾವುದೇ ವಚನವನ್ನು ಓದಬೇಕೆಂದು ಬಯಸಿದರೆ ಅದು ಸುಲಭವಾಗಿ ದೊರೆಯುವಂತಾಲಿ ಎಂಬ ಉದ್ದೇಶದಿಂದಲೇ ಅಕಾರಾದಿ ಕ್ರಮವನ್ನು ಆಯ್ದುಕೊಳ್ಳಲಾಗಿದೆ. ವಚನಕಾರರ ಮುಖಾಂತರ ವಚನಗಳನ್ನು ಪ್ರವೇಶಿಸಲು ಬಯಸುವ ಓದುಗರಿಗಾಗಿ ಪ್ರತ್ಯೇಕ ಅನುಬಂಧವಿದೆ.

ವಚನಗಳ ಇಂದಿನ ಓದುಗರು ಪಡೆದಿರಬಹುದಾದ ಭಾಷಾ ಸಿದ್ಧತೆಗಳ ಪರಿಮಿತಿಯನ್ನು ಗಮನದಲ್ಲಿರಿಸಿಕೊಂಡು ಸುಗಮ ಓದಿಗೆ ಸಹಾಯಕವಾಗುವ ಇನ್ನಿತರ ಅನುಬಂಧಗಳನ್ನೂ ಕೊನೆಯಲ್ಲಿ ನೀಡಲಾಗಿದೆ.

*

ವಚನ ವೈವಿಧ್ಯವನ್ನು ಮುನ್ನೆಲೆಗೆ ತರುವುದು ಈ ಸಂಕಲನದ ಪ್ರಮುಖ ಉದ್ದೇಶವಾಗಿದೆ. ವಚನಗಳನ್ನು ಅನುಭವಪ್ರಧಾನ, ವಿಚಾರಪ್ರಧಾನ ಎಂದು ಎರಡು ಬಗೆಗಳಲ್ಲಿ ಸ್ಥೂಲವಾಗಿ ವಿಂಗಡಿಸಿಕೊಳ್ಳಬಹುದು. ವಿಚಾರಪ್ರಧಾನ ವಚನಗಳಲ್ಲಿ ಪ್ರತಿಪಾದನೆಯ ವಚನಗಳು, ನಿರಾಕರಣೆಯ ವಚನಗಳು, ವಿವರಣೆಯ ವಚನಗಳು ಮತ್ತು ಆಚಾರ ವಚನಗಳು ಇವೆ. ಪ್ರತಿಪಾದನೆಯ ವಚನಗಳು ನಿರ್ದಿಷ್ಟ ನೀತಿ, ವರ್ತನೆ ಅಥವಾ ಮೌಲ್ಯಗಳ ಪರಿಕಲ್ಪನೆಯನ್ನು ಪ್ರತಿಪಾದಿಸುತ್ತವೆ. ನಿರಾಕರಣೆಯ ವಚನಗಳು ಅಂಗೀಕೃತವಾದ ನಿಲುವುಗಳನ್ನು, ಮೌಲ್ಯಗಳನ್ನು, ಅವು ವೈಯಕ್ತಿಕ ಅಥವಾ ಸಾಮೂಹಿಕ ಹಿತಕ್ಕೆ ಅನುಕೂಲಕರವಾಗಿಲ್ಲವೆಂದು ನಿರಾಕರಿಸುವ ಉದ್ದೇಶವನ್ನು ಹೊಂದಿರುತ್ತವೆ. ವಿವರಣೆಯ ವಚನಗಳು ವೈಯಕ್ತಿಕ ಮತ್ತು ಸಾಮೂಹಿಕ ಬದುಕಿನ ರೀತಿಯ ಬಗ್ಗೆ ಇರುವ ಪರಿಕಲ್ಪನೆಗಳ ಅರ್ಥವನ್ನು ವಿವರಿಸಿ, ಖಚಿತಗೊಳಿಸುವ ಉದ್ದೇಶವನ್ನು ಹೊಂದಿರುತ್ತವೆ. ಆಚಾರ ವಚನಗಳು ವೀರಶೈವ ತಾತ್ವಿಕತೆಯನ್ನು ಅಂಗೀಕರಿಸಿದ ಸಮೂಹವು ಹೇಗೆ ಮತ್ತು ಯಾವ ಬಗೆಯ ದೈನಿಕ ಆಚರಣೆ, ವೈಯಕ್ತಿಕ ಆಚರಣೆ ಮತ್ತು ಸಾಮೂಹಿಕ ಆಚರಣೆಗಳನ್ನು ಅಳವಡಿಸಿಕೊಳ್ಳಬೇಕೆಂಬುದನ್ನು ಹೇಳುವ ಉದ್ದೇಶವನ್ನು ಹೊಂದಿರುತ್ತವೆ.

ವಚನಗಳ ಉದ್ದೇಶಿತ ಕೇಳುಗರು ಕೂಡ ವೈವಿಧ್ಯಮಯವಾಗಿದ್ದಾರೆ. ತನಗೆ ತಾನೇ ಹೇಳಿಕೊಂಡ ವಚನ, ಇತರ ಶರಣರನ್ನು ಉದ್ದೇಶಿಸಿದ ವಚನ, ಶರಣರಲ್ಲದ ಅನ್ಯರನ್ನು ಉದ್ದೇಶಿಸಿದ ವಚನ, ತನ್ನ ಇಷ್ಟದೈವವನ್ನು ಉದ್ದೇಶಿಸಿದ ವಚನ, ಸಮಾನ ಅನುಭವಿಗಳನ್ನು ಉದ್ದೇಶಿಸಿದ ವಚನ, ಗಂಡು ತನ್ನನ್ನು ಹೆಣ್ಣೆಂದು ಪರಿಭಾವಿಸಿಕೊಂಡ ವಚನ, ಹೆಣ್ಣು ತನ್ನನ್ನು ಗಂಡೆಂದು ಪರಿಭಾವಿಸಿಕೊಂಡ ವಚನಗಳು ಕಾಣುತ್ತವೆ. ವಚನಗಳಲ್ಲಿ ಬಳಕೆಯಾಗಿರುವ ಸಂಬೋಧನ ಸೂಚಕಗಳನ್ನೇ ಗಮನಿಸಿದರೆ ಈ ವೈವಿಧ್ಯವು ಗಮನಕ್ಕೆ ಬರುತ್ತದೆ.

ವಚನಗಳು ವೈವಿಧ್ಯಮಯ ಎನ್ನುವ ಮಾತು ವಚನಗಳು ವ್ಯಕ್ತಪಡಿಸುವ ವೈಚಾರಿಕತೆಯನ್ನೂ ಒಳಗೊಳ್ಳುತ್ತದೆ. ವ್ಯಕ್ತಿಯ ಅಂತರಂಗ ಮತ್ತು ಸಮಾಜದ ಬಹಿರಂಗ ಇವುಗಳ ಸಮತೋಲನವನ್ನು ಸಾಧಿಸುವುದು ವಚನ ವೈಚಾರಿಕತೆಯ ಮುಖ್ಯ ಆಸಕ್ತಿಯಾಗಿದ್ದರೂ ನಮ್ಮ ಕಾಲದ ಆದರ್ಶಗಳ ಧ್ವನಿಯನ್ನೇ ವಚನಗಳಲ್ಲಿಯೂ ಕೇಳಲು ಬಯಸುವುದು ಸರಿಯಾಗುವುದಿಲ್ಲವೆಂದು ತೋರುತ್ತದೆ. ಸ್ತ್ರೀ ಸಮಾನತೆ ಮತ್ತು ಜಾತಿಯ ಪ್ರಶ್ನೆಗಳನ್ನು ಕುರಿತಂತೆ ವಚನ ಪಠ್ಯಗಳನ್ನು ವ್ಯಾಖ್ಯಾನಿಸುವಾಗ ಈ ಎಚ್ಚರ ಅಗತ್ಯವಾಗುತ್ತದೆ. ಆಧ್ಯಾತ್ಮಿಕದ ನೆಲೆಯಲ್ಲಿ ಗಂಡು–ಹೆಣ್ಣುಗಳೆಂಬ ಭೇದವಿಲ್ಲ ಎಂದು ಪ್ರತಿಪಾದಿಸಿದರೂ ವಚನಗಳು ಮುಖ್ಯವಾಗಿ ಪುರುಷಪ್ರಧಾನವಾದ ನೀತಿ ಕಲ್ಪನೆಯನ್ನೇ ಹೊಂದಿರುವ ಪಠ್ಯಗಳು. ವೇಶ್ಯೆಯನ್ನು ಕುರಿತು, ಗಂಡನ ಹಿರಿತನವನ್ನು ಒಪ್ಪದ ಹೆಂಡತಿಯನ್ನು ಕುರಿತು ವಚನಗಳು ವ್ಯಕ್ತಪಡಿಸುವ ಧೋರಣೆಗಳು ಇಂದಿನ ಚಿಂತನೆಗೆ ಅಷ್ಟು ಸೂಕ್ತವೆಂದು ತೋರುವುದಿಲ್ಲ. ವರ್ಣಾಶ್ರಮ ಪ್ರೇರಿತ ಮೇಲುಕೀಳುಗಳನ್ನು ನಿರಾಕರಿಸಿದರೂ ಶರಣರಲ್ಲದವರನ್ನು, ಭವಿಗಳನ್ನು, ಅನ್ಯ ದೈವಗಳನ್ನು ಕುರಿತು ಇರುವ ತಿರಸ್ಕಾರ ಮತ್ತು ರೋಷ ಸಾಕಷ್ಟು ದೊಡ್ಡ ಪ್ರಮಾಣದಲ್ಲೇ ವ್ಯಕ್ತವಾಗಿದೆ. ಅನ್ಯವೆಂಬುದು ಇಲ್ಲವಾಗಿ ತಾನೇ ಎಲ್ಲವೂ ಆಗುವ ಆಧ್ಯಾತ್ಮಿಕ ಸಾಧ್ಯತೆ ಮತ್ತು ಲೋಕ ವ್ಯವಹಾರದಲ್ಲಿ ಅನ್ಯದ ವಾಸ್ತವಕ್ಕೆ ಪ್ರತಿಕ್ರಿಯೆ ತೋರಬೇಕಾದ ಅನಿವಾರ್ಯತೆಗಳನ್ನು ವಚನ ಪಠ್ಯಗಳಲ್ಲಿ ಢಾಳಾಗಿ ಕಾಣುತ್ತವೆ.

ವಚನಗಳ ಕ್ರಾಂತಿಕಾರಕ ಗುಣವನ್ನು ಕುರಿತು ಸಾಕಷ್ಟು ಮಾತು ಕೇಳಿದ್ದೇವೆ. ವಚನಗಳಲ್ಲಿರುವ ಕ್ರಾಂತಿಕಾರಕತೆ ಅಂತರಂಗಕ್ಕೆ ಸಂಬಂಧಿಸಿದ್ದು. ವಚನಗಳಲ್ಲಿ ಬರುವ ಹಿಂದು ಮತ್ತು ಮುಂದು ಎಂಬ ಮಾತುಗಳನ್ನು ಭೂತ ಮತ್ತು ಭವಿಷ್ಯ ಎಂಬರ್ಥದಲ್ಲಿಯೇ ನೋಡುವುದು ಸೂಕ್ತವೆಂದು ತೋರುತ್ತದೆ. ಭೂತವೆನ್ನುವುದು ಮನಸ್ಸಿನ, ನಿರಂತರ ಆಲೋಚನೆಯ ಸೃಷ್ಟಿ, ಭವಿಷ್ಯವೆನ್ನುವುದು ಆಸೆ ಮತ್ತು ಭಯಗಳಿಂದ ಮೂಡುವ ಕಲ್ಪನೆ. ಇಂಥ ಕಾಲ್ಪನಿಕವಾದ ಮಾನಸಿಕ ಕಾಲವನ್ನು ಇಲ್ಲವಾಗಿಸಿಕೊಂಡಾಗ ಸತತ ಎಚ್ಚರದೊಡನೆ ವರ್ತಮಾನದಲ್ಲಿ ಇರುವುದು ಸಾಧ್ಯವಾಗುತ್ತದೆ. ಸಾವಧಾನವೆಂದರೆ ಸ–ಅವಧಾನ, ಎಚ್ಚರ. ಈ ಎಚ್ಚರದಲ್ಲಿ ಯಾವ ಮಾಯೆಯೂ ಇಲ್ಲ. ಮಾಯೆ

ಎಂಬುದೇನಿದ್ದರೂ ಕೇವಲ ಕಾಲ್ಪನಿಕ. ಅದರ ಕಾಲ್ಪನಿಕತೆಯನ್ನು ಕಂಡುಕೊಳ್ಳುವುದೇ ಅರಿವಿನ ದಾರಿ. ಇಂಥ ಮಾಯೆ ಇಲ್ಲದ ಮಾನಸಿಕ ಎಚ್ಚರ ಅನಿವಾರ್ಯವಾಗಿಯೇ ಬಹಿರಂಗದ ಪರಿವರ್ತನೆಗೂ ಕಾರಣವಾಗುತ್ತದೆ. ಆದರೂ, ವಚನ ಪಠ್ಯಗಳಲ್ಲಿ ಇದೊಂದೇ ನಿಲುವು ಇದೆ ಎಂದು ಹೇಳಲು ಆಗುವುದಿಲ್ಲ. ದ್ವಂದ್ವವನ್ನು ಒಪ್ಪಿಕೊಳ್ಳುವ, ಬಹಿರಂಗ ಮತ್ತು ಕುರುಹುಗಳಿಗೆ ಪ್ರಾಮುಖ್ಯ ನೀಡುವ, ಬಹಿರಂಗದ ಶುದ್ಧತೆಗಾಗಿ ಹಾತೊರೆಯುವ ನಿಲುವುಗಳೂ ಇವೆ. ಎಲ್ಲ ಭಾಷೆಯ ವ್ಯವಸ್ಥೆಯೂ ಸೇರಿದಂತೆ ಎಲ್ಲ ವ್ಯವಸ್ಥೆಗಳನ್ನೂ ನಿರಾಕರಿಸುವ, ಯಾವುದೇ ನಿರ್ದಿಷ್ಟಮಾರ್ಗವನ್ನು ಒಲ್ಲದ, ಪರಿಣಾಮವು ತಟ್ಟನೆ ಸಂಭವಿಸಬೇಕೇ ಹೊರತು ಸಾವಕಾಶವಾಗಿ, ನಿರ್ದಿಷ್ಟಮಾರ್ಗಾವಲಂಬನೆಯಿಂದಲ್ಲ ಎಂದೆನ್ನುವ ನಿಲುವಿನೊಂದಿಗೆ ವ್ರತ ನೇಮ ಆಚರಣೆಗಳ ಮಾರ್ಗವನ್ನು ನಿಷ್ಠುರವಾಗಿ ಪಾಲಿಸಲು ಬಯಸುವ ನಿಲುವುಗಳೂ ಇವೆ. ಬಯಲನ್ನು ಆಲಯವಾಗಿಸುವ ಆಸೆ ಇರುವಂತೆಯೇ ಆಲಯವನ್ನು ಬಯಲಾಗಿಸುವ ತೀವ್ರತೆಯೂ ಇದೆ. ಅರಿವು ಮೂಡುವವರೆಗೆ ಸಾವಕಾಶವಾಗಿ ಕುರುಹನ್ನು ಹಿಡಿದು ವಿಕಾಸಹೊಂದಿ ಕೊನೆ ಮುಟ್ಟಬೇಕೆಂದು ವಾದಿಸುವ ವಚನಗಳೂ ಇವೆ. ಕೆಲವು ವಚನಕಾರರು ತಮ್ಮ ರಚನೆಗಳಲ್ಲಿ ಬೇರೆ ಬೇರೆ ನಿಲುವುಗಳನ್ನು ನಿರೂಪಿಸಿರುವುದೂ ಇದೆ. ವಚನ ಪಠ್ಯಗಳಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ ಅನೇಕ ವಚನಗಳಲ್ಲಿ ಕಾಣುವ ಅನ್ಯ ಸಮಯ, ಅನ್ಯ ದೈವಗಳನ್ನು ಕುರಿತ ಆಕ್ರೋಶ ಮತ್ತು ಅಸಹನೆ. ತಮ್ಮ ಶರಣಧರ್ಮವನ್ನು ಒಪ್ಪದ ಇತರ ಪ್ರಮುಖ ಧರ್ಮ ವ್ಯವಸ್ಥೆಗಳ ಬಗ್ಗೆ ಮಾತ್ರವಲ್ಲ, ಜನಪದರ ಬಗ್ಗೆ, ಅವರ ದೈವಗಳ ಬಗ್ಗೆ ಕೂಡ ಈ ಅಸಹನೆ ಆಕ್ರೋಶಗಳಿವೆ. ಈ ನಿಲುವು ವಚನಗಳಲ್ಲಿ ಪ್ರತಿಪಾದಿತವಾಗಿರುವ ಆಧ್ಯಾತ್ಮಿಕತೆಗೆ ಹೊಂದದ ನಿಲುವು ಮತ್ತು ಸಾಂಸ್ಕೃತಿಕ ಬಹುಮುಖತೆಯನ್ನು ಆದರ್ಶವಾಗಿ ಹೊಂದಿರುವ ಸಮಾಜ ಒಪ್ಪಬೇಕಾಗಿಲ್ಲದ, ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಬೇಕಾದ ನಿಲುವು. ಆದರೆ ನಮ್ಮ ಕಾಲದಲ್ಲಿಯೇ ಅನ್ಯವೆಂದು ಭಾವಿಸಲಾದ ಜನಸಮುದಾಯಗಳ ಸಾಂಸ್ಕೃತಿಕ ಸಂಕೇತಗಳನ್ನು ನಾಶಮಾಡುವ ಮನೋಧರ್ಮ ತೀವ್ರವಾಗಿಯೇ ವ್ಯಕ್ತವಾಗುತ್ತಿದೆಯಲ್ಲವೇ? ಅನನ್ಯತೆಯನ್ನು ಉಳಿಸಿಕೊಳ್ಳುವ ಸಲುವಾಗಿ ಕ್ರೌರ್ಯವೂ ಸಮರ್ಥನೀಯ ಎಂಬ ಮನೋಧರ್ಮ ಮತ್ತು ಸಾಂಸ್ಕೃತಿಕ ವೈವಿಧ್ಯವನ್ನು ಸಹಿಸಿ ಪೋಷಿಸುವ ಆದರ್ಶ ಇವುಗಳ ಹೋರಾಟ ನಿರಂತರವೆಂದೇ ತೋರುತ್ತದೆ.

ಎಲ್ಲ ತಿಳಿವಳಿಕೆ ಮತ್ತು ಜ್ಞಾನದ ಮೂಲವನ್ನು ವ್ಯಕ್ತಿಯ ಅಂತರಂಗದಲ್ಲಿಯೇ ಸ್ಥಾಪಿಸಿ ವಿವರಿಸಿದ್ದು ವಚನಗಳ ಹಿರಿಮೆಯಾಗಿ ಕಾಣುತ್ತದೆ. ಜಗದಗಲ ಮುಗಿಲಗಲ ಮಿಗೆಯಗಲವಾಗಿರುವ ದೈವ ತನ್ನ ಅಂಗೈಗೆ ಬಂದದ್ದು ಎಂಬ ಅನುಭವವಿರಲಿ, ಸಮಾಜದ ಎಲ್ಲ ಜಾತಿಗಳೂ ಪ್ರತಿ ವ್ಯಕ್ತಿಯ ಒಳಗೇ ಅಡಗಿವೆ ಎಂದು ವಿವರಿಸುವ ಮಾತೇ ಇರಲಿ, ಅಂತರಂಗವೇ ಎಲ್ಲ ತಿಳಿವಳಿಕೆಯ ಕ್ರಿಯೆಯ ಮೂಲ ಸ್ರೋತವಾಗಿ

ವಚನಗಳಲ್ಲಿ ಕಾಣುತ್ತದೆ. ಒಳಗಿನ ಅರಿವು ಹೊರಗಿನ ಕ್ರಿಯೆಯಾಗಿ ವ್ಯಕ್ತವಾಗುವ ಬಗೆ ವಚನಗಳ ವೈಚಾರಿಕತೆಯ ಮುಖ್ಯ ಆಸಕ್ತಿಯಾಗಿದೆ. ನೆನಪು-ಮರೆವು, ಅರಿವು-ಅರಿವಿನ ಕುರುಹು, ತಿಳಿವಳಿಕೆ-ಭಾಷೆ, ಇವುಗಳ ಸಂಬಂಧ, ಬಹುಶಃ ಕನ್ನಡದಲ್ಲಿ ಮೊಟ್ಟಮೊದಲ ಬಾರಿಗೆ ವಚನಗಳಲ್ಲಿ ಇಷ್ಟು ದೊಡ್ಡ ಪ್ರಮಾಣದಲ್ಲಿ ಚರ್ಚೆಗೆ ಗುರಿಯಾಗಿವೆ. ಈ ಚರ್ಚೆಯನ್ನು ಭಾರತದ ತಾತ್ವಿಕ ದರ್ಶನಗಳ ಪರಂಪರೆಯಲ್ಲಿ ಇಟ್ಟು ನೋಡುವುದು ಅಗತ್ಯವಾಗಿ ಆಗಬೇಕಾದ ಕೆಲಸವಾಗಿದೆ. ವಚನಗಳನ್ನು "ಸರಳ, ಸುಲಭ ರಚನೆಗಳು" ಎಂಬ ಭ್ರಮೆಯಲ್ಲಿಯೇ ಇರುವಷ್ಟು ದಿನ ಈ ಕೆಲಸ ಸಾಧ್ಯವಾಗುವುದಿಲ್ಲ. ಶೈವ ಪರಂಪರೆಗಳೊಡನೆ ವಚನಗಳ ಕೊಡುಕೊಡುಗೆಯನ್ನು ಕುರಿತ ಅಧ್ಯಯನ ಇನ್ನೂ ಆಗಬೇಕಾದ ಕೆಲಸ.

ವಚನಗಳು ತಮ್ಮ ಬೌದ್ಧಿಕ ಚರ್ಚೆಯನ್ನು ರೂಪಕದ ಭಾಷೆಯಲ್ಲಿ ನಡೆಸಿವೆ. ಆದುದರಿಂದಲೇ ಅವನ್ನು ಕೇವಲ ಕಾಲಬದ್ಧ ರಚನೆಗಳು ಎಂದಲ್ಲದೆ ನಮ್ಮ ಸಮಕಾಲೀನ ಪಠ್ಯಗಳು ಎಂದು ವ್ಯವಹರಿಸುವುದಕ್ಕೂ ಸಾಧ್ಯವಾಗಿದೆ. ಪ್ರಾಚೀನ ಪಠ್ಯಗಳಲ್ಲಿ ದಿನನಿತ್ಯದ ಬದುಕಿನ ವಿವರಗಳನ್ನು ಇಷ್ಟು ದೊಡ್ಡ ಪ್ರಮಾಣದಲ್ಲಿ ರೂಪಕ ಸಾಮಗ್ರಿಯಾಗಿ ಬಳಸಿಕೊಂಡದ್ದು ವಚನಗಳು ಮಾತ್ರವೇ. ಸ್ವ-ಅನುಭವ ಮೂಡಿಸಿದ ವಿಚಾರದ ವಾಹಕವಾದಾಗ ರೂಪಕಗಳು ಉಜ್ವಲವಾಗಿರುತ್ತವೆ. ಅಂಗೀಕೃತ ವಿಚಾರದ ವಾಹಕವಾದಾಗ ಅವು ಕೇವಲ ಭಾಷಿಕ ಉಪಕರಣಗಳಾಗುತ್ತವೆ. ಹೀಗೆ ಉಪಕರಣಗಳಾದ ರೂಪಕಗಳು ಪರಂಪರಾಗತ ಅರ್ಥಸೂಚನೆಗಳನ್ನಷ್ಟೇ ವ್ಯಕ್ತಪಡಿಸುವಾಗ ಬೆಡಗು ಎಂದು ಕರೆಯಲಾಗುವ ಸಂವಾದ ಹುಟ್ಟಿಕೊಳ್ಳುತ್ತದೆ. ಬೆಡಗಿನ ವಚನಗಳೆಂದು ಕರೆಯಲಾಗುವ ವಚನಗಳ ವ್ಯಾಖ್ಯಾನಗಳೆಲ್ಲದರ ಮುಖ್ಯ ಲಕ್ಷಣವೆಂದರೆ ರೂಪಕವು ಹೊಳೆಯಿಸುವ ಅರ್ಥ ಸೂಚನೆಗಳಿಗಿಂತ ಅದಾಗಲೇ ಸ್ಪಷ್ಟವಾಗಿ ಬಿಟ್ಟಿರುವ ಬೌದ್ಧಿಕ ತಿಳಿವಳಿಕೆ, ಪರಿಕಲ್ಪನೆಗಳೇ ಮುಖ್ಯವೆಂದು ಭಾವಿಸುವುದೇ ಆಗಿದೆ. ಆದುದರಿಂದಲೇ ಬಹುತೇಕ ಬೆಡಗಿನ ವಚನ ವ್ಯಾಖ್ಯಾನಗಳೆಲ್ಲ ರೂಪಕವೆಂಬುದು ಸಿದ್ಧ ಅಥವ ಪ್ರಸಿದ್ಧ ಅರ್ಥಕ್ಕೆ ಹೊದಿಸಿರುವ ತೆರೆ ಎಂದೇ ಭಾವಿಸುತ್ತವೆ. ರೂಪಕಗಳು ಯಾವುದೇ ಇದ್ದರೂ ಅರ್ಥ ಮಾತ್ರ ಅದೇ ಎನ್ನಿಸುವಂತೆ ಇರುತ್ತವೆ. ಬೆಡಗಿನ ಸಂವಾದ ಪರಂಪರೆಯು ನಿರ್ಮಿಸಿಕೊಂಡಿರುವ ಸಿದ್ಧ ಅರ್ಥಗಳನ್ನು ಕ್ಷಣಕಾಲವಾದರೂ ಬದಿಗೆ ಸರಿಸಿ, ರೂಪಕಗಳೊಡನೆಯೇ ನೇರವಾಗಿ ವ್ಯವಹರಿಸುವುದು ಹೊಸ ಓದಿಗೆ ಅನುವು ಮಾಡಿಕೊಟ್ಟೀತು.

ಹೊಸ ಓದಿನ ಸ್ವರೂಪವನ್ನು ಕುರಿತು ಹೀಗೆ ವಿವರಿಸಬಹುದು. ವಿವಿಧ ಕಾರಣಗಳಿಗಾಗಿ ಜನಪ್ರಿಯವಾಗಿರುವ ಹಲವು ನೂರು ವಚನಗಳು, ಅವು ಜನಪ್ರಿಯವಾಗಿರುವ ಕಾರಣದಿಂದಲೇ, ಅರ್ಥಸಂದಿಗ್ಧತೆಯೇನೂ ಇಲ್ಲದ, ಸರಳ ನೇರ ನುಡಿಗಳಾಗಿ ಕೇಳುತ್ತವೆ. ಪರಿಚಿತ ಅರ್ಥದ ಸದೃಢ ಜಡ ಭಿತ್ತಿಯ ಹಿನ್ನೆಲೆಯಲ್ಲಿಯೇ ಹೊಸ ವಚನಗಳನ್ನೂ ಓದುತ್ತೇವೆ. ಅರ್ಥ ಗೊತ್ತಿದೆ, ಸುಸ್ಪಷ್ಟವಾಗಿದೆ ಎಂದೇ ಭಾವಿಸಿ ನಾವು ವಚನಗಳು

ಒಳಗೊಂಡಿರುವ ಅನುಭವಕ್ಕೆ ಮುಚ್ಚಿದ ಮನಸ್ಸಿನವರಾಗಿಬಿಡುತ್ತೇವೆ. ಪರಿಚಿತವಾದದ್ದನ್ನೂ ಅಪರಿಚಿತಗೊಳಿಸಿಕೊಳ್ಳದ ಹೊರತು ಓದಿನ ಹೊಸತನ ಸಾಧ್ಯವಾಗುವುದಿಲ್ಲ. ವಚನಗಳನ್ನು ಅಪರಿಚಿತಗೊಳಿಸಿಕೊಳ್ಳುವುದಕ್ಕೆ ಒಂದು ದಾರಿ ಎಂದರೆ ವಚನದ ಸಾಲುಗಳನ್ನು ಅರ್ಥಕ್ಕೆ ಅನುಗುಣವಾಗಿ ಹೊಸ ರೀತಿಯಲ್ಲಿ ಮುರಿದು ಜೋಡಿಸಿಕೊಳ್ಳುವುದು. ಈ ಸಂಕಲನದ ಬಹಳಷ್ಟು ವಚನಗಳನ್ನು ಹೀಗೆ ಹೊಸ ರೀತಿಯ ವಿನ್ಯಾಸದಲ್ಲಿ ಜೋಡಿಸಿಕೊಡಲಾಗಿದೆ. ತಾಳೆಯಗರಿಯ ಹಸ್ತಪ್ರತಿಗಳಲ್ಲಿ, ಶ್ರೀ ಭೂಸನೂರುಮಠ ಅವರು ಸಂಪಾದಿಸಿರುವ ಸಂಪುಟದಲ್ಲಿ ಪಠ್ಯಗಳನ್ನು ಗದ್ಯದ ಸಾಲುಗಳಂತೆ ನೀಡಿರುವುದನ್ನು ನೋಡಬಹುದು. ಲಯಕ್ಕೆ ಅನುಗುಣವಾಗಿ ವಚನ ಸಾಲುಗಳನ್ನು ಕವಿತೆಯ ಸಾಲುಗಳಂತೆ ಜೋಡಿಸಿ ಪಠ್ಯದ ಕಾವ್ಯರೂಪವನ್ನು ಮುನ್ನೆಲೆಗೆ ತರುವ ರೀತಿಯನ್ನೂ ಶ್ರೀ ಬಸವನಾಳರು ಸಂಪಾದಿಸಿರುವ ಬಸವ ವಚನಗಳಲ್ಲಿ ಕಾಣಬಹುದು. ಈಗ ಇನ್ನೊಂದು ಹೆಜ್ಜೆ ಮುಂದೆ ಹೋಗಿ ವಚನಗಳ ಅನುಭವ, ಅರ್ಥ, ಮಾತಿನ ರೀತಿಗೆ ಗಮನ ನೀಡಿ, ಪ್ರತಿಸಾಲಿನ ನಡುವೆ ಅಗತ್ಯವಾಗಿ ಬರಬೇಕಾದ ಮೌನಕ್ಕೆ ಪ್ರಾಧಾನ್ಯ ನೀಡಿ ಇನ್ನೂ ಬೇರೆಯದೇ ರೀತಿಯಲ್ಲಿ ವಚನ ಸಾಲುಗಳನ್ನು ಜೋಡಿಸಿಕೊಳ್ಳುವುದು ಸಾಧ್ಯ ಎಂಬ ನಂಬಿಕೆಯೊಂದಿಗೆ ಇಲ್ಲಿನ ಪಠ್ಯಗಳನ್ನು ಅಳವಡಿಸಿಕೊಳ್ಳಲಾಗಿದೆ. ನಿದರ್ಶನಕ್ಕೆಂದು ಹೇಳುವುದಾದರೆ, ಸಂಬೋಧನೆಯ ಮಾತುಗಳನ್ನು ಪ್ರತ್ಯೇಕಗೊಳಿಸಿ ನೀಡಲಾಗಿದೆ, ಅಥವಾ ಕೆಲವು ಸೂಕ್ತ ಸಂದರ್ಭಗಳಲ್ಲಿ ಅಂಕಿತವು ತಾನೇ ಪ್ರತ್ಯೇಕ ಸಾಲು ಎಂಬಂತೆ ಉಳಿದುಕೊಳ್ಳುತ್ತದೆ. ಇಂಥ ಸಂದರ್ಭಗಳಲ್ಲಿ ಓದುಗರು ಸಾಲು ಮುರಿದಲ್ಲಿಂದ ಆರಂಭವಾಗುವ ಖಾಲಿಜಾಗವನ್ನು ಮೌನವೆಂದೇ ಭಾವಿಸಿ ಓದಿನ ವೇಗಕ್ಕೆ ಅಷ್ಟು ಬಿಡುವು ಕೊಟ್ಟು ಮುಂದಿನ ಸಾಲನ್ನು ಓದಿಕೊಳ್ಳುವುದರಿಂದ ವಚನದ ಅನುಭವ ಹೊಸರೀತಿಯಲ್ಲಿ ಮನಸ್ಸಿಗೆ ತಟ್ಟುವುದಕ್ಕೆ ಅವಕಾಶವಾಗುತ್ತದೆ. ಇನ್ನೊಂದು ಸಂಗತಿ ಎಂದರೆ ನಮಗೆ ಪರಿಚಿತ ಎನ್ನಿಸುವ ಪದಗಳ ಅರ್ಥವನ್ನು ಹೊಸದಾಗಿ ಹುಡುಕಿಕೊಳ್ಳುವುದು, ಅರ್ಥದ ಇತರ ಸಾಧ್ಯತೆಗಳನ್ನು ಗಮನಿಸುವುದು ಕೂಡ ಹೊಸ ಓದಿನ ಮುಖ್ಯ ಅಂಶ. ನಿದರ್ಶನಕ್ಕೆ ಅಲ್ಲಮನ ಒಂದು ವಚನದ, ಈ ಸಂಕಲನದ ವಚನ ೯೧೪, "ತಗರ ಹೋರಟೆ" ಎಂಬ ನುಡಿಗಟ್ಟನ್ನು "ಟಗರುಗಳ ಹೋರಾಟ" ಎಂದು ಒಪ್ಪಿ ವಿವರಿಸಿಕೊಂಡು ಬಂದಿದ್ದೇವೆ. ಆದರೆ "ತಗರ" ಎಂಬ ಮಾತಿಗೆ "ಒಂದು ಬಗೆಯ ಪಗಡೆಯಾಟದ ಜೂಜು" ಎಂಬ ಅರ್ಥವೂ ಇದೆ. ಹಿಂದಿನ ಸಾಲಿನ ಮಂಡರ ಗೋಷ್ಠಿ ಎಂಬುದರೊಡನೆ ಸೇರಿ ವ್ಯರ್ಥಾಲಾಪದ ಪಗಡೆಯಾಟಕ್ಕೆ ಇನ್ನೂ ಶ್ರೀಮಂತವಾದ ಅರ್ಥ ದೊರೆಯುತ್ತದೆ. ತರ್ಕವೆಂಬುದು ಒಂದು ಬಗೆಯ 'ಅರ್ಥ'ರಹಿತ ಕ್ರೀಡೆ ಎಂಬ ಅರ್ಥ ಹೊಳೆಯುತ್ತದೆ. ಭಾಷಾ ರಚನೆಯನ್ನು ಗಮನಿಸುವಾಗಲೂ ಇಂಥದೇ ಎಚ್ಚರ ಬೇಕಾಗುತ್ತದೆ. ಒಂದು ನಿದರ್ಶನವನ್ನು ನೀಡುವುದಾದರೆ ವಚನ ಪಠ್ಯಗಳಲ್ಲಿ ಬಳಕೆಯಾಗುವ "ಬಾರದು" ಎಂಬ ನುಡಿಯನ್ನು ಇಂದಿನ ಪರಿಚಿತ ನಿಷೇಧಾರ್ಥಕದ ರೀತಿಯಲ್ಲಿ

ಅರ್ಥೈಸಿಕೊಳ್ಳುವುದಕ್ಕಿಂತ "ಸಾಧ್ಯವಿಲ್ಲ" ಎಂಬರ್ಥದಲ್ಲಿ ತೆಗೆದುಕೊಳ್ಳುವುದು ಹೆಚ್ಚು ಉಪಯುಕ್ತವಾಗುತ್ತದೆ. ವೀರಶೈವದ ಪಾರಿಭಾಷಿಕಗಳು ಬಳಕೆಯಾಗಿರುವ ಅನೇಕ ವಚನಗಳು ಈ ಸಂಕಲನದಲ್ಲಿವೆ. ಅವುಗಳನ್ನು ಓದುವಾಗ ಕೇವಲ ಮತ ಪ್ರತಿಪಾದನೆಯ ಅರ್ಥವನ್ನಷ್ಟೇ ಗಮನಿಸುವುದಕ್ಕಿಂತ ತಾತ್ವಿಕವಾಗಿ ಅವುಗಳನ್ನು ಗಮನಿಸುವುದು ಹೆಚ್ಚು ಉಪಯುಕ್ತ. ನಿದರ್ಶನಕ್ಕೆ ಸಕಲೇಶ ಮಾದರಸನ ೯೮೩ನೆಯ ವಚನದಲ್ಲಿ ಬರುವ ಷಟ್‌ಸ್ಥಲದ ಕುರಿತ ಪ್ರಶ್ನೆಗಳನ್ನು ಕೇವಲ ವೀರಶೈವ ಪಾರಿಭಾಷಿಕಗಳನ್ನಾಗಿ ನೋಡದೆ ಅನುಭವ ಸ್ವೀಕಾರದ ತಾತ್ವಿಕ ಚರ್ಚೆ ಎಂದು ಪರಿಭಾವಿಸುವುದು ಸೂಕ್ತವೆಂದು ತೋರುತ್ತದೆ. ಅರ್ಥ ಮುಖ್ಯವಾದರೂ ಅರ್ಥವಾಗುವ ಕ್ರಮವಿದೆಯಲ್ಲ, ಅರ್ಥವನ್ನು ರೂಪಿಸುವ ಓದಿನ ಅನುಭವವಿದೆಯಲ್ಲ ಅದಕ್ಕೆ ಪ್ರಾಮುಖ್ಯ ನೀಡುವುದು ಹೊಸ ಓದು ಆಗುತ್ತದೆ. ಪರಿಚಿತವನ್ನು ಅಪರಿಚಿತಗೊಳಿಸಿಕೊಳ್ಳದೆ ಹೊಸತನ ಒದಗದು.

ವಚನಗಳೇ ಮುಖ್ಯ, ವಚನಕಾರರಲ್ಲ ಎಂಬ ನಿಲುವಿನಲ್ಲಿ ಈ ಸಂಕಲನ ಸಿದ್ಧಗೊಂಡಿರುವುದರಿಂದ ವಚನಗಳ ಕರ್ತೃತ್ವದ ಪ್ರಶ್ನೆ, ವಚನ ಪಾಠದ ನಿಷ್ಕರ್ಷೆ ಇವು ಇಲ್ಲಿನ ಮುಖ್ಯ ಆಸಕ್ತಿಗಳಲ್ಲ. ಹಾಗೆ ನೋಡುವುದಾದರೆ ನಡುಗನ್ನಡ ಕಾಲದ ಪಠ್ಯಗಳ ನಿಷ್ಕೃಷ್ಟ ಪಾಠವನ್ನು ನಿರ್ಧರಿಸುವುದು ಅಸಾಧ್ಯವೆಂದೇ ತೋರುತ್ತದೆ. ನಿದರ್ಶನಕ್ಕೆ ಈ ಸಂಕಲನದ ೪೩೫ ಮತ್ತು ೪೩೬ನೆಯ ವಚನಗಳು ಚಂದಿಮರಸ ವಚನವೋ ಬಸವ ವಚನವೋ ನಿರ್ಧರಿಸುವುದು ಕಷ್ಟ. ಕಲಿದೇವ ಅಂಕಿತವನ್ನು ಬಳಸುವ ಮಡಿವಾಳಮಾಚಯ್ಯ ವಚನ ಮತ್ತು ಅಮರಗುಂಡದ ಮಲ್ಲಿಕಾರ್ಜುನ ಅಂಕಿತವನ್ನು ಬಳಸುವ ಪುರದ ನಾಗಣ್ಣ ವಚನಗಳು ಒಂದೇ ರೂಪ, ವಿವರಗಳಲ್ಲಿ ಕಾಣುತ್ತವೆ. ಇನ್ನು ರೂಪಕ, ನುಡಿಗಟ್ಟುಗಳಂತೂ ಹಲವು ವಚನಗಳಲ್ಲಿ ಅದೇ ಅದೇ ರೀತಿಯಲ್ಲಿಯೇ ಪುನರುಕ್ತವಾಗುತ್ತವೆ. ಇಂಥ ಪ್ರಶ್ನೆಗಳನ್ನು ಪರಿಹರಿಸುವುದು ಈ ಸಂಕಲನದ ಉದ್ದೇಶವಲ್ಲ. ವಚನಗಳ ಪಾಠಾಂತರ ಅತ್ಯಂತ ಕುತೂಹಲಕರವಾದ ಬೌದ್ಧಿಕ ಮತ್ತು ಅನುಭವ ಸಾಹಸದ ಯಾತ್ರೆ. ಪ್ರಸ್ತುತ ಸಂಕಲಕ್ಕಾಗಿ ಲಭ್ಯವಿರುವ ಪಾಠಗಳಲ್ಲಿ ಅರ್ಥಶ್ರೀಮಂತಿಕೆಗೆ ಇಂಬು ಕೊಡುವಂಥ ಪಾಠವನ್ನು ಉಳಿಸಿಕೊಳ್ಳಲಾಗಿದೆ. ನಿದರ್ಶನಕ್ಕೆಂದು ಈ ಸಂಕಲನದ ೨೫೩ನೆಯ ವಚನದ ಹಲವು ಪಾಠಗಳಲ್ಲಿ "ನಿಮ್ಮ ನಿಲುವು" ಎಂಬ ನುಡಿಗಟ್ಟು ಇಲ್ಲ. ಹಾಗೆ ಇಲ್ಲದಿರುವುದೇ ಅರ್ಥಶ್ರೀಮಂತಿಕೆಗೆ ಇಂಬುಕೊಡುತ್ತದೆ ಎಂಬ ಕಾರಣಕ್ಕೆ ಈ ಜನಪ್ರಿಯ ವಚನದ "ನಿಮ್ಮ ನಿಲುವು" ಎಂಬುದನ್ನು ಕೈಬಿಡಲಾಗಿದೆ. ವಚನಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಇಂಥ ಎಲ್ಲ ವಿವರಗಳನ್ನು ಒಳಗೊಂಡ ಚರ್ಚೆಯನ್ನು "ವಚನ ವಿವರ" ಎಂಬ ಕೃತಿಯಲ್ಲಿ ಕೈಗೆತ್ತಿಕೊಳ್ಳಲಾಗುವುದು.

ವ್ಯಕ್ತಿತ್ವದ ಶೋಧನೆ, ಕಾಲದ ಮೂಲಕ, ಜ್ಞಾನದ ಮೂಲಕ, ನೆನಪುಗಳ ಮೂಲಕ, ಭ್ರಮೆಗಳ ಮೂಲಕ ಗಟ್ಟಿಗೊಳ್ಳುವ ಅಹಂಕಾರ, ಕಲ್ಪಿತವಾದ ಅಹಂಕಾರದ ನಿರಸನ, ಆ ಮೂಲಕ ಸೀಮಿತ ಅಹಂಕಾರಕ್ಕಿಂತ ಬಹು ವಿಶಾಲವಾದ ಸೃಷ್ಟಿಯಲ್ಲಿ ಸಮರಸಗೊಳ್ಳುವುದು,

ಅಹಂಕಾರದ ಬದ್ಧತೆಯನ್ನು ನೀಗಿಕೊಂಡು ಸ್ವತಂತ್ರರೂ, ಸೀಮಾತೀತರೂ ಆಗುವುದು, ವ್ಯಕ್ತಿ ಮತ್ತು ಸೃಷ್ಟಿಯ ನಡುವೆ ಸಮರಸದ ಕಲ್ಯಾಣವನ್ನು ಕಂಡುಕೊಳ್ಳುವುದು ಇವು ವಚನ ಪಠ್ಯಗಳು ಮುಖ್ಯವೆಂದು ಭಾವಿಸಿರುವ ಪ್ರಶ್ನೆಗಳು, ಹುಡುಕಾಟಗಳು. ಲಭ್ಯವಿರುವ ಸುಮಾರು ಇಪ್ಪತ್ತು ಸಾವಿರ ವಚನಗಳಲ್ಲಿ ವೈವಿಧ್ಯಮಯವಾದ ೯೮ ವಚನಕಾರರ ೧೧೦೬೮ ವಚನಗಳನ್ನು ಆಯ್ದು ಈ ಸಂಕಲವನ್ನು ರೂಪಿಸಲಾಗಿದೆ. ವಚನಗಳ ಹೊಸ ಓದಿಗೆ ಪ್ರಚೋದನೆ ನೀಡಿದರೆ ಈ ಶ್ರಮ ಸಾರ್ಥಕವಾಗುತ್ತದೆ.

*

ಈ ಸಂಕಲನ ರೂಪುಗೊಳ್ಳುವುದಕ್ಕೆ ಮುಖ್ಯ ಕಾರಣ ಕನ್ನಡ ವಿಶ್ವವಿದ್ಯಾಲಯದ ಪ್ರಭಾರ ಕುಲಪತಿಯವರಾದ ಡಾ. ಕೆ.ವಿ. ನಾರಾಯಣ ಅವರು. ಪ್ರಸಾರಾಂಗದ ನಿರ್ದೇಶಕರಾದ ಡಾ. ಹಿ.ಚಿ. ಬೋರಲಿಂಗಯ್ಯ ವೈಯಕ್ತಿಕ ಕಾಳಜಿಯನ್ನು ವಹಿಸಿ ಈ ಸಂಕಲನದ ಪ್ರಕಟಣೆಯ ಜವಾಬ್ದಾರಿಯನ್ನು ವಹಿಸಿಕೊಂಡಿದ್ದಾರೆ. ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ, ಅಭಿವೃದ್ಧಿ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಟಿ. ಆರ್. ಚಂದ್ರಶೇಖರ್, ಕನ್ನಡ ಸಾಹಿತ್ಯ ಅಧ್ಯಯನ ವಿಭಾಗದ ಪ್ರಾಧ್ಯಪಕರಾದ ಡಾ. ಅಮರೇಶ ನುಗಡೋಣಿ ಈ ಮಾನ್ಯ ಮಿತ್ರರು ಸಲಹಾ ಸಮಿತಿಯ ಸದಸ್ಯರಾಗಿ ಈ ಸಂಕಲನ ರೂಪುಗೊಳ್ಳುವುದರಲ್ಲಿ ಮಹತ್ವದ ಪಾತ್ರವಹಿಸಿದ್ದಾರೆ. ಪ್ರಕಟಣೆಯ ತಾಂತ್ರಿಕ ವಿಷಯಗಳನ್ನು ಕುರಿತಂತೆ ಶ್ರೀ ಸುಜ್ಞಾನಮೂರ್ತಿಯವರ ನೆರವು ಬಹಳ ಬೆಲೆಯುಳ್ಳದ್ದಾಗಿದೆ. ಕನ್ನಡ ಗಣಕ ಪರಿಷತ್ತಿನ ಶ್ರೀ ಶ್ರೀನಾಥಶಾಸ್ತ್ರಿ ಮತ್ತು ಶ್ರೀ ನರಸಿಂಹಮೂರ್ತಿ, ಶ್ರೀ ಅಭಿಷೇಕ್, ಕುಮಾರಿ ಕವಿತಾ ಇವರು ನೀಡಿರುವ ತಾಂತ್ರಿಕ ಸಹಕಾರಕ್ಕೆ ಕೃತಜ್ಞನಾಗಿದ್ದೇನೆ.

ನನ್ನ ಎಲ್ಲ ಬರವಣಿಗೆಯೂ ತನ್ನದೇ ಎಂಬಷ್ಟು ಪ್ರೀತಿಯನ್ನು ತೋರುವ, ನಿಷ್ಠುರವಾಗಿ ವಿಮರ್ಶಿಸುವ ನನ್ನ ಗೆಳೆಯ ಮೈಸೂರಿನ ರಾಮು, ದಿನದಿನವೂ ಆಗುತ್ತಿರುವ ಕೆಲಸದ ಬಗ್ಗೆ ಆಸಕ್ತಿ ತೋರುತ್ತಾ, ಸಲಹೆ ನೀಡುತ್ತಾ ಸಹಕರಿಸಿರುವ ಗೆಳೆಯ ಡಾ. ಎಚ್. ಎಸ್. ರಾಘವೇಂದ್ರರಾವ್, ಅಗತ್ಯವಾದ ಕೆಲವು ಪುಸ್ತಕಗಳನ್ನು ಒದಗಿಸಿಕೊಟ್ಟ ಡಾ. ವಿಜಯಾ ಗುತ್ತಲ, ಕರಡು ತಿದ್ದುವಲ್ಲಿ ಸಹಕಾರ ನೀಡಿರುವ ಕುಮಾರಿ ಎಸ್. ಹೇಮಾ ಇವರಿಗೆಲ್ಲ ಕೃತಜ್ಞನಾಗಿದ್ದೇನೆ.

**ಓ.ಎಲ್. ನಾಗಭೂಷಣಸ್ವಾಮಿ**

**ಆಕರ ಪಠ್ಯಗಳು**

೧. ಸಮಗ್ರ ವಚನ ಸಂಪುಟ ೧–೧೫, ಪ್ರಧಾನ ಸಂಪಾದಕರು, ಎಂ. ಎಂ. ಕಲಬುರ್ಗಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು
೨. ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು, ಸಂ. ಆರ್. ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೩. ಅಲ್ಲಮನ ವಚನ ಚಂದ್ರಿಕೆ, ಸಂ. ಎಲ್. ಬಸವರಾಜು, ಲೋಹಿಯಾ ಪ್ರಕಾಶನ, ಬಳ್ಳಾರಿ
೪. ಶಿವಶರಣೆಯರ ವಚನಗಳು (ಸಮಗ್ರ ಸಂಪುಟ), ಸಂ. ಆರ್. ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೫. ಸಕಲ ಪುರಾತನರ ವಚನಗಳು, ಸಂ. ಆರ್. ಸಿ. ಹಿರೇಮಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೬. ಮಹದೇವಿಯಕ್ಕಗಳ ವಚನಗಳು, ಸಂ. ಸಾ.ಶಿ. ಮರುಳಯ್ಯ, ಬೆಂಗಳೂರು
೭. ಶಿವಾನುಭವ ರತ್ನಕೋಶ, ಸಂ. ಫಗು ಹಳಕಟ್ಟಿ
೮. ವಚನ ನಿಘಂಟು, ಮೃತ್ಯುಂಜಯ ರುಮಾಲೆ, ತೋಂಟದಾರ್ಯ ಮಠ, ಗದಗ

[ ] ವಚನ ಪಠ್ಯದಲ್ಲಿ ಬರುವ ಈ ಸೂಚನೆಯು ಕಂಸದೊಳಗಿನ ಮಾತುಗಳು ವಚನದ ಭಾಗವಲ್ಲದಿರಬಹುದು, ಶೂನ್ಯಸಂಪಾದನಕಾರರೇ ಮೊದಲಾದ ಪ್ರಾಚೀನ ಸಂಪಾದಕರು ಸೇರಿಸಿರಬಹುದಾದ ಮಾತುಗಳಿರಬಹುದು ಎಂಬುದನ್ನು ಸೂಚಿಸುತ್ತದೆ.

# ವಚನ ಸಾವಿರ

೧

ಅಂಕ ಕಳನೇರಿ ಕೈಮರೆದಿರ್ದಡೆ
ಮಾರಂಕ ಬಂದಿರಿವುದ ಮಾಬನೆ
ನಿಮ್ಮ ನೆನಹ ಮತಿ ಮರೆದಿರ್ದಡೆ
ಪಾಪ ತನುವಂಡಲೆವುದ ಮಾಬುದೆ
ಕೂಡಲ ಸಂಗಯ್ಯನ ನೆನೆದಡೆ
ಪಾಪ ಉರಿಗೊಡ್ಡಿದರಗಿನಂತೆ ಕರಗುವುದಯ್ಯಾ

೨

ಅಂಕುರ ಪಲ್ಲವ ತರು ಕುಸುಮಫಲರಸಸಾರಾಯ ಇನಿತಿನಿತೆಲ್ಲಿದ್ದುದೊ
ಬೀಜ ಮೊಳೆದೋರದಂದು
ನಾಭಿಗಳೆಯದ ಪಶುವಿನ ಅಮೃತವೆಲ್ಲಿದ್ದುದೊ
ವೃಷಭ ಮುಟ್ಟದಂದು
ಘನಕುಚ ಯೌವನೆಯರ ರಜಪ್ರಶ್ನೆಯಲ್ಲಿ ಒದಗಿದ ಹಸುಗೂಸು
ಎಲ್ಲಿದ್ದುದೊ ಕೊಡಗೂಸು ಕನ್ಯೆಯಳಿಯದಂದು
ತ್ರಿಜಗದ ಉತ್ಪತ್ಯ ಸಚರಾಚರದ ಗಂಭೀರವೆಲ್ಲಿದ್ದುದೊ
ಶಿವನ ಅಷ್ಟತನುಮೂರ್ತಿಗಳಿಲ್ಲದಂದು
ಸಪ್ತಸ್ವರ ಭಾವನ್ನಕ್ಷರವೆಲ್ಲಿದ್ದುದೊ
ಜ್ಞಾನ ಉದಯಿಸದಂದು
ಶರಧಿಯೊಳಗಣ ರತ್ನವೆಲ್ಲಿದ್ದುದೊ
ಸ್ವಾತಿಯ ಸಲಿಲವೆರಗದಂದು
ಶರಣಪಥ ಲಿಂಗೈಕ್ಯವೆಲ್ಲಿದ್ದುದೊ
ಆರಾಧ್ಯ ಸಕಳೇಶ್ವರದೇವರು ಕರುಣಿಸಿ ಕಣ್ದೆರೆದು ತೋರದಂದು

೩

ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನವುಂಟೆ
ಬೆಟ್ಟ ಬಲ್ಲಿತ್ತೆಂದಡೆ ಉಳಿಯ ಮೊನೆಯಲ್ಲಿ
ಬಡತನವಿದ್ದಡೆ ಒಡೆಯದೆ
ಘನಶಿವಭಕ್ತರಿಗೆ ಬಡತನವಿಲ್ಲ
ಸತ್ಯರಿಗೆ ದುಷ್ಕರ್ಮವಿಲ್ಲ
ಎನಗೆ ಮಾರಯ್ಯಪ್ರಿಯ ಅಮಲೇಶ್ವರಲಿಂಗವುಳ್ಳನ್ನಕ್ಕ
ಆರ ಹಂಗಿಲ್ಲ ಮಾರಯ್ಯಾ

೪

ಅಂಗಕ್ಕೊಂದು ಸುಗುಣ ದುರ್ಗುಣ ಸೋಂಕುವಲ್ಲಿ
ಸೋಂಕಿದ ಕಲೆ ಅಂಗಕ್ಕೋ ಆತ್ಮಂಗೋ
ಅಂಗಕ್ಕೆಂದಡೆ ಚೇತನವಿಲ್ಲದೆ ಒಂದನೂ ಮುಟ್ಟದಾಗಿ
ಆತ್ಮಂಗೆಂದಡೆ ಒಂದು ಲಕ್ಷ್ಯದ ಮರೆಯಲಲ್ಲದೆ ಲಕ್ಷಿಸಿಕೊಳದು
ಇಂತೀ ಕಾಯವೂ ಆತ್ಮನೂ ಒಡಗೂಡಿ ಅರಿವಲ್ಲಿ
ಆ ಅರಿವು ಲಿಂಗವನೊಡಗೂಡಿಯಲ್ಲದೆ ಬೇರೆ ಒಡಲುವಿಡಿಯದು
ಇಂತೀ ಅಂಗ ಆತ್ಮ ಲಿಂಗಮೂರ್ತಿ ತ್ರಿವಿಧ ಸಂಗವಾದಲ್ಲದೆ
ಮುಂದಣ ಅರಿವಿನ ಕುರುಹು ನಿರಿಗೆಯಾಗದು
ಆ ನಿರಿಗೆಯ ಅಂಗ ಸುಸಂಗವಾದಲ್ಲಿ
ಭೋಗಬಂಕೇಶ್ವರಲಿಂಗವು ಅಂಗಸೋಂಕಿನಲ್ಲಿ ಅಡಗಿದ ತೆರ

೫

ಅಂಗದ ಕಳವು ಕೈಯಲ್ಲಿದ್ದಂತೆ ಹಿಂಗುವದಕ್ಕೆ ನಾಲಿಗೆಯೇಕೊ
ಪರರಂಗವನರಿದು ಹೆರರಂಗದಲ್ಲಿ ಸಿಲ್ಕಿ ಭಂಗಿತನಾಗಲೇಕೊ
ನದಿಯೊಳಗೆ ಮುಳುಗಿ ತನ್ನೊಡವೆಯ ಸುದ್ದಿ ಯಾಕೊ
ಅದರ ವಿಧಿ ನಿಮಗಾಯಿತ್ತು ಬಿಡು ಕಡುಗಲಿತನವ
ನಿಃಕಳಂಕ ಮಲ್ಲಿಕಾರ್ಜುನಾ

೬

ಅಂಗದ ಬೊಕ್ಕಸದ ಮಂದಿರಕ್ಕೆ
ಚಿದ್ಘನಲಿಂಗವೆಂಬುದೊಂದು ಬೀಗ
ತ್ರಿಗುಣವೆಂಬ ಮೂರೆಸಳಿನ ಸಿಕ್ಕು

ಒಂದು ಪೂರ್ವಗತಿ
ಒಂದು ಮಧ್ಯಗತಿ
ಒಂದು ಉತ್ತರಗತಿಯಾಗಿ
ಸಿಕ್ಕಿದವು ಮೂರೆಸಳು
ಆ ಎಸಳಿಗೆ ಘಟ ಒಂದೆ ಒಡಲು
ಎಸಳ ತೆಗವುದಕ್ಕೆ ಕೈಯ ಕಾಣೆ
ಪ್ರತಿ ಕೈಗೆ ಎಸಳು ಅಸಾಧ್ಯ
ನೋಡಾ
ಇಂತೀ ಬೀಗದ ಗುಣವ
ಬಸವಣ್ಣಪ್ರಿಯ ನಾಗರೇಶ್ವರಲಿಂಗಾ
ನೀವೇ ಬಲ್ಲಿರಿ

೭
ಅಂಗದ ಭಂಗವ ಲಿಂಗಮುಖದಿಂದ ಗೆಲಿದೆ
ಮನದ ಭಂಗವ ಅರುಹಿನ ಮುಖದಿಂದ ಗೆಲಿದೆ
ಜೀವದ ಭಂಗವ ಶಿವಾನುಭಾವದಿಂದ ಗೆಲಿದೆ
ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ
ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ
ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ
ಚೆನ್ನಮಲ್ಲಿಕಾರ್ಜುನ
ಕಾಮನಕೊಂದು ಮನಸಿಜನಾಗುಳುಹಿದಡೆ
ಮನಸಿಜನ ತಲೆಯ ಬರಹವ ತೊಡೆದೆನು

೮
ಅಂಗದಿಚ್ಛೆಗೆ ಮದ್ಯಮಾಂಸವ ತಿಂಬರು
ಕಂಗಳಿಚ್ಛೆಗೆ ಪರವಧುವ ನೆರೆವರು
ಲಿಂಗಲಾಂಛನಧಾರಿಯಾದಲ್ಲಿ ಫಲವೇನು
ಲಿಂಗಪಥವ ತಪ್ಪಿ ನಡೆವವರು
ಜಂಗಮಮುಖದಿಂದ ನಿಂದೆ ಬಂದಡೆ
ಕೊಂಡ ಮಾರಿಂಗೆ ಹೋಹುದು ತಪ್ಪದು
ಕೂಡಲಸಂಗಮದೇವಾ

೯

ಅಂಗವ ಮರೆದವಂಗೆ ಲಿಂಗದ ಹಂಗೇಕೊ
ಅರಿವ ಕಂಡವಂಗೆ ಕುರುಹಿನ ಹಂಗೇಕೊ
ತಾನು ತಾನಾದವಂಗೆ ಧ್ಯಾನದ ಹಂಗೇಕೊ
ಮನ ಮುಗ್ಧವಾದವಂಗೆ ಮಾನವರ ಹಂಗೇಕೊ
ಆಸೆಯನಳಿದವಂಗೆ ರೋಷದ ಹಂಗೇಕೊ
ಕಾಮನ ಸುಟ್ಟವಂಗೆ ಕಳವಳದ ಹಂಗೇಕೊ
ನಡೆಗೆಟ್ಟವಂಗೆ ನುಡಿಯ ಹಂಗೇಕೊ
ನಿಶ್ಚಿಂತವಾದವಂಗೆ ಉಚ್ಚರಣೆಯ ಹಂಗೇಕೊ
ಬಯಲು ಬಯಲಾದವಂಗೆ ಭಾವದ ಹಂಗೇಕೊ
ತನ್ನ ಮರೆದು ನಿಮ್ಮನರಿದ ಶರಣಂಗೆ
ಅಲ್ಲಿಯೆ ಐಕ್ಯ ಕಂಡೆಯಾ ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ

೧೦

ಅಂಗವ ಲಿಂಗಮುಖದಲ್ಲಿ ಅರ್ಪಿಸಿ
ಅಂಗ ಅನಂಗವಾಯಿತ್ತು
ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು
ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು
ಅಂಗ ಮನ ಭಾವವಳಿದ ಕಾರಣ
ಕಾಯ ಅಕಾಯವಾಯಿತ್ತು
ಎನ್ನ ಕಾಯದ ಸುಖಭೋಗವ ಲಿಂಗವೆ ಭೋಗಿಸುವನಾಗಿ
ಶರಣಸತಿ ಲಿಂಗಪತಿಯಾದೆನು
ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ
ಒಳಹೊಕ್ಕು ಬೆರಸಿದೆನು

೧೧

ಅಂಗವಿಕಾರ ಸಾಕೇಳಿ
ಬಹುವಿಡಂಗದ ಪ್ರಕೃತಿಯ ಮರದೇಳಿ
ನಿಮ್ಮ ಭಕ್ತಿಮುಕ್ತಿಯ ಲಿಂಗದ ಕೂಟವ ನೆನೆದೇಳಿ
ನಿಮ್ಮ ಗುರುವಾಜ್ಞೆಯ

ನಿಮ್ಮ ವಿರಕ್ತಿ ಅರಿವಿನ ಸಾವಧಾನವನರಿದೇಳಿ ಸಾರಿದೆ
ಎವೆ ಹಳಚಿದಡಿಲ್ಲ
ಶುದ್ಧಸಿದ್ಧಪ್ರಸಿದ್ಧಪ್ರಸನ್ನ ಕುರುಂಗೇಶ್ವರಲಿಂಗವ ಕೂಡಬಲ್ಲಡೆ

೧೨
ಅಂಗವೆ ಭೂಮಿಯಾಗಿ ಲಿಂಗವೆ ಬೆಳೆಯಾಗಿ
ವಿಶ್ವಾಸವೆಂಬ ಬತ್ತ ಒಲಿದು ಉಂಡು
ಸುಖಿಯಾಗಿರಬೇಕೆಂದ ಕಾಮಭೀಮ ಜೀವಧನದೊಡೆಯ

೧೩
ಅಂಗಸಂಗದಲ್ಲಿದ್ದು ಬಂದುದನೆ ಕಂಡು
ಹಾ(ಆ)ವು ಹಸು ಮಗುವಿನಂತೆ ಆದೆ ನೋಡವ್ವಾ
ಕಂಗಳ ನೋಟದ ಸುಖಕ್ಕೆ ಮನವನೊಪ್ಪಿಸುವೆ
ಪತಂಗದ ಬೆಸನಿಯಂತೆ ಆದೆ ನೋಡವ್ವಾ
ಮದಾಳಿಯ ನಾಸಿಕದಂತೆ ಸುಳಿದು ಸುಖಬಡುವೆ
ಮಹಾಲಿಂಗ ಗಜೇಶ್ವರಾ ನಿನ್ನ ವಿನಯ ನೋಡವ್ವಾ

೧೪
ಅಂಜಿದಡೆ ಮಾಣದು
ಅಳುಕಿದಡೆ ಮಾಣದು
ವಜ್ರಪಂಜರದೊಳಗಿದ್ದಡೆ ಮಾಣದು
ತಪ್ಪದುವೋ ಲಲಾಟಲಿಖಿತ
ಕಕ್ಕುಲತೆಗೆ ಬಂದಡೆ ಆಗದು ನೋಡಾ
ಧೃತಿಗೆಟ್ಟು ಮನ ಧಾತುಗೆಟ್ಟಡೆ
ಅಪ್ಪುದು ತಪ್ಪದು ಕೂಡಲಸಂಗಮದೇವಾ

೧೫
ಅಂತರಂಗ ಸನ್ನಹಿತ ಬಹಿರಂಗ ನಿಶ್ಚಿಂತವೋ
ಅಯ್ಯ
ತನು ತನ್ನ ಸುಖ ಮನ ಪರಮಸುಖವೋ

ಅದು ಕಾರಣ ಕಾಯ ವಾಯವೋ
ಗುಹೇಶ್ವರ ನಿರಾಳವೋ
ಅಯ್ಯ

೧೬
ಅಂತರಂಗದ ಅರಿವು ಬಹಿರಂಗದ ಕ್ರಿಯೆ
ಈ ಉಭಯಸಂಪುಟ ಒಂದಾದ ಶರಣಂಗೆ
ಹಿಂಗಿತ್ತು ತನುಸೂತಕ ಹಿಂಗಿತ್ತು ಮನಸೂತಕ
ಕೂಡಲಚೆನ್ನಸಂಗಯ್ಯಲ್ಲಿ
ಸಂಗವಾದುದು ಸರ್ವೇಂದ್ರಿಯ

೧೭
ಅಂತರಂಗದ ಭಕ್ತಿ ಹಾದರಗಿತ್ತಿಯ ತೆರನಂತೆ
ಬಹಿರಂಗದ ಭಕ್ತಿ ವೇಶಿಯ ತೆರನಂತೆ
ಅಂತರಂಗವೂ ಇಲ್ಲ ಬಹಿರಂಗವೂ ಇಲ್ಲ
ಶರಣನ ನಿಲವು ಬೇರೆ ಕೂಡಲಚೆನ್ನಸಂಗಾ
ನಿಮ್ಮ ಶರಣನ ಪರಿ ಬೇರೆ

೧೮
ಅಂದಂದಿನ ಮಾತ ಅಂದಂದಿಂಗೆ ಅರಿಯಬಾರದು
ಹಿಂದೆ ಹೋದ ಯುಗಪ್ರಳಯಂಗಳ ಬಲ್ಲವರಾರಯ್ಯ
ಮುಂದೆ ಬಪ್ಪ ಯುಗಪ್ರಳಯಂಗಳ ಬಲ್ಲವರಾರಯ್ಯ
ಬಸವಣ್ಣನು ಆದಿಯಲ್ಲಿ ಲಿಂಗ ಶರಣನೆಂಬುವ ಭೇದಿಸಿ ನೋಡಿ
ಅರಿವರಿನ್ನಾರಯ್ಯ
[ಲಿಂಗ ಜಂಗಮ ಪ್ರಸಾದದ ಮಹಾತ್ಮೆಗೆ ಬಸವಣ್ಣನೆ
ಆದಿಯಾದನೆಂಬುದನರಿದ ಸ್ವಯಂಭುಜ್ಞಾನಿ]
ಗುಹೇಶ್ವರಲಿಂಗದಲ್ಲಿ [ಚೆನ್ನಬಸವಣ್ಣನೊಬ್ಬನೆ]

೧೯
ಅಂದಣವನೇರಿದ ಸೊಣಗನಂತೆ
ಕಂಡಡೆ ಬಿಡದು ನೋಡಾ ತನ್ನ ಮುನ್ನಿನ ಸ್ವಭಾವವನು

ಸುಡು ಸುಡು ಮನವಿದು ವಿಷಯಕ್ಕೆ ಹರಿವುದು
ಮೃಡ ನಿಮ್ಮನನುದಿನ ನೆನೆಯಲೀಯದು
ಎನ್ನೊಡೆಯ ಕೂಡಲಸಂಗಮದೇವಾ
ನಿಮ್ಮ ಚರಣವ ನೆನೆವಂತೆ ಕರುಣಿಸು
ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ

೨೦
ಅಂದಿನವರು ಇಂದಿನವರು ಎಂಬ ಸಂದೇಹಿಗಳಿಗೆ
ಸಂದೇಹ ಮುಂದುಗೊಂಡಿಪ್ಪುದು
ನೋಡ
ಅಂದೊಂದು ಪರಿ ಇಂದೊಂದು ಪರಿಯೆ
ಗುರುಲಿಂಗಜಂಗಮ ಅಂದೊಂದು ಪರಿ ಇಂದೊಂದು ಪರಿಯೆ
ಪಾದೋದಕ ಪ್ರಸಾದ ಅಂದೊಂದು ಪರಿ ಇಂದೊಂದು ಪರಿಯೆ
ಶರಣಲಿಂಗಸಂಬಂಧ ಅಂದೊಂದು ಪರಿ ಇಂದೊಂದು ಪರಿಯೆ
ಅರಿವು ಆಚರಣೆ ಅಂದೊಂದು ಪರಿ ಇಂದೊಂದು ಪರಿಯೆ
ಸ್ಥಲಕುಳಂಗಳು ಅಂದೊಂದು ಪರಿ ಇಂದೊಂದು ಪರಿಯೆ
ಸೌರಾಷ್ಟ್ರ ಸೋಮೇಶ್ವರಲಿಂಗವು ಅಂದೊಂದು ಪರಿ
ಇಂದೊಂದು ಪರಿಯೆ

೨೧
ಅಂದಿನವರು ನಡೆದ ದಾರಿ ಇಂದಿನವರು ನಡೆಯರು
ಇಂದಿನವರು ನಡೆದ ದಾರಿ ಅಂದಿನವರು ಕಾಣರು
ಅಂದಿಂದೆಂಬ ದ್ವಂದ್ವ ಭೇದವನೆಂದೆಂದು ಕಾಣೆ ನೋಡ
ಕಪಿಲಸಿದ್ಧಮಲ್ಲಿಕಾರ್ಜುನಾ

೨೨
ಅಂಧಕನ ಕೈಯ ಅಂಧಕ ಹಿಡಿದಂತಿರಬೇಕು
ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತಿರಬೇಕು
ದರ್ಪಣದೊಳಗಣ ಪ್ರತಿಬಿಂಬದಂತೆ
ಹಿಡಿವರಿಗಳವಲ್ಲದಿರಬೇಕು ಅಣ್ಣಾ
ಕೂರ್ಮನ ಶಿಶುವಿನ ಸ್ನೇಹದಂತೆ ಇರಲೊಲ್ಲದೆ
ಆರೂಢಗೆಟ್ಟೆಯೊ ಅಜಗಣ್ಣಾ

೨೩

ಅಂಬಿಗನು ಜಗದೊಳಗೆ ಇಂಬಿಲೋಲಾಡುವನು
ತುಂಬಿದ ಸಾಗರದೊಳಗೆ ನೋಡಯ್ಯ
ನಿಂದ ದೋಣಿಯನೇರಿದಂದಿನ ಹುಟ್ಟ
ಕಂಡವರಂದವನರಿದಾತ ತೊಳಸುತ್ತಿದ್ದನು
ಛಂದಗೆಟ್ಟವರೆಲ್ಲಾ ಬಂದೇರಿ ದೋಣಿಯನು
ಶಿವನೊಂದೆ ಠಾವಿಗೊಯ್ದಿಳುಹುವೆನೆಂದನಂಬಿಗ ಚೌಡಯ್ಯ

೨೪

ಅಂಬಿನ ಹಿಳಿಕಿನಲ್ಲಿ ಕಟ್ಟಿದ ವಿಹಂಗನ ಗರಿಯಂತೆ
ತಾಗುವ ಮೊನೆಗಾಧಾರವಾಗಿ
ದೂರ ಎಯಿದುವುದಕೆ ಸಾಗಿಸುವ ಗುಣ ತಾನಾಗಿ
ಕ್ರೀ ಅರಿವಿನ ಭೇದದ ನೆರಿಗೆಯ ಕಾಬನ್ನಕ್ಕ
ಅರಿವು ಕುರುಹು ಎರಡು ಬೇಕೆಂದನಂಬಿಗ ಚೌಡಯ್ಯ

೨೫

ಅಂಬುವಿಲ್ಲದಿರ್ದಡೆ ಅಂಬುಜವನಾರು ಬಲ್ಲರು
ನೀರಿಲ್ಲದಿರ್ದಡೆ ಹಾಲನಾರು ಬಲ್ಲರು
ನಾನಿಲ್ಲದಿರ್ದಡೆ ನಿನ್ನನಾರು ಬಲ್ಲರು
ನಿನಗೆ ನಾ ನನಗೆ ನೀ
ನಿನಗೂ ನನಗೂ ಬೇರೊಂದು ನಿಜವುಂಟೆ
ನಿಃಕಳಂಕ ಮಲ್ಲಿಕಾರ್ಜುನಾ

೨೬

ಅಕಟಕಟಾ ಶಿವ ನಿನಗಿನಿತು ಕರುಣವಿಲ್ಲ
ಅಕಟಕಟಾ ಶಿವ ನಿನಗಿನಿತು ಮರುಕವಿಲ್ಲ
ಏಕೆ ಹುಟ್ಟಿಸಿದೆ
ಇಹಲೋಕ ದುಃಖಿಯ ಪರಲೋಕದೂರನ
ಏಕೆ ಹುಟ್ಟಿಸಿದೆ
ಕೂಡಲಸಂಗಮದೇವಾ ಕೇಳಯ್ಯಾ
ಎನಗಾಗಿ ಮತ್ತೊಂದು ತರುಮರನಿಲ್ಲವೆ

೨೭
ಅಕ್ಕ ಕೇಳೌ ಅಕ್ಕಯ್ಯಾ
ನಾನೊಂದು ಕನಸ ಕಂಡೆ
ಅಕ್ಕಿ ಅಡಕೆ ಓಲೆ ತೆಂಗಿನ ಕಾಯಿ ಕಂಡೆ
ಚಿಕ್ಕ ಚಿಕ್ಕ ಕೆಂಜೆಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವಾ
ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು

೨೮
ಅಕ್ಕಟಕ್ಕಟಾ ಸಂಸಾರದ ಹಗರಣ ಬಂದಾಡಿತ್ತಲ್ಲಾ
ಅಪ್ಪಾ ಬೊಪ್ಪಾ ಎಂಬ ಚೋಹವು
ಅದು ಮೊಟ್ಟಮೊದಲಲ್ಲಿ ಬಂದಾಡಿತ್ತು
ತುಪ್ಪುಳು ತೊಡೆದಂತೆ ಮೀಸೆಯ ಚೋಹವು
ಅದು ನಟ್ಟನಡುವೆ ಬಂದಾಡಿತ್ತು
ಮುಪ್ಪು ಮುಪ್ಪು ಎಂಬ ಚೋಹವು
ಅದು ಕಟ್ಟಕಡೆಯಲಿ ಬಂದಾಡಿತ್ತು
ನಿಮ್ಮ ನೋಟವು ತೀರಲೊಡನೆ
ಜಗದಾಟವು ತೀರಿತ್ತು ಕಾಣಾ
ಚೆನ್ನಮಲ್ಲಿಕಾರ್ಜುನಾ

೨೯
ಅಕ್ಷರವ ಬಲ್ಲೆವೆಂದು ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯ
ಗುರುಹಿರಿಯರು ತೋರಿದ ಉಪದೇಶದಿಂದ
ವಾಗದ್ವೈತವ ಕಲಿತು ವಾದಿಪರಲ್ಲದೆ
ಆಗುಹೋಗೆಂಬುದನರಿಯರು
ಭಕ್ತಿಯನರಿಯರು ಮುಕ್ತಿಯನರಿಯರು ಯುಕ್ತಿಯನರಿಯರು
ಮತ್ತೂ ವಾದಿಗೆಳಸುವರು
ಹೋದರು ಗುಹೇಶ್ವರ ಸಲೆ ಕೊಂಡ ಮಾರಿಂಗೆ

೩೦

ಅಗಲಲಿಲ್ಲದ ನಲ್ಲನನಗಲಿ ನೆರೆದೆಹೆನೆಂಬ
ಕಾಮಿನಿಯರ ಭಂಗವ
ನೋಡಾ
ಆ ನಮ್ಮ ನಲ್ಲನ ಅನುವಿನೊಳಿರ್ದು
ನೆರೆದೆಹೆನೆಂಬ ಭರವೆನಗವ್ವಾ
ಮಹಾಲಿಂಗ ಗಜೇಶ್ವರದೇವರನಗಲುವಡೆ
ನಾನೇನು ಕಲ್ಲುಮನದವಳೆ ಅವ್ವಾ

೩೧

ಅಗಲಿದ ನಲ್ಲನ ಕನಸಿನಲಪ್ಪಿ ಸುಖಿಯಾದಿರವ್ವಾ
ಕಂಡ ಕನಸು ದಿಟವಾದಡೆ ಅವ ನಮ್ಮ ನಲ್ಲನವ್ವಾ
ಮನಸುಳ್ಳವರು ನೀವು ಪುಣ್ಯಗೈದಿರವ್ವಾ
ಮಹಾಲಿಂಗ ಗಜೇಶ್ವರನನಗಲಿದಡೆ ನಿದ್ರೆಯೆಮಗಿಲ್ಲ
ಕನಸಿನ್ನೆಲ್ಲಿ ಬಹುದವ್ವಾ

೩೨

ಅಗ್ಘವಣಿಗಡಿವಜ್ಜೆಯುಂಟೆ
ವಾಯುವ ಹಿಡಿದು ಬಂಧಿಸಬಹುದೆ
ಅನಲಂಗೆ ತಾಳು ತುದಿ ಸುಡುವುದಕ್ಕೆ ಬೇರೆ ಭಿನ್ನವುಂಟೆ
ಸುಗಂಧಕ್ಕೆ ಬುಡ ತುದಿಯಿಲ್ಲ
ಅರ್ಕೇಶ್ವರಲಿಂಗವನರಿದುದಕ್ಕೆ ಎಲ್ಲಿಯೂ ತಾನೆ

೩೩

ಅಗ್ನಿ ಸುಡಲಲ್ಲದೆ ಸುಳಿಯಲರಿಯದು
ವಾಯು ಸುಳಿವುದಲ್ಲದೆ ಸುಡಲರಿಯದು
ಆ ಅಗ್ನಿ ವಾಯುವ ಕೂಡಿದಲ್ಲದೆ ಅಡಿಯಿಡಲರಿಯದು
ಈ ಪರಿಯಂತೆ ನರರರಿವರೆ ಕ್ರಿಯಾಜ್ಞಾನಭೇದವ ರಾಮನಾಥ

೩೪

ಅಗ್ನಿಗೆ ತಂಪುಂಟೆ ವಿಷಕ್ಕೆ ರುಚಿಯುಂಟೆ ಹೇಳಾ
ಕಂಗಳಿಗೆ ಮರೆಯುಂಟೆ ಹೇಳೈ ಲಿಂಗವೆ

ದಾಳಿಕಾರಂಗೆ ಧರ್ಮವುಂಟೆ
ಕಂಗಳಿಗೆ ಕರುಳುಂಟೆ ಗುಹೇಶ್ವರ
ನಿಮ್ಮ ಶರಣರು ಮೂರುಲೋಕವರಿಯೆ ನಿಶ್ಚಿತರಯ್ಯ

೩೫
ಅಘಟಿತ ಘಟಿತನ ಒಲವಿನ ಶಿಶು
ಕಟ್ಟಿದೆನು ಜಗಕ್ಕೆ ಬಿರಿದನು
ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳಿಗೆ
ಇಕ್ಕಿದೆನು ಕಾಲಲಿ ತೊಡರನು
ಗುರುಕೃಪೆಯೆಂಬ ತಿಗುರನಿಕ್ಕಿ
ಮಹಾಶರಣೆಂಬ ತಿಲಕವನಿಕ್ಕಿ
ನಿನ್ನ ಕೊಲುವೆ ಗೆಲುವೆ ಶಿವಶರಣೆಂಬ ಅಲಗ ಕೊಂಡು
ಬಿಡು ಬಿಡು ಕರ್ಮವೆ
ನಿನ್ನ ಕೊಲ್ಲದೆ ಮಾಣೆನು
ಕೆಡಹಿಸಿಕೊಳ್ಳದೆನ್ನ ನುಡಿಯ
ಕೇಳಾ
ಕೆಡದ ಶಿವಶರಣೆಂಬ ಅಲಗನೆ ಕೊಂಡು
ನಿನ್ನ ಕೊಲುವೆ ಗೆಲುವೆ ನಾನು
ಬ್ರಹ್ಮಪಾಶವೆಂಬ ಕಳನನೆ ಸವರಿ
ವಿಷ್ಣು ಮಾಯೆಯೆಂಬ ಎಡೆಗೋಲನೆ ನೂಕಿ
ಎನ್ನೊಡೆಯ ಚೆನ್ನಮಲ್ಲಿಕಾರ್ಜುನಯ್ಯ
ತಲೆದೂಗಲಿ ಕಾದುವೆನು ನಾನು

೩೬
ಅಜಕೋಟಿ ಕಲ್ಪ ವರುಷದವರೆಲ್ಲರು ಹಿರಿಯರೆ
ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ
ನಡುಮುರಿದು ಗುಡುಗೂರಿ
ತಲೆ ನಡುಗಿ ನೆರೆತೆರೆ ಹೆಚ್ಚಿ
ಧೃತಿಗೆಟ್ಟು ಒಂದನಾಡ ಹೋಗಿ ಒಂಬತ್ತನಾಡುವ
ಅಜ್ಞಾನಿಗಳೆಲ್ಲರು ಹಿರಿಯರೆ
ಅನುವನರಿದು ಘನವ ಬೆರಸಿ

ಹಿರಿದು ಕಿರಿದೆಂಬ ಭೇದವ ಮರೆದು
ಕೂಡಲಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ
[ನಮ್ಮ ಮಹಾದೇವಿಯಕ್ಕಂಗಾಯಿತ್ತು]

೩೭
ಅಜ್ಞಾನವೆಂಬ ತೊಟ್ಟಿಲೊಳಗೆ
ಜ್ಞಾನವೆಂಬ ಶಿಶುವ ಮಲಗಿಸಿ
ಸಕಲ ವೇದಶಾಸ್ತ್ರವೆಂಬ ನೇಣಕಟ್ಟಿ
ಹಿಡಿದು ತೂಗಿ ಜೋಗುಳವಾಡುತ್ತಿದಾಳೆ
ಭ್ರಾಂತಿಯೆಂಬ ತಾಯಿ
ತೊಟ್ಟಿಲು ಮುರಿದು ನೇಣು ಹರಿದು
ಜೋಗುಳ ನಿಂದಲ್ಲದೆ
ಗುಹೇಶ್ವರನೆಂಬ ಲಿಂಗವ ಕಾಣಬಾರದು

೩೮
ಅಟ್ಟಡವಿಯಲ್ಲಿ ಬಿಟ್ಟುಹೋದಿರಿ ಬಸವಯ್ಯಾ
ನಟ್ಟನಡುಗ್ರಾಮವ ಕೆಡಿಸಿಹೋದಿರಿ ಬಸವಯ್ಯಾ
ಹುಟ್ಟಿಲ್ಲದ ಬಂಜೆಗೆ ಮಕ್ಕಳಕೊಟ್ಟಿರಿ ಬಸವಯ್ಯಾ
ಆ ಮಕ್ಕಳ ಫಲವಿಲ್ಲದಂತೆ ಮಾಡಿದಿರಿ ಬಸವಯ್ಯಾ
ಸಂಗಯ್ಯನಲ್ಲಿ ನೀನೆಂತಪ್ಪ ಮಹಿಮನಯ್ಯಾ ಬಸವಯ್ಯಾ

೩೯
ಅಟ್ಟದ ಮೇಲೆ ಹರಿದಾಡುವ ಇಲಿ
ಕಾದಿರ್ದ ಬೆಕ್ಕ ತಪ್ಪಿಸಿ
ಬೆಕ್ಕಿನ ಕಣ್ಣೊಳಡಗಿತ್ತು
ಕಣ್ಣೂ ಇಲಿಯೂ ಕೂಡಿ ಗುಹೇಶ್ವರಲಿಂಗವ
ಕಂಡುದಿಲ್ಲಾ

೪೦
ಅಟ್ಟಿ ಹಾವುತಲೊಮ್ಮೆ ಹೋಗಿ
ನಿಲುತಲೊಮ್ಮೆ ಬೀಗಿ

ನಗುತ್ತಲೊಮ್ಮೆ ಮರುಳಿನಂತೆ ಮಂಕಿನಂತೆ ದೆಸೆದೆಸೆಯ ನೋಡುತ್ತ
ಅಂಗಡಿ ರಾಜಬೀದಿಯ ಶೃಂಗಾರಂಗಳ ನಲಿನಲಿದು ನೋಡುತ್ತ
ಇತ್ತರದ ಭದ್ರದ ಮೇಲೆ ನಾಟ್ಯವನಾಡುವವರ ನೋಡಿ ನಗುತ್ತ
ನೋಡುವ ಗಾವಳಿಯ ಜನರನಟ್ಟಿ ಹೊಯಿವಂತೆ ಹರಿವುತ್ತ
ಗುದಿಯಿಕ್ಕಿದಂತೆ ನಿಂದಿರೆ ಬೀಳುತ್ತ
ನಾಟ್ಯವನಾಡುವವವರಿಗೆ ಇದಿರಾಗಿ ತಾ ಮರಳಿಯಾಡುತ್ತ
ಹಾಡುತ್ತ ಬೈವುತ್ತ ಕೆರಳಿ ನುಡಿವುತ್ತ
ವಾದ್ಯ ಮೇಳಾಪವ ಕಂಡು ಆಳಿಗೊಂಡು ನಗುತ್ತ
ಹಸ್ತವನಾಡಿಸಿ ಗತಿಯ ಮಚ್ಚರಿಸಿ ಕೈಯೊಡನೆ
ಮರುಳಾಟವನಾಡುತ್ತ
ಮೆಲ್ಲಮೆಲ್ಲನೆ ನಿಂದು ನೋಡಿ ನಡೆವುತ್ತ
ಎಂದಿನ ಸುಳುಹಿನೊಳಗಲ್ಲದ ಸುಳುಹು ಬಸವಣ್ಣ ನಿಮ್ಮಾಣೆ
ಸೊಡ್ಡಳನಾಗದೆ ಮಾಣನು

೪೧

ಅಟ್ಟೆಯ ಚುಚ್ಚುವ ಉಳಿಯ ಮೊನೆಯಲ್ಲಿ
ಪ್ರತ್ಯಕ್ಷವಾದ ಪರಮೇಶ್ವರನ ಕಂಡು
ಇತ್ತಲೇಕಯ್ಯಾ ಕಾಯದ ತಿತ್ತಿಯ ಹೊತ್ತಾಡುವನ ಮುಂದೆ
ನಿನ್ನ ಭಕ್ತರ ಠಾವಿನಲ್ಲಿಗೆ ಹೋಗಿ ಮುಕ್ತಿಯ ಮಾಡು
ನೀ ಹೊತ್ತ ಬಹುರೂಪ[ದಿ] ತಪ್ಪದೆ
ರಜತಬೆಟ್ಟದ ಮೇಲಕ್ಕೆ ಹೋಗು
ನಿನ್ನ ಭಕ್ತರ ಮುಕ್ತಿಯ ಮಾಡು
ಕಾಮಧೂಮ ಧೂಳೇಶ್ವರನ ಕರುಣದಿಂದ ನೀನೆ ಬದುಕು

೪೨

ಅಡವಿಗೆ ಹೋಗಿ ಏವೆನು
ಮನದ ರಜ ತಮ ಬಿಡದು
ಆಡ ಕಾವನ ತೋರಿ
ಗಿಡುವ ಕಡಿವನ ಬಡಿದೆ
ಆಶ್ರಮವ ಕೆಡಿಸಿತ್ತಲ್ಲಾ
ಸಕಳೇಶ್ವರದೇವಾ
ನಿನ್ನ ಮಾಯೆ ಎತ್ತಹೋದಡೂ ಬೆನ್ನಬಿಡದು

೪೩

ಅಡವಿಯಲ್ಲಿ ತಡೆಗಡಿದ ಪಶುವಿನಂತಾದೆವಾವೆಲ್ಲ
ಅಯ್ಯಾ
ಅಕ್ಕಟಾ ಒಡೆಯರಿಲ್ಲದ ಅನಾಥರಾದೆವಾವೆಲ್ಲ
ಅಯ್ಯಾ
ಅಕ್ಕಟಾ ನಮಗಿನ್ನು ದಿಕ್ಕಾರು ದೆಸೆಯಾರು
ಅಕ್ಕಟಾ ನಮಗಿನ್ನು ಒಡೆಯರಾರು ಹೇಳಾ ತಂದೆ
ಅಯ್ಯಾ ಶ್ರೀಮಲ್ಲಿನಾಥಲಿಂಗಾ ಅವಧರಿಸು ಎನ್ನ ಬಿನ್ನಹವ
ಗಣಾಚಾರಕ್ಕೆ ಬುದ್ಧಿಗಲಿಸುವುದೆನ್ನ ತಂದೆ

೪೪

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯಾ ತಂದೆ
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯಾ ತಂದೆ
ನಿಮ್ಮ ಶರಣರ ಪಾದವಲ್ಲದೆ ಅನ್ಯ ವಿಷಯಕ್ಕೆಳಸದಂತೆ
ಇರಿಸು ಕೂಡಲಸಂಗಮದೇವಾ

೪೫

ಅತ್ತೆ ಮಾಯೆ ಮಾವ ಸಂಸಾರಿ
ಮೂವರು ಮೈದುನರು ಹುಲಿಯಂತವದಿರು
ನಾಲ್ವರು ನಗೆವೆಣ್ಣು ಕೇಳು ಕೆಳದಿ
ಐವರು ಭಾವದಿರನೊಯ್ವ ದೈವವಿಲ್ಲ
ಆರು ಪ್ರಜೆಯತ್ತಿಗೆಯರ ಮೀರಲಾರೆನು
ತಾಯೆ ಹೇಳುವಡೆ ಏಳು ಪ್ರಜೆ ತೊತ್ತಿರ ಕಾಹು
ಕರ್ಮವೆಂಬ ಗಂಡನ ಬಾಯ ಟೊಣೆದು
ಹಾದರವನಾಡುವೆನು ಹರನಕೂಡೆ
ಮನವೆಂಬ ಸಖಿಯ ಪ್ರಸಾದದಿಂದ
ಅನುಭಾವವ ಕಲಿತೆನು ಶಿವನೊಡನೆ
ಕರಚೆಲುವ ಶ್ರೀಶೈಲ ಚೆನ್ನಮಲ್ಲಿಕಾರ್ಜುನನೆಂಬ
ಸಜ್ಜನದ ಗಂಡನ ಮಾಡಿಕೊಂಡೆ

೪೬

ಅದು ಬೇಕು ಇದು ಬೇಕುಯೆಂಬರು
ಎದೆಗುದಿಹ ಬೇಡ
ಸುದೈವನಾದಡೆ ಸಾಕು
ಪಡಿಪದಾರ್ಥ ತಾನಿದ್ದೆಡೆಗೆ ಬಹುದು
ನಿಧಿ ನಿಕ್ಷೇಪಗಳಿದ್ದೆಡೆಗೆ ಬಹವಯ್ಯಾ
ಹೃದಯಶುದ್ಧನಾಗಿ ಸಕಳೇಶ್ವರಾ ಶರಣೆಂದಡೆ
ನಿಜಪದವನೀವ

೪೭

ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು
ಶಿಶುಕಂಡ ಕನಸಿನಂತಿರಬೇಕಲ್ಲದೆ
ನುಡಿದು ಹೇಳುವನ್ನಕ್ಕರ ಭಿನ್ನವಲ್ಲದೇನು
ಹೇಳಾ
ಅರಿವರತು ಮರಹು ನಷ್ಟವಾಗಿ ಗುರುವ ತೋರಿದೆನೆಂಬರು
ಇದಿರಿಂಗೆ ಕರುಳಕಲೆಯನರುಹುವ ಪರಿಯೆಂತು
ಹೇಳಾ
ಮನದ ಕೊನೆಯ ಮೊನೆಯ ಮೇಲಣ ಅರಿವಿನ ಕಣ್ಣಮುಂದೆ
ಸ್ವಯಂಪ್ರಕಾಶ ತೋರುತ್ತಿದ್ದಡೆ ತಾನಾಗಬಲ್ಲನೆ
ನೆರೆಯರಿತು ಮರೆಯಬಲ್ಲಡೆ
ಎನ್ನ ಅಜಗಣ್ಣನಂತೆ ಶಬ್ದಮುಗ್ಧನಾಗಿರಬೇಕಲ್ಲದೆ
ಶಬ್ದಸಂದಣಿಯ ಮಾತು ಸಯವಲ್ಲ ನೋಡಯ್ಯಾ

೪೮

ಅನವರತ ಮಾಡಿಹೆನೆಂದು ಉಪ್ಪರ ಗುಡಿಯ ಕಟ್ಟಿ ಮಾಡುವ
ಭಕ್ತನ ಮನೆಯದು ಲಂದಣಗಿತ್ತಿಯ ಮನೆ
ಸರ್ವಜೀವದಯಾಪಾರಿಯೆಂದು ಭೂತದೇಹಕಿಕ್ಕುವನ ಮನೆ
ಸಯಿದಾನದ ಕೇಡು
ಸೂಳೆಯ ಮಗ ಮಾಳವ ಮಾಡಿದಡೆ
ತಾಯ ಹೆಸರಾಯಿತ್ತಲ್ಲದೆ
ತಂದೆಯ ಹೆಸರಿಲ್ಲ ಕೂಡಲಸಂಗಮದೇವಾ

೪೯

ಅನುಭಾವ ಅನುಭಾವವೆಂದೆಂಬಿರಿ
ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿ ಭೋ
ಅನುಭಾವವೆಂಬುದು ಶಿಶು ಕಂಡ ಕನಸು ಕಾಣಿ ಭೋ
ಅಂತರಂಗದ ಶುದ್ಧಿ ಕಾಣಿ ಭೋ
ಅನುಭಾವವೆಂಬುದು ರಚ್ಚೆಯ ಮಾತೆ
ಅನುಭಾವವೆಂಬುದು ಸಂತೆಯ ಸುದ್ದಿಯೆ
ಅನುಭಾವವೆಂಬುದೇನು ಬೀದಿಯ ಪಸರವೆ
ಏನೆಂಬೆ ಹೇಳಾ ಮಹಾಘನವನು
ಆನೆಯ ಮಾನದೊಳಗಿಕ್ಕಿದರಡಗುವುದೆ
ದರ್ಪಣದೊಳಗಡಗುವುದಲ್ಲದೆ
ಕಂಡ ಕಂಡಲ್ಲಿ ಗೋಷ್ಠಿ
ನಿಂದ ನಿಂದಲ್ಲಿ ಅನುಭಾವ
ಬಂದ ಬಂದಲ್ಲಿ ಪ್ರಸಂಗವ ಮಾಡುವ
ಪಾತಕರ ತೋರದಿರಯ್ಯಾ
ಕೂಡಲಚೆನ್ನಸಂಗಮದೇವ

೫೦

ಅನೇಕ ತರದ ಯೋನಿಮುಖಂಗಳ ಪೊಕ್ಕು
ನೀರ್ಗುಡಿಯಲು ಪೋದಡೆ
ಸುಡು ಪೋಗೆಂದು ನೂಂಕಿತ್ತೆ ಜಲ
ಅದರಂತಿರಬೇಡ ಹಿರಿಯರ ಮನ
ಮನವಿಚ್ಛಂದವಾಗದೊಂದೆಯಂದದಲಿಪ್ಪಂತಪ್ಪಾ
ನಿಮ್ಮದೊಂದು ಸಮತಾಗುಣವೆನ್ನನೆಂದು ಬಂದು ಪೊದ್ದಿರ್ದುದು
ಹೇಳಾ ಕಪಿಲಸಿದ್ಧಮಲ್ಲಿಕಾರ್ಜುನಾ

೫೧

ಅನೇಕ ಪರಿಯ ಭಕ್ತಿಯ ವೇಷವನಳವಡಿಸಿಕೊಂಡು
ಮನೆಮನೆದಪ್ಪದೆ ತಿರುಗುವೆನು
ಅವರ ಇಚ್ಛೆಗೆ ಅನುಮಾನವಿಡಿದು ನುಡಿವೆನು
ಅವರ ಮನಧರ್ಮವನರಿಯದೆ ನುಡಿದೆನಾದಡೆ

ಅನೇಕ ಪರಿಯಲ್ಲಿ ಭಂಗಬಡುವೆನು
ದಿಟದ ಭಕುತನಂತೆ
ಪುರಾತನ ವಚನಂಗಳ ಉದರ ನಿಮಿತ್ತವಾಗಿ ಬಳಸುವೆನು
ಕಡು ಪಾಪಿಗಿನ್ನೇನು ಹದನಯ್ಯ
ಬಸವಪ್ರಿಯ ಕೂಡಲಚೆನ್ನ ಸಂಗಮದೇವಾ

೫೨
ಅನ್ನವ ನೀಡುವವರಿಂಗೆ ಧಾನ್ಯವೆಸೆವ ಲೋಕ
ಅರ್ಥವ ಕೊಡುವವರಿಂಗೆ ಪಾಷಾಣವೆಸೆವ ಲೋಕ
ಹೆಣ್ಣು ಹೊನ್ನು ಮಣ್ಣು ಮೂರನೂ
ಕಣ್ಣಿನಲಿ ನೋಡಿ ಕಿವಿಯಲಿ ಕೇಳಿ
ಕೈಯಲಿ ಮುಟ್ಟಿ ಮಾಡುವ ಭಕ್ತಿ
ಸಣ್ಣವರ ಸಮಾರಾಧನೆಯಾಯಿತ್ತು
ತನ್ನನಿತ್ತು ತುಷ್ಟಿವಡೆವರನೆನಗೆ ತೋರಾ
ಶ್ರೀಗಿರಿ ಚೆನ್ನಮಲ್ಲಿಕಾರ್ಜುನಾ

೫೩
ಅನ್ನವನಿಕ್ಕಿದಡೇನು ಪುಣ್ಯವಹುದು
ವಸ್ತ್ರವ ಕೊಟ್ಟಡೇನು ಧರ್ಮವಹುದು
ಹಣವ ಕೊಟ್ಟಡೇನು ಕೀರ್ತಿಯಹುದು
ತ್ರಿಕರಣ ಶುದ್ಧವಾದಡೇನು ಮುಕ್ತಿಯಹುದು
ಕೂಡಲಚೆನ್ನಸಂಗಯ್ಯನನಲ್ಲಿ

೫೪
ಅಪರಿಮಿತದ ಕತ್ತಲೆಯೊಳಗೆ
ವಿಪರೀತದ ಬೆಳಗನಿಕ್ಕಿದವರಾರೋ
ಬೆಳಗೂ ಅದೆ ಕತ್ತಲೆಯೂ ಅದೆ
ಇದೇನು ಚೋದ್ಯವೋ ಒಂದಕ್ಕೊಂದಂಜದು
ಆನೆಯೂ ಸಿಂಹವೂ ಒಂದಾಗಿ ಉಂಬುದ ಕಂಡು
ಬೆರಗಾದೆನು ಕಾಣಾ ಗುಹೇಶ್ವರ

೫೫
ಅಪಾರ ಘನಗಂಭೀರದ ಅಂಬುಧಿಯಲ್ಲಿ
ತಾರಾಪಥವಂ ನೋಡಿ ನಡೆಯೆ
ಛೈತ್ರದಿಂದ ದ್ವೀಪ ದ್ವೀಪಾಂತರಕ್ಕೆ
ಸಕಲ ಪದಾರ್ಥವನೆಯ್ದಿಸುವುದು
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯನ
ಸಮೀಪ ತೂರ್ಯಸಂಭಾಷಣೆಯನರಿದಡೆ
ಮುನ್ನಿನಲ್ಲಿಗೆಯ್ದಿಸುವುದು

೫೬
ಅಪ್ಪನು ಡೋಹರ ಕಕ್ಕಯ್ಯನಾಗಿ
ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ
ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ
ಭಕ್ತಿಯ ಸದ್ಗುಣವ ನಾನು ಅರಿವೆನಯ್ಯಾ
ಕಷ್ಟಜಾತಿ ಜನ್ಮದಲಿ ಜನಿಯಿಸಿದೆ
ಎನಗಿದು ವಿಧಿಯೆ ಕೂಡಲಸಂಗಮದೇವಾ

೫೭
ಅಪ್ಪಾ ಬೊಪ್ಪಾ ಚಿಕ್ಕ ಚೋಹಮಂ ತೊಟ್ಟು
ಮುಖಕ್ಕೆ ಹೊತ್ತಿಗೊಂದು ಪರಿಯ ಬಚ್ಚಣೆಯನಿಕ್ಕಿ
ಮತ್ತದನು ತಲೆಯಲ್ಲಿ ಹೊತ್ತು ತಪ್ಪಿ ಹೆಜ್ಜೆಯನಿಕ್ಕಿ ಆಡುತ್ತಿದ್ದ
ರೇಕಣ್ಣಪ್ರಿಯ ನಾಗಿನಾಥನಲ್ಲಿ ಹೊತ್ತುಹೋಗದ ಬಹುರೂಪವ

೫೮
ಅಪ್ಪಿನ ಸೋಂಕಿನ ಸುಖವನಗಲುವ ಮನಕ್ಕಿಂದ
ಬಂಜೆಯಾಗಿಪ್ಪುದು ಕರಸುಖ ನೋಡವ್ವಾ
ಕಂಗಳ ನೋಟ ಮನಕ್ಕೆ ಸೈರಿಸದು
ಎಣೆಗೊಂಡು ಬಡವಾದ ಪರಿಯ ನೋಡವ್ವಾ
ತುಪ್ಪುಳನಿಕ್ಕಿದ ಹಂಸೆಯಂತಾದೆನವ್ವಾ
ಮಹಾಲಿಂಗ ಗಜೇಶ್ವರನುಳಿದಡೆ

೫೯

ಅಪ್ಪು ಅಪ್ಪುವ ನುಂಗಿದಂತೆ
ವಿಚಿತ್ರ ಚಿತ್ರದೊಳಡಗಿದಂತೆ
ಮನ ಮಹವ ಕೂಡಿ
ಬೆಳಗು ಬೆಳಗನೊಳಕೊಂಡಂತೆ
ತಾನೆಂಬುದೇನೂ ಕುರುಹುದೋರದೆ
ಮನಸಂದಿತ್ತು ಮಾರೇಶ್ವರಾ

೬೦

ಅಪ್ಪು ತುಂಬಿದ ಕುಂಭದಲ್ಲಿ ಕಿಚ್ಚು ಹಾಕಿ
ಕಟ್ಟಿಗೆಯನಿಕ್ಕಿ ಉರುಹಲಿಕ್ಕೆ ಆ ಅಪ್ಪುವ ಸುಟ್ಟುದುಂಟೆ ಕಿಚ್ಚು
ಆ ಕುಂಭದ ತಪ್ಪಲಿನಲ್ಲಿ ಕಟ್ಟಿಗೆಯನಿಕ್ಕಿ ಉರುಹಲಿಕ್ಕೆ
ಕುಂಭದ ಲೆಪ್ಪದ ಮರೆಯಲ್ಲಿ ಅಪ್ಪುವ ಸುಡಬಲ್ಲುದೆ
ಇದು ಕಾರಣ ಕ್ರೀಯ ಮರೆಯಲ್ಲಿರ್ದ ನಿಃಕ್ರೀ
ಶಿಲೆಯ ಮರೆಯಲ್ಲಿರ್ದ ನೆಲೆ ವಸ್ತುವ
ಚಿತ್ತದ ಒಲವರದಿಂದ ಅರಿಯಬೇಕು
ಚನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗವನರಿವಲ್ಲಿ

೬೧

ಅಪ್ಪುವಿನ ಶಿಲೆಯ ಉಳಿಯ ಮೊನೆಯಲ್ಲಿ ಚಿತ್ರಿಸಬಹುದೇ
ಅರಗಿನ ಘಟವ ಉರಿಯ ಮೊನೆಯಲ್ಲಿ ಅಕ್ಷರವ ಬರೆಯಬಹುದೆ
ಮೃತ್ತಿಕೆಯ ಹರುಗೋಲನೇರಿ ನದಿಯ ತಪ್ಪಲಿಗೆ ಹೋಗಬಹುದೆ
ನಿಜನಿಶ್ಚಯವನರಿಯದವನ ವಾಚಾರಚನೆ ಇಷ್ಟಲ್ಲದಿಲ್ಲ
ನಿಜತ್ವವನರಿದವನ ವಾಚಾರಚನೆಯ ಕುರುಹೆಂತುಟೆಂದಡೆ
ಶಿಲೆಯೊಳಗಣ ಸುರಭಿಯಂತೆ
ಪ್ರಳಯದೊಳಗಾದ ನಿಜನಿವಾಸದಂತೆ
ಆಯುದ ಘಾಯದಂತೆ ಸುಘಾಯದ ಸುಖದಂತೆ
ಇಂತೀ ಭಾವರಹಿತವಾದ ಭಾವಜ್ಞನ ತೇರ ಕೂಗಿಂಗೆ ಹೊರಗು
ಮಹಾಮಹಿಮ ಮಾರೇಶ್ವರಾ

೬೨

ಅಯ್ಯಾ ಎನ್ನ ನಾ ಸಂತೈಸಿ ಸಂತೈಸಲಾರೆನು
ಆಹಾ ಅಯ್ಯಾ ನಿನ್ನ ಕೂಟದ ಸವಿಗಳ ನೆನೆನೆನೆದು
ಬೇಯದ ಬೇಗೆಯ ನೋಡಯ್ಯಾ
ಅಯ್ಯಾ ಎನಗಂತಿಂತೆಂದು ಹೇಳುವ ನಲ್ಲ
ಮರೆಗೆ ಮರೆಯದ ಕಿಚ್ಚನಿಕ್ಕಿ ಹೋದೆಯಲ್ಲಾ
ಎನ್ನ ಕಪಿಲಸಿದ್ಧಮಲ್ಲೇಶ್ವರಯ್ಯಾ

೬೩

ಅಯ್ಯಾ ಅಯ್ಯಾ ಎಂದು ಕರೆವುತ್ತಲಿದ್ದೇನೆ
ಅಯ್ಯಾ ಅಯ್ಯಾ ಎಂದು ಒರಲುತ್ತಲಿದ್ದೇನೆ
ಓ ಎನ್ನಲಾಗದೆ ಅಯ್ಯಾ ಆಗಳೂ
ನಿಮ್ಮ ಕರೆವುತ್ತಲಿದ್ದೇನೆ ಮೋನವೇ
ಕೂಡಲಸಂಗಮದೇವಾ

೬೪

ಅಯ್ಯಾ ಎನ್ನ ಹಲ್ಲ ಮರೆಯಲ್ಲಿಪ್ಪ ಬೆಲ್ಲವ ಕಂಡು
ಎಲ್ಲರೂ ಮೆಲಬಂದರು
ಬೆಲ್ಲಗಳಿದ್ದಡೆ ನಿಲಲೀಸದೆ ಎನ್ನ ಕಾಡುತ್ತಿದಾರೆಯೆಂದು
ಆ ಬೆಲ್ಲವನಲ್ಲಿಯೆ ನುಂಗಿದಡೆ ಹಲ್ಲು ಮುರಿದವು
ಮೆಲಬಂದವರೆಲ್ಲ ಅಲ್ಲಿಯೆ ಬಯಲಾದರು
ನಾ ನಿಮ್ಮಲ್ಲಿ ಕೂಡಿ ಸುಖಿಯಾದೆನಯ್ಯಾ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

೬೫

ಅಯ್ಯಾ ಕತ್ತಲೆಯ ಕಳೆದುಳಿದ ಸತ್ಯಶರಣರ ಪರಿಯನೇನೆಂಬೆನಯ್ಯಾ
ಘನವನೊಳಕೊಂಡ ಮನದ ಮಹಾನುಭಾವಿಗಳ
ಬಳಿವಿಡಿದು ಬದುಕುವೆನಯ್ಯಾ
ಅಯ್ಯಾ ನಿನ್ನಲ್ಲಿ ನಿಂದು ಬೇರೊಂದರಿಯದ
ಲಿಂಗಸುಖಿಗಳ ಸಂಗದಲ್ಲಿ ದಿನವ ಕಳೆಯಿಸಯ್ಯಾ
ಚೆನ್ನಮಲ್ಲಿಕಾರ್ಜುನಾ

೬೬

ಅಯ್ಯಾ ಗುರುವೆಂಬರ್ಚಕನು ತಂದು
ಎನಗಿಷ್ಟವ ಕಟ್ಟಲಿಕೆ
ಹಂಗನೂಲ ಕೊರಳಲ್ಲಿ ಹಾಕಿ ಕಟ್ಟಿಕೋ ಎಂದನು
ಅದು ಎನಗೊಡವೆಯಲ್ಲವೆಂದು ಕಂಠವ ಹಿಡಿದು
ಲಿಖಿತವ ಲೇಖನವ ಮಾಡಿ ಮಾಡಿ ದಣಿದು
ಹಂಗನೂಲ ಹರಿದು ಹಾಕಿದೆನು
ಇಷ್ಟವನಿಲ್ಲಿಯೇ ಇಟ್ಟೆನು
ಅಯ್ಯಾ ನಾ ಹಿಡಿದ ನೀಲಕಂಠನು
ಶಕ್ತಿ ಸಮೇತವ ಬಿಟ್ಟನು
ಕಲ್ಯಾಣ ಹಾಳಾಯಿತ್ತು
ಭಂಡಾರ ಸೂರೆಹೋಯಿತ್ತು
ನಿರ್ವಚನವಾಯಿತ್ತು
ಶಾಂತ ಸಂತೋಷಿಯಾದ ಅರಸರು ನಿರ್ಮಾಲ್ಯಕ್ಕೊಳಗಾದರು
ಅಲೇಖ ನಾಶವಾಯಿತ್ತು ಪತ್ರ ಹರಿಯಿತ್ತು
ನಾದ ಶೂನ್ಯವಾಯಿತ್ತು
ಒಡೆಯ ಕಲ್ಲಾದ ಕಾರಣ ಎನ್ನೈವರು ಸ್ತ್ರೀಯರು
ಉಳಲಾಟಗೊಂಡೇಳಲಾರದೆ ಹೋದರು ಕಾಣಾ ಕಲ್ಲಿನಾಥಾ

೬೭

ಅಯ್ಯಾ
ನಾನಧವೆ
ಅಯ್ಯಯ್ಯ ಕೈಯ ಕೋಲಕೊಂಬರೆ
ಅಯ್ಯಾ
ಎಳೆಗರುವಿನ ಎಳಗಂತಿಯನೆಳೆದೊಯ್ವರೆ ಭಕ್ತರು
ಅಯ್ಯೋ ಅಯ್ಯೋ ಎನಲೊಯ್ವರೆ
ಬಸವಣ್ಣಪ್ರಿಯ ಚೆನ್ನಸಂಗಯ್ಯಾ

೬೮

ಅಯ್ಯಾ ನಾನೊಂದ ಬೇಡುವೆ ನಿಮ್ಮಲ್ಲಿ
ಎನಗೊಂದು ಲೇಸ ಮಾಡಯ್ಯ
ನಾರಿಯರುರದ ಗಾಳಿ ಸೋಂಕದಂತೆ

ಎನ್ನುವ ಮಂತ್ರಿಸಿ ರಕ್ಷಿಸಯ್ಯ
ಎನಗಿನಿಸುಮಾಡಿ ಬದುಕಿಸಯ್ಯ ಎನ್ನ
ಕಪಿಲಸಿದ್ಧಮಲ್ಲಿಕಾರ್ಜುನ

೯

ಅಯ್ಯಾ ನಿನ್ನ ಮುಟ್ಟಿ ಮುಟ್ಟದೆನ್ನ ಮನ ನೋಡಾ
ಬಿಚ್ಚಿ ಬೀಸರವಾಯಿತ್ತೆನ್ನ ಮನ
ಹೊಳಲ ಸುಂಕಿಗನಂತೆ ಹೊದಕುಳಿಗೊಂಡಿತ್ತೆನ್ನ ಮನ
ಎರಡೆಂಬುದ ಮರೆದು ಬರಡಾಗದೆನ್ನ ಮನ
ನೀನು ಆನಪ್ಪ ಪರಿಯೆಂತು ಹೇಳಾ
ಚೆನ್ನಮಲ್ಲಿಕಾರ್ಜುನಾ

೨೦

ಅಯ್ಯಾ ನಿನ್ನಾಳಾಗಿ ಆರೆನಯ್ಯಾ ಕೆಲಬರ ಬೋಸರಿಸಲು
ಅಯ್ಯಾ ನಿನ್ನಾಳಾಗಿ ಆರೆನಯ್ಯಾ ಕೆಲಬರ ಸ್ತುತಿಯಿಸಲು
ಅಯ್ಯಾ ನೀ ನಿತ್ಯನೆಂದು ಮರೆವೊಕ್ಕಡೆ ಸೀಯದಂತಿಪ್ಪರೆ
ಶಿವನೆ ನಿನ್ನ ಕಾಮ್ಯಾರ್ಥವ ಬೇಡಿ ಬಾಧೆಬಡಿಸೆ
ನಿನಗೇನುಂಟಯ್ಯಾ ನೀನು ನಿಃಕಾಮಿ
ಅಂಜದಿರು ಫಲಪದವ ಬೇಡೆ ನೀನಿಹ ಲೋಕ ನಿನಗಿರಲಿ
ಕಾಡದೆ ನಿನ್ನವರೊಳಗೆ ಕೂಡಿರುವ ಪದವ ಕರುಣಿಸಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ

೨೧

ಅಯ್ಯಾ ನಿಮ್ಮ ಬರವಿಂಗೆ ಕಣ್ಬೇಟಗೊಂಡೆನು
ಎಲೆ ಅಯ್ಯಾ ನಿಮ್ಮ ಬರವಿಂಗೆ ಎನ್ನ ಮನದ ಮಂಚವ ಪಚ್ಚಡಿಸಿದೆ
ಎಲೆ ಅಯ್ಯಾ ನಿಮ್ಮ ಬರವಿಂಗೆ ಚಿತ್ತಸುಯಿದಾನಿಯಾಗಿದ್ದೇನೆ
ಎಲೆ ಅಯ್ಯಾ ನಿಮ್ಮ ಬರವಿಂಗೆ ಸುಜ್ಞಾನದ ಸೆವಿಗೆ ಹಾಸಿ ಆಸೆಬಡುತ್ತಿದ್ದೇನೆ
ಎಲೆ ಅಯ್ಯಾ ನೀ ಬಂದು ಅವಿರತವಿಲ್ಲದೆ ಕೂಡಿ ನಿನ್ನವಳೆಂದೆನಿಸಾ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ

೭೨
ಅಯ್ಯಾ ನಿಮ್ಮ ವಂಶಾವಳಿಯಲು ಒಬ್ಬ ತೊತ್ತಿನ ಮಗ ಹುಟ್ಟಿದ
ಆತನ ತೊತ್ತಿನ ಮಗ ನಾನಯ್ಯಾ
ಬಳಿದೊತ್ತು ಬಳಗದೊತ್ತು ವಂಶದೊತ್ತು ನಾನಯ್ಯಾ
ನಿಮ್ಮ ಒಡೆತನಕ್ಕೆ ಕೇಡಿಲ್ಲವಾಗಿ ಎನ್ನ ತೊತ್ತುತನಕ್ಕೆ ಕೇಡಿಲ್ಲವಯ್ಯಾ

೭೩
ಅಯ್ಯಾ ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ
ನೆನೆದು ಸುಖಿಯಾಗಿ ಆನು ಬದುಕಿದೆನಯ್ಯಾ
ಅದೇನು ಕಾರಣ ತಂದೆಯೆಂದರಿದೆನಯ್ಯಾ
ಎನ್ನ ಕಾರಣ ತಂದೆಯೆಂದರಿದೆನಯ್ಯಾ
ಅರಿದರಿದು ನಿಮ್ಮ ಶರಣನು ಆಚರಿಸುವ ಆಚರಣೆಯ ಕಂಡು
ಕಣ್ದೆರೆದೆನಯ್ಯಾ ಕೂಡಲಸಂಗಮದೇವಾ

೭೪
ಅಯ್ಯಾ ನೀನು ಕೇಳಿದಡೆ ಕೇಳು ಕೇಳದಡೆ ಮಾಣು
ಆನು ನಿನ್ನ ಹಾಡಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀನು ನೋಡಿದಡೆ ನೋಡು ನೋಡದಡೆ ಮಾಣು
ಆನು ನಿನ್ನ ನೋಡಿ ಹಿಗ್ಗಿ ಹಾರೈಸಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀನು ಮಚ್ಚಿದಡೆ ಮಚ್ಚು ಮಚ್ಚದಡೆ ಮಾಣು
ಆನು ನಿನ್ನನಪ್ಪಿದಲ್ಲದೆ ಸೈರಿಸಲಾರೆನಯ್ಯಾ
ಅಯ್ಯಾ ನೀನು ಒಲಿದಡೆ ಒಲಿ ಒಲಿಯದಡೆ ಮಾಣು
ಆನು ನಿನ್ನ ಪೂಜಿಸಿದಲ್ಲದೆ ಸೈರಿಸಲಾರೆನಯ್ಯಾ
ಚೆನ್ನಮಲ್ಲಿಕಾರ್ಜುನಯ್ಯಾ
ಆನು ನಿಮ್ಮನರ್ಚಿಸಿ ಪೂಜಿಸಿ ಹರುಷದೊಳೋಲಾಡುವೆನಯ್ಯಾ

೭೫
ಅಯ್ಯಾ ನೀನೆನ್ನ ಮೊರೆಯನಾಲಿಸಿದಡಾಲಿಸು
ಆಲಿಸದಿರ್ದಡೆ ಮಾಣು
ಅಯ್ಯಾ ನೀನೆನ್ನ ದುಃಖವ ನೋಡಿದಡೆ ನೋಡು
ನೋಡದಿರ್ದಡೆ ಮಾಣು

ನಿನಗಿದು ವಿಧಿಯೆ
ನೀನೊಲ್ಲದಡೆ ಆನೊಲಿಸುವ ಪರಿಯೆಂತಯ್ಯಾ
ಮನವೆಳಸಿ ಮಾರುವೋಗಿ ಮರೆವೊಕ್ಕಡೆ
ಕೊಂಬ ಪರಿಯೆಂತಯ್ಯಾ
ಚೆನ್ನಮಲ್ಲಿಕಾರ್ಜುನಾ

೭೬
ಅಯ್ಯಾ ಮರದೊಳಗಣ ಕಿಚ್ಚು ಮರನ ಸುಡುತ್ತಿದಿತ್ತಯ್ಯಾ
ಮರ ಬೆಂದು ನಿಂದುರಿಯಿತ್ತು ಮಣ್ಣು ಜರಿದು ಬಿದಿತ್ತು
ಉರಿ ಹೊಗೆ ನಂದಿತ್ತು ಸ್ವಯಂಪ್ರಕಾಶವಾಗಿಪ್ಪ ಉರಿ ಉಳಿಯಿತ್ತು
ಆ ಉರಿ ಬಂದು ಎನ್ನ ಕರಸ್ಥಲದಲ್ಲಡಗಿತ್ತು
ಇದ ಕಂಡು ನಾ ಬೆರಗಾಗಿ ನೋಡುತ್ತಿದೆನಯ್ಯಾ
ಬಸವಪ್ರಿಯ ಕೂಡಲಚೆನ್ನಸಂಗಮದೇವಾ

೭೭
ಅರಲುಗೊಂಡ ಕೆರೆಗೆ
ತೊರೆಬಂದು ಹಾಯ್ದಂತಾಯಿತ್ತು
ಬರಲುಗೊಂಡ ಸಸಿಗೆ
ಮಳೆ ಸುರಿದಂತಾಯಿತ್ತು ನೋಡಾ
ಇಂದೆನಗೆ ಇಹದ ಸುಖ ಪರದ ಗತಿ
ನಡೆದು ಬಂದಂತಾಯಿತ್ತು ನೋಡಾ
ಎನಗೆ ಚೆನ್ನಮಲ್ಲಿಕಾರ್ಜುನಯ್ಯಾ
ಗುರುಪಾದವ ಕಂಡು ಧನ್ಯಳಾದೆ ನೋಡಾ

೭೮
ಅರಸಿನ ಭಕ್ತಿ ಅಹಂಕಾರದಲ್ಲಿ ಹೋಯಿತ್ತು
ವೇಶಿಯ ಭಕ್ತಿ ಎಂಜಲ ತಿಂದಲ್ಲಿ ಹೋಯಿತ್ತು
ಬ್ರಾಹ್ಮಣನ ಭಕ್ತಿ ಮುಟ್ಟುತಟ್ಟಿನಲ್ಲಿ ಹೋಯಿತ್ತು
ಶೀಲವಂತನ ಭಕ್ತಿ ಪ್ರಪಂಚಿನಲ್ಲಿ ಹೋಯಿತ್ತು
ಸೆಟ್ಟಿಯ ಭಕ್ತಿ ಕುಟಿಲವ್ಯಾಪಾರದಲ್ಲಿ ಹೋಯಿತ್ತು
ಇಂತಿವರ ಭಕ್ತಿಗೆ ಊರಿಂದ ಹೊರಗಣ ಡೊಂಬನೆ ಸಾಕ್ಷಿ
ಕಲಿದೇವರದೇವಾ

೭೯
ಅರಸು ಮುನಿದಡೆ ನಾಡೊಳಗಿರಬಾರದಯ್ಯಾ
ಗಂಡ ಮುನಿದಡೆ ಮನೆಯೊಳಗೆ ಇರಬಾರದಯ್ಯಾ
ಕೂಡಲಸಂಗಮದೇವಾ
ಜಂಗಮ ಮುನಿದಡೆ ನಾನೆಂತು ಬದುಕುವೆ

೮೦
ಅರಸು ವಿಚಾರ ಸಿರಿಯು ಶೃಂಗಾರ ಸ್ಥಿರವಲ್ಲ ಮಾನವಾ
ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ
ಒಬ್ಬ ಜಂಗಮದಭಿಮಾನದಿಂದ
ಚಾಳುಕ್ಯರಾಯನ ಆಳಿಕೆ ತೆಗೆಯಿತ್ತು
ಸಂದಿತ್ತು ಕೂಡಲಸಂಗಮದೇವಾ ನಿಮ್ಮ ಕವಳಿಗೆಗೆ

೮೧
ಅರಿದರಿದು ಅರಿವು ಬಂಜೆಯಾಯಿತ್ತು
ಮರೆಮರೆದು ಮರಹು ಬಂಜೆಯಾಯಿತ್ತು
ಗುಹೇಶ್ವರನೆಂಬ ಶಬ್ದ ಸಿನೆಬಂಜೆಯಾಯಿತ್ತು

೮೨
ಅರಿದರಿದು ನಿಮ್ಮ ನೆನೆವ ಪರಿಕರ ಹೊಸತು
ಕುರುಹುಗೆಟ್ಟವನ ಬಂದ ಬಟ್ಟೆಯಲ್ಲಿ ಬಾರದೆ ಹೋದವನ
ಕಂಗಳ ಉಂಡವನ ಮನದಲ್ಲಿ ದಣಿದವನ
ಕಿಚ್ಚಿಲ್ಲದೆ ಬೆಂದ ಅಚ್ಚಲಿಂಗೈಕ್ಯನ ಕೈಯಿಲ್ಲದೆ ಕೊಂದವನ
ಒಡಲಿಲ್ಲದವಗ್ರಹಿಸಿದ ನಮ್ಮ ಗೋಗೇಶ್ವರನಲ್ಲಮನ

೮೩
ಅರಿದಹೆನೆಂಬನ್ನರ ಅಸಗ ನೀರಡಸಿ ಸತ್ತಂತಾಯಿತ್ತು
ಕಟ್ಟೋಗರವ ಹೊತ್ತು ಉಂಡೆಹೆ ಉಂಡೆಹೆನೆಂದು
ಆಪ್ಯಾಯನವಡಸಿ ಸತ್ತಂತಾಯಿತ್ತು
ಅರಿದೆಹೆನೆಂದು ಕೇಳಿಹೆನೆಂಬನ್ನಬರ
ಆತನು ಶಿಲೆಯ ರೇಖೆಯೆ ಬಯಲ ಬ್ರಹ್ಮವೇ
ತಾನಳಿವುದಕ್ಕೆ ಮುನ್ನವೆ ಅರಿದು ಕೂಡಬೇಕೆಂದನಂಬಿಗ ಚೌಡಯ್ಯ

೮೪

ಅರಿದು ಚುಚ್ಚುವರೆಲ್ಲರೂ ದನದಟ್ಟೆ
ಮರೆದು ಚುಚ್ಚುವರೆಲ್ಲರೂ ದನದಟ್ಟೆ
ನಾ ಚುಚ್ಚುವುದೆಲ್ಲ ಸತ್ತ ಜೀವದನದಟ್ಟೆ
ಅಟ್ಟೆಯ ಕೊಯ್ದು ಮೆಟ್ಟಿಸಿದ ಸತ್ಯರಿಗೆಲ್ಲಕ್ಕೂ
ಎನಗೆ ಬಟ್ಟಬಯಲ ತೋರಬೇಕೆಂದು
ನಿಮ್ಮ ಬಟ್ಟೆಯಲ್ಲಿ ನೀವೆ ಹೋಗಿ
ಎನ್ನ ಬಟ್ಟೆ ಕಾಮಧೂಮ ಧೂಳೇಶ್ವರನ ಬಟ್ಟೆಯೇ ಸಾಕು

೮೫

ಅರಿದೆನೆಂದಡೆ ಅರಿಯಬಾರದು
ನೋಡಾ ಘನಕ್ಕೆ ಘನ ತಾನೆ ನೋಡಾ
ಚೆನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಸೋತೆನು

೮೬

ಅರಿದೊಡೆ ಶರಣ ಮರೆದೊಡೆ ಮಾನವ
ಪಾತಕನು ಹೊಲೆಯನು ನಾನೇತಕ್ಕೆ ಬಾತೇ
ಹೊತ್ತಿಂಗೊಂದೊಂದು ಪರಿಯ ಗೋಸುಂಬೆಯಂತೆ
ಈಶನ ಶರಣರ ಕಂಡುದಾಸೀನವ ಮಾಡುವ
ದಾಸೋಹವನರಿಯದ ದೂಷಕನು ನಾನಯ್ಯ
ಏಸು ಬುದ್ಧಿಯ ಹೇಳಿ ಬೇಸತ್ತೆನೀ ಮನಕೆ
ಈಶ ನೀ ಸಲಹಯ್ಯಾ ಉರಿಲಿಂಗತಂದೆ

೮೭

ಅರಿಯದ ಗುರು ಅರಿಯದ ಶಿಷ್ಯಂಗೆ
ಅನುಗ್ರಹವ ಮಾಡಿದಡೇನಪ್ಪುದೆಲವೋ
ಅಂಧಕನ ಕೈಯ ಅಂಧಕ ಹಿಡಿದಂತೆ
ಮುಂದೇನಪ್ಪುದು ಹೇಳೆಲೆ ಮರುಳೆ
ಬರುಮಾತಿನ ರಂಜನೆಯನಾಡದಿರು
ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು
ಹುಸಿಯ ಹಸರದವನಲ್ಲ

೮೮

ಅರಿಯದಂತಿರಲೊಲ್ಲದೆ ಅರಿದು ಕುರುಹಾದೆಯಲ್ಲಾ
ಹಿರಿಯರೆಲ್ಲರು ನೆರೆದು ನಿನ್ನ ಕಟ್ಟಿದರೆ ಅಯ್ಯ
ಉಪಚಾರಕ್ಕೋಸುಗರ
ಸಾವಿಂಗೆ ಸಂಗಡವದೆಯಲ್ಲಾ ಗುಹೇಶ್ವರ

೮೯

ಅರಿವ ಕತ್ತಿ ಹರಣದ ಇರಿವ ಬಲ್ಲುದೆ
ಬಿರುನುಡಿಯ ನುಡಿವವ ಮಾನ್ಯರ ಮಾನದ ಮನ್ನಣೆಯ ಬಲ್ಲನೆ
ಹೆತ್ತವರಿಗೆ ಕೂಸು ಹುಚ್ಚಾದರೆ
ಅದರರ್ತಿ ಹೆತ್ತವರಿಗಲ್ಲದೆ ಮಿಕ್ಕಾದವರಿಗುಂಟೆ
ನಿಃಕಳಂಕ ಮಲ್ಲಿಕಾರ್ಜುನಾ

೯೦

ಅರಿವಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು
ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು
ನಾನೆಂತು ಬದುಕುವೆನಣ್ಣಾ
ಕತ್ತಲೆ ಬೆಳಗ ಕಾಂಬ ಸಂದೇಹಿ ನಾನೊಬ್ಬಳು
ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತೊ ಅಜಗಣ್ಣಾ ನಿನ್ನ ಯೋಗ

೯೧

ಅರಿವನಾಹಾರಗೊಂಬುದೆ ಪರಮಸುಖ
ಮರವೆಯು ತೆರಹುಂಟೆ
ಶಿವೈಕ್ಯಂಗೆ ಇತರ ಸುಖವೆ ವ್ಯವಹಾರ
ಅರುಹಿರಿಯರ ಸಂಗಸುಖವೆ ಆಹಾರ
ಶ್ರುತಿಯಿಂದತಿಶಯ ಆ ಚರಿತನ ಮನವ
ಮಹಂತ ಸಕಳೇಶ್ವರದೇವ ತಾನೆ ಬಲ್ಲ

೯೨

ಅರಿವಿನ ಕುರುಹಿದೇನೋ
ಒಳಗೆ ಅನಿಮಿಷನಂದಿನಾಥನಿರಲು
ಪೂಜಿಸುವ ಭಕ್ತನಾರೋ

ಪೂಜೆಗೊಂಬ ದೇವನಾರೋ
ಮುಂದು ಹಿಂದು
ಹಿಂದು ಮುಂದಾದರೆ
ಗುಹೇಶ್ವರ ನೀನು ನಾನು
ನಾನು ನೀನಾದರೆ

೬೩

ಅರಿವಿನ ಬಲದಿಂದ ಕೆಲಬರು ಅರಿಯದವರ ಗೆಲಬೇಕೆಂದು
ಬರುಮಾತಿನ ಉಯ್ಯಲೆಯನೇರಿ
ಒದೆದು ಒರಲಿ ಕೆಡೆವ ದರಿದ್ರರು
ಅರಿವು ತೋರದೆ ಇರಬೇಕು
ಕಾಯನಿರ್ಣಯ ನಿಃಪತಿಯೆಂಬಾತನು
ಸೋಂಕಿನ ಸೋಜಿಗವೆಂಬ ಪರಿಣತೆ ಫಲಿಸಬೇಕು
ಅರಿವು ತೊರೆದ ಎರಡೆಂಬ ಭಿನ್ನವೇಷವ ತೊಟ್ಟು
ಡಂಬಕವ ನುಡಿದಹೆವೆಂಬ ಉದ್ದಂಡರ
ಗುಹೇಶ್ವರ ಕಂಡಡೆ ಕನಲುವ

೬೪

ಅರಿಪಿನರಿತವ ಕೆಡಿಸಿತ್ತು ಬಡತನವೆಂಬ ರಾಹು
ಉಳ್ಳವನ ಉಳುವೆಯ ಕೆಡಿಸಿತ್ತು ಮೋಹವೆಂಬ ರಾಹು
ಕಾಬವನ ಕಾಣಿಕೆಯ ಕೆಡಿಸಿತ್ತು ಕಾಮವೆಂಬ ಕತ್ತಲೆ
ಎನ್ನ ಮನದ ಭಯಕ್ಕಂಜಿ ನಿಮ್ಮ ಮೊರೆಹೊಕ್ಕೆ
ಕೂಡಲಸಂಗಮದೇವಾ

೬೫

ಅರಿವು ಅರಿವೆನುತ್ತಿಪ್ಪಿರಿ ಅರಿವು ಸಾಮಾನ್ಯವೆ
ಹಿಂದಣ ಹೆಜ್ಜೆಯ ನೊಡಿ ಕಂಡಲ್ಲದೆ
ನಿಂದ ಹೆಜ್ಜೆಯನರಿಯಬಾರದು
ಮುಂದಣ ಹೆಜ್ಜೆಯಳಿದಲ್ಲದೆ
ಒಂದು ಪಾದ ನೆಲೆಗೊಳ್ಳದು

ನೆಲನ ಬಿಟ್ಟು ಆಕಾಶದಲ್ಲಿ ನಿಂದು
ಮುಗಿಲೊಳಗೆ ಮಿಂಚಿಲ್ಲದೆ ತಾನಾಗಬಾರದು
ಗುಹೇಶ್ವರನೆಂಬುದು ಬರಿದೆ ಬಹುದೆ ಹೇಳಿರೆ

೯೬
ಅರಿವು ಉದಯವಾದಲ್ಲದೆ ಮರಹು ನಷ್ಟವಾಗದು
ಮರಹು ನಷ್ಟವಾದಲ್ಲದೆ ಅರಿವು ಸಯವಾಗದು
ಅರಿವು ಸಯವಾಗಿ ದೊರೆಕೊಂಡ ಬಳಿಕ
ಗುರುವಾರು ಲಿಂಗವಾರು
ಆವುದು ಘನ ಆವುದು ಕಿರಿದು
ಹೇಳಾ ಗುಹೇಶ್ವರಲಿಂಗದಲ್ಲಿ
[ಅರಿದು ಮರೆದು ಉಪದೇಶದ ಪಡೆದರೆ ಮುಂದೆ
ನಿಜವೆಂತು ಸಾಧ್ಯವಪ್ಪುದು ಹೇಳಾ ಮಡಿವಾಳ ಮಾಚಯ್ಯ]

೯೭
ಅರಿವುದೊಂದೆ ಎರಡಾಗಬಲ್ಲುದೊಂದೆ
ಬೇರೆ ತೋರಬಲ್ಲುದದೊಂದೆ
ತನ್ನ ಮರೆಯಬಲ್ಲುದದೊಂದೆ
ತಾನಲ್ಲದನ್ಯವಿಲ್ಲೆಂದರಿದ ಅರಿವು ನೀನೆ
ಸಿಮ್ಮಲಿಗೆಯ ಚೆನ್ನರಾಮಾ

೯೮
ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು
ದೇವಾಂಗವನುಟ್ಟೆನೆಲೆ ಪುರುಷ ಬಾರಾ
ಪುರುಷ ರತ್ನವೆ ಬಾರಾ
ನಿನ್ನ ಬರವೆನ್ನ ಅಸುವಿನ ಬರವಾದುದೀಗ
ಬಾರಯ್ಯಾ ಚೆನ್ನಮಲ್ಲಿಕಾರ್ಜುನಯ್ಯಾ
ನೀನು ಬಂದಹನೆಂದು ಬಟ್ಟೆಯ ನೋಡಿ ಬಾಯಾರುತಿರ್ದೆನು

೯೯
ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು
ಪುರುಷನ ಒಲವಿಲ್ಲದ ಲಲನೆಯಂತೆ ಆಗಿದ್ದೆನಯ್ಯಾ

ವಿಭೂತಿಯನೆ ಹೂಸಿ ರುದ್ರಾಕ್ಷಿಯನೆ ಕಟ್ಟಿ
ಶಿವ ನಿಮ್ಮೊಲವಿಲ್ಲದಂತೆ ಆಗಿದ್ದೆನಯ್ಯಾ
ಕೆಟ್ಟು ಬಾಳುವರಿಲ್ಲ ಎಮ್ಮವರ ಕುಲದಲ್ಲಿ
ನೀನೊಲಿದಂತೆ ಸಲಹಯ್ಯಾ ಕೂಡಲಸಂಗಮದೇವಾ

೧೦೦
ಅರುವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ
ಸೋತಿತೆನ್ನ ಮನ ನೋಡಯ್ಯ
ಹಾಡುವುದೊಂದೆ ವಚನ ನೋಡುವುದೊಂದೆ ವಚನ
ವಿಷಯ ಬಿಟ್ಟು ನಿರ್ವಿಷಯನಾಗುವುದೊಂದೆ ವಚನ
ಕಪಿಲಸಿದ್ಧಮಲ್ಲೇಶನಲ್ಲಿ

೧೦೧
ಅರ್ಥ ಪ್ರಾಣವ ಕೊಟ್ಟಲ್ಲಿ
ಅಪಮಾನಕ್ಕೆ ಮುಚ್ಚಳನಿಕ್ಕುವ ಲೆಂಕನುಂಟೆ ಅಯ್ಯಾ
ತಲೆಯ ಮಾರಿದವಂಗೆ ಕಣ್ಣು ಹೊರಗಾದುದುಂಟೆ
ಭಕ್ತನಾದಲ್ಲಿ ಸತ್ಯ ಬೇಕಾದಡೆ
ಅರ್ಥ ಪ್ರಾಣ ಅಪಮಾನಕ್ಕೆ ಹೊರಗಾಗಬೇಕು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವನರಿವುದಕ್ಕೆ

೧೦೨
ಅರ್ಥರೇಖೆಯಿದ್ದಲ್ಲಿ ಫಲವೇನು ಆಯುಷ್ಯರೇಖೆ ಇಲ್ಲದನ್ನಕ್ಕರ
ಹಂದೆಯ ಕೈಯಲ್ಲಿ ಚಂದ್ರಾಯುಧವಿದ್ದಲ್ಲಿ ಫಲವೇನು
ಅಂಧಕನ ಕೈಯಲ್ಲಿ ದರ್ಪಣವಿದ್ದು ಫಲವೇನು
ಮರ್ಕಟನ ಕೈಯಲ್ಲಿ ಮಾಣಿಕವಿದ್ದು ಫಲವೇನು
ನಮ್ಮ ಕೂಡಲಸಂಗನ ಶರಣರನರಿಯದವರ ಕೈಯಲ್ಲಿ
ಲಿಂಗವಿದ್ದು ಫಲವೇನು ಶಿವಪಥವನರಿಯದನ್ನಕ್ಕ

೧೦೩
ಅರ್ಥಸನ್ಯಾಸಿ ಬ್ರಹ್ಮಚಾರಿ ಆನಯ್ಯ
ದೊರಕೊಳ್ಳದಿರ್ದಡೆ ಒಲ್ಲೆನೆಂಬೆನು

ದಿಟಕ್ಕೆ ಬಂದಡೆ ಪರಿಹರಿಸಲರಿಯೆನು
ಎನಗೆ ನಿಸ್ಪೃಹದ ದೆಸೆಯನೆಂದಿಂಗೀವೆಯಯ್ಯಾ
ಸಕಳೇಶ್ವರದೇವಾ

೧೦೪
ಅರ್ಪಿಸುವುದಕ್ಕೆ ಮುನ್ನವೆ
ಮನವರಿದು ಕಂಗಳು ತುಂಬಿ ಕಂಡ ಮತ್ತೆ
ಅರ್ಪಿತವೆಲ್ಲಿ ಅಡಗಿತ್ತು
ಸಂದೇಹವ ಬಿಟ್ಟು ನಿಂದಲ್ಲಿ
ಮನಸಂದಿತ್ತು ಮಾರೇಶ್ವರಾ

೧೦೫
ಅಲ್ಲಿಯರೂಪ ಇಲ್ಲಿಗೆ ಬಂದಿತ್ತು
ಇಲ್ಲಿಯ ಬಹುರೂಪ ಎಲ್ಲಿ ಅಡಗಿತ್ತೋ
ಎನ್ನ ಬಹುರೂಪ ಬಲ್ಲವರಾರೋ
ನಾದ ಹರಿದು ಸ್ವರವು ಸೂಸಿದ ಬಳಿಕ
ಈ ಬಹುರೂಪ ಬಲ್ಲವರಾರೋ
ರೇಕಣ್ಣಪ್ರಿಯ ನಾಗಿನಾಥನಲ್ಲಿ
ಬಸವಣ್ಣನಿಂದ ಬದುಕಿತೀ ಲೋಕವೆಲ್ಲ

೧೦೬
ಅವರಾರ ಪರಿಯಲ್ಲ ಎಮ್ಮ ನಲ್ಲನು
ವಿಶ್ವವೆಲ್ಲವು ಸತಿಯರು ಸೋಜಿಗದ ಪುರುಷನು
ಅವರವರ ಪರಿಯಲ್ಲೆ ಅವರವರ ನೆರೆವನು
ಅವರವರಿಗವರಂತೆ ಸುಖಮಯನು ನೋಡಾ
ಅವರೆಲ್ಲರ ವಂಚಿಸಿ ಎನ್ನನಗಲದ ಪರಿಯ ನೋಡಾ ಕೆಳದಿ
ನೀನೊಳ್ಳಿದಳಾದಡೆ ಮಹಾಮಂತ್ರವ ಜಪಿಸು
ನಿನ್ನನಗಲನು ನಿನ್ನಾಣೆ ಉರಿಲಿಂಗದೇವ ತನ್ನಾಣೆ ಕೆಳದಿ

೧೦೭
ಅವಳ ವಚನ ಬೆಲ್ಲದಂತೆ ಹೃದಯದಲಿಪ್ಪುದು ನಂಜು ಕಂಡಯ್ಯಾ
ಕಂಗಳಲೊಬ್ಬನ ಕರೆವಳು ಮನದಲೊಬ್ಬನ ನೆರೆವಳು

ಕೂಡಲಸಂಗಮದೇವ ಕೇಳಯ್ಯಾ
ಮಾನಿಸಗಳ್ಳೆಯ ನಂಬದಿರಯ್ಯಾ

## ೧೦೮

ಅಶನ ವ್ಯಸನಾದಿಗಳನಂತನಂತ
ಕಾಶಾಂಬರಧಾರಿಗಳನಂತನಂತ
ಸಕಳೇಶ್ವರದೇವಾ ನೀನಲ್ಲದೆ
ಪೆರತಾನರಿಯದವರು ಎತ್ತಾನು ಒಬ್ಬರು

## ೧೦೯

ಅಶನದಲಾಯಷ್ಯ ವ್ಯಸನದ ಬೀಜ
ನಟನೆಯನೇನುವ ನಟಿಸದಿರಾ
ಆದುದೆ ಜನನ ಮಾದುದೆ ಮರಣ
ತೋರಿವುದೆಲ್ಲವು ದಿವಸದ ವಿಸ್ತಾರ
ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗ
ಸಂಭ್ರಮ ಜೀವರಿಗೆಲ್ಲಿಯದೊ

## ೧೧೦

ಅಸಿಯ ಮೊನೆಯು ಮುರಿದಡೆ ಮಸೆದಡೆ ಮೊನೆಯಾಗದೆ
ಅಯ್ಯಾ ಅಸು ಮರೆದಡೆ ಆತ್ಮನನರಿದಡೆ ಕೇಡುಂಟೆ
ಅಯ್ಯಾ ಮರೆವುದು ಅರಿವುದು ಎರಡುಳ್ಳನ್ನಕ್ಕ
ಮರೆಯದ ಪೂಜಿಸು ಸದಾಶಿವಮೂರ್ತಿಲಿಂಗವ

## ೧೧೧

ಅಳವರಿಯದ ಭಾಷೆ ಬಹುಕುಳವಾದ ನುಡಿ
ಇಂತೆರಡರ ನುಡಿ ಹುಸಿಯಯ್ಯ
ಬಹುಭಾಷಿತರು ಸುಭಾಷಿತವರ್ಜಿತರು
ಶರಣಸತಿ ಲಿಂಗಪತಿಯೆಂಬರು ಹುಸಿಯಯ್ಯ
ಇಂತಪ್ಪವರ ಕಂಡು ನಾಚಿದೆನಯ್ಯ ಗುಹೇಶ್ವರ

೧೧೨

ಅಳಿವರಿಗೆ ಉಳಿವು ಎಲ್ಲಿಯೂ ಇಲ್ಲವೆಂಬುದ ತಿಳಿ
ಉಳಿವರಿಗೆ ಅಳಿವು ಎಲ್ಲಿಯೂ ಇಲ್ಲವೆಂಬುದ ತಿಳಿ
ಈ ಅಳಿವು ಉಳಿವು ಎಂಬುಭಯವನೇನೆಂಬುದ ತಿಳಿ
ತಿಳಿದ ಮತ್ತೆ ನಿಃಕಳಂಕ ಮಲ್ಲಿಕಾರ್ಜುನ
ಏನೂ ಇಲ್ಲವೆಂಬುದ ತಿಳಿ

೧೧೩

ಅಳಿಸಂಕುಲವೆ ಮಾಮರವೆ ಬೆಳುದಿಂಗಳೆ ಕೋಗಿಲೆಯೆ
ನಿಮ್ಮನೆಲ್ಲರನೂ ಒಂದ ಬೇಡುವೆನು
ಎನ್ನೊಡೆಯ ಚೆನ್ನಮಲ್ಲಿಕಾರ್ಜುನದೇವ ಕಂಡಡೆ
ಕರೆದು ತೋರಿರೆ

೧೧೪

ಅಳೆವುತ್ತ ಅಳೆವುತ್ತ ಬಳಲುವರಲ್ಲದೆ
ಕೊಳಗ ಬಳಲುವುದೆ
ನಡೆವುತ್ತ ನಡೆವುತ್ತ ಬಳಲುವರಲ್ಲದೆ
ಬಟ್ಟೆ ಬಳಲುವುದೆ
ಶ್ರವವ ಮಾಡುತ್ತ ಮಾಡುತ್ತ ಬಳಲುವರಲ್ಲದೆ
ಕೋಲು ಬಳಲುವುದೆ
ನಿಜವನರಿಯದ ಭಕ್ತ ಬಳಲುವನಲ್ಲದೆ
ಲಿಂಗ ಬಳಲುವುದೆ ಕೂಡಲಸಂಗಮದೇವಾ
ಅರಸರಿಯದ ಬಿಟ್ಟಿಯೋ

೧೧೫

ಆಕಾರನಿರಾಕಾರವೆಂಬೆರಡೂ ಸ್ವರೂಪಂಗಳು
ಒಂದು ಆಹ್ವಾನ ಒಂದು ವಿಸರ್ಜನ
ಒಂದು ವ್ಯಾಕುಳ ಒಂದು ನಿರಾಕುಳ
ಉಭಯ ಕುಳರಹಿತ ಗುಹೇಶ್ವರ
ನಿಮ್ಮ ಶರಣ ನಿಶ್ಚಿಂತನು

೧೧೬
ಆಕಾಶದ ನೀರಿಂಗೆ ಮತ್ತೇತರಲ್ಲಿಯೂ
ತಿಳಿದಿಹೆನೆಂಬ ಸೂತಕವುಂಟೆ
ಪೃಥ್ವಿಯ ಸಂಗವ ಕೂಡಿದ ಅಪ್ಪುವಿಂಗಲ್ಲದೆ
ನಿಶ್ಚಯದ ಸುಜಲಕ್ಕುಂಟೆ
ಕರ್ಮದ ಕಪಟ ನಿಶ್ಚಯವಾದ ನಿಜತತ್ವಭಾವಿಗೆ
ಮೇಲೊಂದು ಹತ್ತುವ ಹಾವಸೆ ಒಂದೂ ಇಲ್ಲ
ಕಾಮಧೂಮ ಧೂಳೇಶ್ವರಾ

೧೧೭
ಆಕಾಶವ ಮೀರುವ ತರು ಗಿರಿಗಳುಂಟೆ
ನಿರಾಕಾರವ ಮೀರುವ ಸಾಕಾರವುಂಟೆ
ಗೊಹೇಶ್ವರಲಿಂಗವ ಮೀರುವ ಒಡೆತನ ಉಂಟೆ
[ಸಂಗನ ಬಸವಣ್ಣ]

೧೧೮
ಆಗಳೂ ಲೋಗರ ಮನೆಯ ಬಾಗಿಲ
ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು
ಹೋಗೆಂದಡೆ ಹೋಗವು ಕೆಲವು ದೈವಂಗಳು
ನಾಯಿಗಿಂದ ಕರಕಷ್ಟ ಕೆಲವು ದೈವಂಗಳು
ಲೋಗರ ಬೇಡಿಕೊಂಡುಂಬ ದೈವಂಗಳು
ತಾವೇನ ಕೊಡುವವು ಕೂಡಲಸಂಗಮದೇವಾ

೧೧೯
ಆಗಿಂಗೆ ಮುಯ್ಯಾನದಿರು ಚೇಗಿಂಗೆ ಬೆಂಬೀಳದಿರು
ಆಹಾ ಮನವೆ ಸಂತೈಸಿಕೊ ನಿನ್ನ ನೀನೆ
ಆಗೆಂದಡೆ ನಿನ್ನ ವಶವಲ್ಲ ಹೋಗೆಂದಡೆ ನಿನ್ನಿಚ್ಛೆಯಲ್ಲ
ಭೋಗಾದಿಭೋಗಂಗಳೆಲ್ಲವು ಸಂಗಯ್ಯನಧೀನವಾಗಿ

೧೨೦
ಆಗಿಲ್ಲದ ಸಿರಿ ಆಯುಷ್ಯವಿಲ್ಲದ ಬದುಕು
ಸುಖವಿಲ್ಲದ ಸಂಸಾರ

ಎಳತಟೆಗೊಂಬ ಕಾಯದ ಸಂಗ
ಬಳಲಿಸುವ ಜೀವಭಾವ
ಇವರ ಕಳವಳವಳಿದಲ್ಲದೆ
ಮಳುಬಾವಿಯ ಸೋಮನ ತಿಳಿಯಬಾರದು

೧೨೧
ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ
ಸಮತೆಯೆಂಬ ತಿರುವ ಮೆಟ್ಟಿ ಜೇವ್ಡೆಗೆಯ್ದು
ಶಿಷ್ಯನೆಂಬ ಬಾಣವ ತೊಡಚಿ
ಗುರುವೆಂಬ ವ್ಯಾಧನು ಲಿಂಗವೆಂಬ ಬಯಲ ಗುರಿಯನೆಚ್ಚಡೆ
ಗರಿದೋರದಂತೆ ಮುಳುಗಿಯಡಗಿತ್ತು
ಆ ಗುರಿಯನು ಬಾಣವನು ಅರಸಲುಂಟೆ
ಕೂಡಲಚೆನ್ನಸಂಗಾ ನಿಮ್ಮಲ್ಲಿ

೧೨೨
ಆಡಬಾರದ ಬಯಲು
ಸೂಡಬಾರದ ಬಯಲು
ನುಡಿಯಬಾರದ ಬಯಲು
ಹಿಡಿಯಬಾರದ ಬಯಲು
ಈ ಒಡಲಿಲ್ಲದ ಬಯಲೊಳಗೆ ಅಡಗಿರ್ದ ಭೇದವ
ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ

೧೨೩
ಆಡಲಿಲ್ಲವಯ್ಯಾ ನಾನು ಹೆಣ್ಣುರೂಪ ಧರಿಸಿ
ನುಡಿಯಲಿಲ್ಲವಯ್ಯಾ ನಾನು ಹೆಣ್ಣುರೂಪ ಧರಿಸಿ
ನಾನು ಹೆಣ್ಣಲ್ಲದ ಕಾರಣ ನಾನು ಇಹಪರ ನಾಸ್ತಿಯಾದವಳಯ್ಯಾ
ನಾನು ಉಭಯದ ಸಂಗವ ಕಂಡು ಕಾಣದಂತಿದ್ದೆನಯ್ಯಾ
ಸಂಗಯ್ಯಾ ಬಸವ ಬಯಲ ಕಂಡ ಕಾರಣ

೧೨೪
ಆಡಿ ಕಾಲು ದಣಿಯವು
ನೋಡಿ ಕಣ್ಣು ದಣಿಯವು

ಹಾಡಿ ನಾಲಿಗೆ ದಣಿಯದು
ಇನ್ನೇವೆನಿನ್ನೇವೆ
ನಾ ನಿಮ್ಮ ಕೈಯಾರೆ ಪೂಜಿಸಿ
ಮನದಣಿಯಲೊಲ್ಲದಿನ್ನೇವೆನಿನ್ನೇವೆ
ಕೂಡಲಸಂಗಮದೇವಾ ಕೇಳಯ್ಯಾ
ನಿಮ್ಮ ಉದರವ ಬಗಿದಾನು ಹೊಗುವ ಭರವೆನಗೆ

೧೨೫
ಆಡುತ್ತ ಹಾಡುತ್ತ ಭಕ್ತಿಯ ಮಾಡಬಹುದು ಲಿಂಗಕ್ಕೆ
ಅದು ಬೇಡದು ಬೆಸಗೊಳ್ಳದು
ತಂದೊಮ್ಮೆ ನೀಡಬಹುದು ಲಿಂಗಕ್ಕೆ
ಕಾಡುವ ಬೇಡುವ ಜಂಗಮ ಬಂದಡೆ
ನೀಡಲುಬಾರದು ಕೂಡಲಸಂಗಮದೇವಾ

೧೨೬
ಆಡುವಾತ ಗಣಿಮಿಣಿಯಲ್ಲಿ ಕುಣಿದಡೆ
ಕೆಳಗೆ ನೋಡುವಾತನಿಗೆ ಆಶ್ಚರ್ಯವಾದಂತೆ
ವಸ್ತುಕೂಟ ಆಟ
ಮರ್ತ್ಯರ ಬೇಟ
ನಿಶ್ಚಯವಾಗಿರಬೇಕು
ಐಘಟದೂರ ರಾಮೇಶ್ವರಲಿಂಗಕ್ಕೆ

೧೨೭
ಆತನ ನೋಡಿದಂದು
ದೆಸೆಗಳ ಮರೆದೆನಿನ್ನೆಂತವ್ವಾ
ಅವ್ವಾ ಅವ್ವಾ
ಆತನ ನುಡಿಸಿದಡೆ
ಮೈಯೆಲ್ಲಾ ಬೆವತುದಿನ್ನೆಂತವ್ವಾ
ಅವ್ವಾ ಅವ್ವಾ
ಆತನ ಕೈಯ ಹಿಡಿದಡೆ
ಎನ್ನ ನಿರಿಗಳು ಸಡಿಲಿದವಿನ್ನೆಂತವ್ವಾ

ಇಂದೆಮ್ಮ ಮಹಾಲಿಂಗ ಗಜೇಶ್ವರನನಪ್ಪಿದೆನೆಂದಡೆ
ನಾನಪ್ಪ ಮರೆದೆನಿನ್ನೆಂತವ್ವಾ

೧೨೮
ಆತನ ಬಿರುದೆನ್ನ ಉರದಲ್ಲಿ ಇದೆ ಕಂಡಯ್ಯಾ
ಏಕೆ ಬಂದಿರೋ ಎಲೆ ಅಣ್ಣಗಳಿರಾ
ನಿಮಗಪ್ಪುವುದಕ್ಕೆಡೆಯಿಲ್ಲ
ನಿಮಗಪ್ಪುವದಕಡ್ಡಬಂದಹನೆಮ್ಮ ನಲ್ಲ
ಏಕೆ ಬಂದಿರೋ ಉರಿಲಿಂಗದೇವನನಪ್ಪಿ ಸೊಪ್ಪಾದ ಹಿಪ್ಪೆಗೆ

೧೨೯
ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ
ಹೇಳಲೂಬಾರದು ಕೇಳಲೂಬಾರದು
ಏನ ಹೇಳುವೆನವ್ವಾ ಶಿಖಿ ಕರ್ಪೂರ ಬೆರಸಿದಂತೆ
ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ
ಹೇಳಲು ಬಾರದವ್ವಾ

೧೩೦
ಆತನ ಸುಖದುಃಖವೀತಗೇನು
ಈತನ ಸುಖದುಃಖವಾತಗೇನು
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಅರಿವ ಸಂತೈಸಿಕೊಳ್ಳಿ
ರಂಭೆ ಎಂದಡೆ ನಿನ್ನಂಗನೆಯಾಗಲಿಲ್ಲವು
ಒಂದಿನ ಸ್ವಪ್ನದಲ್ಲಾದಡೂ ರತಿಸಲಿಲ್ಲ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ

೧೩೧
ಆತ್ಮಂಗೆ ಕಾಯವೆ ರೂಪು
ಆ ಕಾಯಕ್ಕೆ ಆತ್ಮನೆ ಹಾಹೆ
ಆ ಹಾಹೆಗೆ ಅರಿವೇ ಬೀಜ
ಆ ಬೀಜಕ್ಕೆ ಗೋಪತಿನಾಥ ವಿಶ್ವೇಶ್ವರಲಿಂಗವೆ ನಿರ್ವಿಜ

೧೩೨
ಆದಿ ಆಧಾರ ತನುಗುಣ ಉಳ್ಳನ್ನಕ್ಕರ ಸಮತೆ ಎಂಬುದೇನೋ
ಕಾಲಕಲ್ಪಿತ ಉಪಾಧಿ ಉಳ್ಳನ್ನಕ್ಕರ ಶೀಲವೆಂಬುದು ಭಂಗ
ಕಾಮವೆಂಬುದರ ಬೆಂಬಳಿಯ ಕೂಸಿನ
ಹುಸಿಯ ತಾನೆಂದು ತಿಳಿಯದನ್ನಕ್ಕರ
ಗುಹೇಶ್ವರ ನಿಮ್ಮ ನಾಮಕ್ಕೆ ನಾಚದವರ ನಾನೇನೆಂಬೆನು

೧೩೩
ಆದಿ ಪುರಾಣ ಅಸುರರಿಗೆ ಮಾರಿ
ವೇದಪುರಾಣ ಹೋತಿಂಗೆ ಮಾರಿ
ರಾಮಪುರಾಣ ರಕ್ಕಸರಿಗೆ ಮಾರಿ
ಭಾರತಪುರಾಣ ಗೋತ್ರಕ್ಕೆ ಮಾರಿ
ಎಲ್ಲ ಪುರಾಣ ಕರ್ಮಕ್ಕೆ ಮೊದಲು
ನಿಮ್ಮ ಪುರಾಣಕ್ಕೆ ಪ್ರತಿಯಿಲ್ಲ
ಕೂಡಲಸಂಗಮದೇವಾ

೧೩೪
ಆದಿಯ ಶರಣನ ಮದುವೆಯ ಮಾಡಲು
ಯುಗಜುಗದವರೆಲ್ಲಾ ನಿಬ್ಬಣ ಹೋದರು
ಹೋದ ನಿಬ್ಬಣಿಗರು ಮರಳರು
ಮದವಣಿಗನ ಸುದ್ದಿಯನರಿಯಲು ಬಾರದು
ಹಂದರವಳಿಯದು ಹಸೆ ಮುನ್ನಲುಡುಗದು
ಬಂದು ಬಂದವರೆಲ್ಲ ಮಿಂದುಂಡು ಹೋದರು
ಇದರಂತುವನರಿಯದೆ ಜಗವೆಲ್ಲ ಬರಡಾಯಿತ್ತು
ಗುಹೇಶ್ವರನೆಂಬ ಶಬ್ದವನೊಳಕೊಂಡ ಮಹಂತ ಬಯಲು

೧೩೫
ಆದಿಯಾಧಾರವಿಲ್ಲದಂದು
ಹಮ್ಮುಬಿಮ್ಮುಗಳಿಲ್ಲದಂದು
ಸುರಾಳ ನಿರಾಳವಿಲ್ಲದಂದು
ಸಚರಾಚರವೆಲ್ಲ ರಚನೆಗೆ ಬಾರದಂದು
ಗುಹೇಶ್ವರ ನಿಮ್ಮ ಶರಣನುದಯಿಸಿದನಂದು

೧೩೬

ಆನರಿಯೆನಯ್ಯಾ ಪಶು ನಂಬುವಂತೆ ನಂಬುವೆ
ನೀನು ಕೊಂದಲ್ಲಿ ಸಾವೆ ಆನರಿಯೆನಯ್ಯಾ
ನೀನು ಕಾಯ್ದಲ್ಲಿ ಬದುಕುವೆ ಆನರಿಯೆನಯ್ಯಾ
ಪಶು ನಂಬುವಂತೆ ನಂಬುವೆ ಶಿಶು ಬೇಡುವಂತೆ ಬೇಡುವೆ
ಅರಿವಿಲ್ಲದವನಲ್ಲಿ ಅರಿವ ನೀನರಸುವರೆ
ನೀನರಿಯೆಂದಡರಿವೆ ಎನ್ನ ಕಪಿಲಸಿದ್ಧಮಲ್ಲಿನಾಥಯ್ಯನ

೧೩೭

ಆನು ನೀನೆಂಬುದು ತಾನಿಲ್ಲ
ತಾನರಿದ ಬಳಿಕ ಮತ್ತೇನೂ ಇಲ್ಲ ಇಲ್ಲ
ಇಲ್ಲದ ಇಲ್ಲವೆಯೆಲ್ಲಿಂದ ಬಪ್ಪುದೋ
ಅನುವನರಿದು ತನುವ ಮರೆದು
ಭಾವರಹಿತ ಗುಹೇಶ್ವರ

೧೩೮

ಆನೆ ಕುದುರೆ ಭಂಡಾರವಿರ್ದಡೇನೊ
ತಾನುಂಬುದು ಪಡಿಯಕ್ಕಿ ಒಂದಾವಿನ ಹಾಲು
ಮಲಗುವುದರ್ಧ ಮಂಚ
ಈ ಹುರುಳಿಲ್ಲದ ಸಿರಿಯ ನೆಚ್ಚಿ ಕೆಡಬೇಡ ಮನುಜಾ
ಒಡಲು ಭೂಮಿಯ ಸಂಗ
ಒಡವೆ ತಾನೇನಪ್ಪುದೊ
ಕೈವಿಡಿದ ಮಡದಿ ಪರರ ಸಂಗ
ಪ್ರಾಣ ವಾಯುವಿನ ಸಂಗ
ಸಾವಿಂಗೆ ಸಂಗಡವಾರೂ ಇಲ್ಲ
ಕಾಣಾ ನಿಃಕಳಂಕ ಮಲ್ಲಿಕಾರ್ಜುನಾ

೧೩೯

ಆನೆಂಬುದಿಲ್ಲ ತಾನು ತಾನೆಂಬುದಿಲ್ಲ
ವಿಜ್ಞಾನಮಾನಂದ ಬ್ರಹ್ಮವೆಂಬುದಿಲ್ಲ ಇಲ್ಲವೆಂಬುದಿಲ್ಲ
ಸಿಮ್ಮಲಿಗೆಯ ಚೆನ್ನರಾಮನೆಂಬುದು ಮುನ್ನಿಲ್ಲ

೧೪೦
ಆನೆಂಬುದಿಲ್ಲ ನೀನೆಂಬುದಿಲ್ಲ
ಸ್ವಯವೆಂಬುದಿಲ್ಲ ಪರವೆಂಬುದಿಲ್ಲ
ಅರಿವೆಂಬುದಿಲ್ಲ ಮರವೆಂಬುದಿಲ್ಲ
ಒಗೆಂಬುದಿಲ್ಲ ಹೊರಗೆಂಬುದಿಲ್ಲ
ಕೂಡಲಚೆನ್ನಸಂಗಯ್ಯನೆಂಬ ಶಬ್ದ ಮುನ್ನಿಲ್ಲ

೧೪೧
ಆಯಿತ್ತೆ ಉದಯಮಾನ ಹೋಯಿತ್ತೆ ಅಸ್ತಮಾನ
ಅಳಿದವಲ್ಲಾ ನೀರಲಾದ ನಿರ್ಮಿತಂಗಳೆಲ್ಲವೂ
ಕತ್ತಲೆಗವಿಯಿತ್ತು ಮೂರುಲೋಕದೊಳಗೆ
ಇದರಚ್ಚುಗವೇನು ಹೇಳಾ ಗುಹೇಶ್ವರ

೧೪೨
ಆಯುಷ್ಯ ತೀರಿದಲ್ಲದೆ ಮರಣವಿಲ್ಲ
ಭಾಷೆ ತಪ್ಪಿದಲ್ಲದೆ ದಾರಿದ್ರ್ಯವಿಲ್ಲ
ಅಂಜಲದೇಕೋ ಲೋಕ ವಿಗರ್ಭಣೆಗೆ
ಅಂಜಲದೇಕೋ ಕೂಡಲಸಂಗಮದೇವಾ ನಿಮ್ಮಾಳಾಗಿ

೧೪೩
ಆಯುಷ್ಯ ಹೋಗುತ್ತಿದೆ ಭವಿಷ್ಯ ತೊಲಗುತ್ತಿದೆ
ಕೂಡಿರ್ದ ಸತಿಸುತರು ತಮತಮಗೆ ಹರಿದು ಹೋಗುತ್ತೈದಾರೆ
ಬೇಡ ಬೇಡವೆಲೆ ಬಂಜೆಯಾಗಿ ಕೆಡಬೇಡ ಬಯಲಿಂಗೆ ಮನವೆ
ಚೆನ್ನಮಲ್ಲಿಕಾರ್ಜುನನ ಶರಣರ ಸಂಗದಲ್ಲಿ
ಹೂಣಿ ಹೊಕ್ಕು ಬದುಕು ಕಂಡಾಮನವೆ

೧೪೪
ಆಯುಷ್ಯವುಂಟು ಪ್ರಳಯವಿಲ್ಲೆಂದು
ಅರ್ಥವ ಮಡುಗುವಿರಿ
ಆಯುಷ್ಯ ತೀರಿ ಪ್ರಳಯ ಬಂದಡೆ
ನಿಮ್ಮ ಅರ್ಥವನುಂಬುವರಿಲ್ಲ

ನೆಲನನಗೆದು ಮಡುಗದಿರಾ
ನೆಲ ನುಂಗಿದಡುಗುಳುವುದೆ
ಕಣ್ಣಿನಲ್ಲಿ ನೋಡಿ ಮಣ್ಣಿನಲ್ಲಿ ನೆರಹಿ ಉಣ್ಣದೆ ಹೋಗದಿರಾ
ನಿನ್ನ ಮಡದಿಗಿರಲೆಂದಡೆ ಆ ಮಡದಿಯ ಕೃತಕ ಬೇರೆ
ನಿನ್ನ ಒಡಲು ಕಡೆಯಲು ಮತ್ತೊಬ್ಬನಲ್ಲಿಗಡಕದೆ ಮಾಬಳೆ
ಹೆರರಿಗಿಕ್ಕಿ ಹೆಗ್ಗುರಿಯಾಗಿ ಕೆಡಬೇಡ
ಕೂಡಲಸಂಗನ ಶರಣರಿಗೆ ಒಡನೆ ಸವೆಸುವುದು

೧೪೫

ಆರಂಬವ ಮಾಡಿ ಸಂಸಾರಸ್ಥಿತಿ ಕಳೆಯದಿದ್ದರೆ
ಆ ಆರಂಬವೆ ಕೇಡು
ವ್ಯವಹಾರವ ಮಾಡಿ ಸಂಸಾರಸ್ಥಿತಿ ಕಳೆಯದಿದ್ದರೆ
ಆ ವ್ಯವಹಾರವೆ ಕೇಡು
ಓಲಗವ ಮಾಡಿ ಸಂಸಾರಸ್ಥಿತಿ ಕಳೆಯದಿದ್ದರೆ
ಆ ಓಲಗವೆ ಕೇಡು
ಭಕ್ತಿಯ ಮಾಡಿ ಜನನ ಮರಣ ವಿರಹಿತನಾಗದಿದ್ದರೆ
ಆ ಭಕ್ತಿಯೆ ಕೇಡು ಕೂಡಲಚೆನ್ನಸಂಗಮದೇವಾ

೧೪೬

ಆರಿಕೆ ಬಿತ್ತಿದ ಗಿಡುವಿನ ಹೂವ ಕೊಯಿದು
ಊರೆಲ್ಲರೂ ಕಟ್ಟಿಸಿದ ಕೆರೆಯ ನೀರ ತಂದು
ನಾಡೆಲ್ಲರೂ ನೋಡಿಯೆಂದು ಪೂಜಿಸುತ್ತ
ಪೂಜಿಸಿದ ಪುಣ್ಯ ಹೂವಿಗೋ ನೀರಿಗೋ
ನಾಡೆಲ್ಲಕ್ಕೊ ಪೂಜಿಸಿದಾತಗೊ
ಇದ ನಾನರಿಯೆ ನೀ ಹೇಳೆಂದನಂಬಿಗ ಚೌಡಯ್ಯ

೧೪೭

ಆರು ದರ್ಶನವೆಲ್ಲ ಎನ್ನ ಬಾಚಿಯ ಕಲೆ
ಮಿಕ್ಕಾದ ಮೀರಿದ ಅವಧೂತರುಗಳೆಲ್ಲ
ಎನ್ನ ಉಳಿಯೊಳಗಣ ಒಡಪು
ಇಂತಿವ ಮೀರಿ ವೇಧಿಸಿ ಭೇದಿಸಿಹೆನೆಂಬವರೆಲ್ಲ

ಎನ್ನ ಕೊಡತಿಯಡಿಯಲ್ಲಿ ಬಡೆಯಿಸಿಕೊಂಬ ಬಡಿಹೋರಿಗಳು
ಇಂತೀ ವಿಶ್ವಗೋಧರೆಲ್ಲರೂ
ಕರ್ತಾರನ ಕರ್ಮಟದ ನಕ್ಕುಬಚ್ಚನೆಯ ಚಿಕ್ಕಮಕ್ಕಳು
ಇಂತಿವನರಿದು ಕಾಮದಲ್ಲಿ ಕರಗದೆ
ಕ್ರೋಧದ ದಳ್ಳುರಿಯಲ್ಲಿ ಬೇಯದೆ
ನಾನಾ ವ್ಯಾಮೋಹ ಋತುಕಾಲಂಗಳ ಕಾಹಿನ ಬಲೆಗೊಳಗಾಗುತ್ತ
ಮತ್ತೆ ಸಾವಧಾನವೆ
ಮತ್ತೆಯೂ ಜ್ಞಾನಾತೀತವೆ
ಮತ್ತೆ ಧ್ಯಾನಮೂರ್ತಿಯೆ
ಮತ್ತೆ ನಾನಾ ಕ್ರೀಯಲ್ಲಿ ಭಾವ ವ್ಯವಧಾನವೆ
ಮತ್ತೆ ಗುರು ಚರ ಪರವೆ
ಒಕ್ಕುಡಿತೆ ನೀರಿನಲ್ಲಿ ತಾ ಸತ್ತ ಮತ್ತೆ
ಸಮುದ್ರವೆಷ್ಟಾಳವಾದಡೇನು
ಕಿಂಚಿತ್ತು ಸುಖದಲ್ಲಿ ಲಿಂಗವ ಬಿಟ್ಟು
ಅಂಗನೆಯರುರಸ್ಥಲದಲ್ಲಿ ಅಂಗೀಕರಿಸಿ
ಅವರಧರ ಪಾನಂಗಳ ಮಾಡಿ ನಾ ಲಿಂಗಾಂಗಿಯೆಂದಡೆ
ಸರ್ವಸಂಗಪರಿತ್ಯಾಗವ ಮಾಡಿದ ಲಿಂಗಾಂಗಿಗಳೊಪ್ಪರು
ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ
ರಾಜೇಶ್ವರಲಿಂಗವು
ಸ್ವಪ್ನದಲ್ಲಿ ಕುರುಹುಗಾಣಿಸಿಕೊಳ್ಳಾ

೧೪೮

ಆರು ಮುನಿದು ನಮ್ಮನೇನ ಮಾಡುವರು
ಊರು ಮುನಿದು ನಮ್ಮನೆಂತು ಮಾಡುವರು
ನಮ್ಮ ಕುನ್ನಿಗೆ ಕೂಸ ಕೊಡಬೇಡ
ನಮ್ಮ ಸೊಣಗಂಗೆ ತಳಿಗೆಯಲಿಕ್ಕಬೇಡ
ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲುದೆ
ನಮಗೆ ನಮ್ಮ ಕೂಡಲಸಂಗನುಳ್ಳನ್ನಕ್ಕ

೧೪೯

ಆರುವನೊಲ್ಲೆನೆಂದು ಅರಣ್ಯವ ಹೊಗುವದು
ಕಾರ್ಯವಲ್ಲ ದುರುಳತನ

ಊರೊಳಗಿದಡೆ ನರರ ಹಂಗು
ಅರಣ್ಯದಲ್ಲಿದಡೆ ತರುಗಳ ಹಂಗು
ಬಂದ ಪದಾರ್ಥವ ಲಿಂಗಾರ್ಪಿತವ ಮಾಡಿಕೊಂಬ
ಶರಣನೆ ಜಾಣ ಸಕಳೇಶ್ವರದೇವಾ

೧೫೦
ಆರೂ ಇಲ್ಲದವಳೆಂದು
ಆಳಿಗೊಳಲುಬೇಡ ಕಂಡೆಯಾ
ಎನ ಮಾಡಿದಡೂ ಆನಂಜುವಳಲ್ಲ
ತರಗೆಲೆಯ ಮೆಲಿದು ಆನಿಹೆನು
ಸರಿಯ ಮೇಲೊರಗಿ ಆನಿಹೆನು
ಚೆನ್ನಮಲ್ಲಿಕಾರ್ಜುನಯ್ಯಾ
ಕರ ಕೇಡನೊಡ್ಡಿದಡೆ
ಒಡಲನು ಪ್ರಾಣವನು ನಿಮಗರ್ಪಿಸಿ ಶುದ್ಧಳಹೆನು

೧೫೧
ಆರೂ ಇಲ್ಲದಾರಣ್ಯದೊಳಗೆ ಮನೆಯ ಕಟ್ಟಿದರೆ
ಕಾಡುಗಿಚ್ಚು ಎದ್ದು ಬಂದು ಹತ್ತಿತಲ್ಲಾ
ಆ ಉರಿಯೊಳಗೆ ಮನೆ ಬೇವಲ್ಲಿ
ಮನೆಯೊಡೆಯನೆತ್ತ ಹೋದನೋ
ಆ ಉರಿಯೊಳಗೆ ಬೆಂದ ಮನೆ
ಭೇಗೆಯಾಗದುದ ಕಂಡು
ಮನೆಯೊಡೆಯನಳಲುತ್ತ ಬಳಲುತ್ತೈದಾನೆ ಗುಹೇಶ್ವರ
ನಿಮ್ಮ ಒಲವಿಲ್ಲದ ಠಾವ ಕಂಡು
ಹೇಸಿ ತೊಲಗಿದೆನಯ್ಯ

೧೫೨
ಆರೇನೆಂದರೂ ಓರಂತಿಪ್ಪುದೆ ಸಮತೆ
ಆರು ಜರಿದವರೆನ್ನ ಮನದ ಕಾಳಿಕೆಯ
ಕಳೆದರೆಂಬುದೆ ಸಮತೆ
ಆರು ಸ್ತೌತ್ಯವ ಮಾಡಿಹರೆನ್ನ ಜನ್ಮಜನ್ಮದ

ಹಗೆಗಳೆಂಬುದೆ ಸಮತೆ
ಇಂತು ಗುರುಕಾರುಣ್ಯ
ಮನವಚನಕಾಯದಲ್ಲಿ ಅವಿತಥವಿಲ್ಲರ್ದಡೆ
ಕಪಿಲಸಿದ್ಧಮಲ್ಲಿಕಾರ್ಜುನ ನಿನ್ನವರ ನೀನೆಂಬುದೆ ಸಮತೆ

೧೫೩

ಆಲಿಕಲ್ಲ ಮರದಡಿಯಲಿಹ ಮಘಮಘಿಸುವ ಗಿಳಿವಿಂಡು
ಉರವಣಿಸುವ ಪಕ್ಷಿಗಳು
ಸರಸಗೈವ ಕೋಗಿಲೆ
ಗಗನದ ಚಂದ್ರಮ
ಅಗಲಲಾರೆನು ಸಖಿಯೆ
ಬೆಳುದಿಂಗಳು ಬಿಸಿಲಾದವೆ
ಗಗನದ ದಶರಥನ ಬೀಡಿನಲ್ಲಿ ಕಾಮಿನಿ ಕೈವೋದಳೆ
ದಶಾವಸ್ಥೆಗೊಂಡೆನು ಮಹಾಲಿಂಗ ಗಜೇಶ್ವರನುಳಿದಡೆ

೧೫೪

ಆವ ಕಾಯಕವಾದಡೂ ಸ್ವಕಾಯಕವ ಮಾಡಿ
ಗುರು ಲಿಂಗ ಜಂಗಮದ ಮುಂದಿಟ್ಟು
ಒಕ್ಕುದ ಹಾರೈಸಿ ಮಿಕ್ಕುದ ಕೈಕೊಂಡು
ವ್ಯಾಧಿ ಬಂದಡೆ ನರಳು
ಬೇನೆ ಬಂದಡೆ ಒರಲು
ಜೀವ ಹೋದಡೆ ಸಾಯಿ
ಇದಕ್ಕಾ ದೇವರ ಹಂಗೇಕೆ
ಭಾಪು ಲದ್ದೆಯ ಸೋಮಾ

೧೫೫

ಆವ ಬೀಜವ ಬಿತ್ತಿದಡೂ
ಪೃಥ್ವಿಗೆ ಬೇರು ಬಯಲಿಂಗೆ ಶಾಖೆ ತಲೆದೋರಿ ಬೆಳೆವಂತೆ
ಐಕ್ಯಕ್ಕೆ ಮರೆ ಕ್ರೀಗೆ ಬಾಹ್ಯ
ಉಭಯದ ಭೇದವುಳ್ಳನ್ನಕ್ಕ ಭಕ್ತಿಯ ಹೋರಾಟ ಬಿಡದು
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ
ಮಣಿಯುಳ್ಳನ್ನಕ್ಕ ಪವಣಿಕೆಯ ಹಂಗು ಬಿಡದು

೧೫೬
ಆವ ಬೀಜವು ಬೀಳುವಲ್ಲಿ ಮೊಳೆ ಮುಖ ಹಿಂಚು ಮುಂಚುಂಟೆ
ನೀ ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೆ
ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು
ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ
ಅರಿವಿಂಗೆ ಬೇರೊಂದೊಡಲುಂಟೆ
ಬೇರೊಂದಡಿಯಿಡದಿರು
ಮಾರಯ್ಯಪ್ರಿಯ ಅಮಲೇಶ್ವರಲಿಂಗವನರಿಯಬಲ್ಲಡೆ

೧೫೭
ಆವ ವಿದ್ಯೆಯ ಕಲಿತಡೇನು
ಸಾವ ವಿದ್ಯೆ ಬೆನ್ನಬಿಡದು
ಅಶನವ ತೊರೆದಡೇನು
ವ್ಯಸನವ ಮರೆದಡೇನು
ಉಸುರ ಹಿಡಿದಡೇನು
ಬಸುರ ಕಟ್ಟಿದಡೇನು
ಚೆನ್ನಮಲ್ಲಿಕಾರ್ಜುನದೇವಯ್ಯಾ
ನೆಲ ತಳವಾರನಾದಡೆ ಕಳ್ಳನೆಲ್ಲಿಗೆ ಹೋಹನು

೧೫೮
ಆವುಗೆಯ ಕಿಚ್ಚಿನಂತೆ
ಧಾಮಧೂಮವಾದಂತೆ
ಆವ ನಾಡ ಸುಟ್ಟನೆಂದರಿಯೆನವ್ವಾ
ಬೊಬ್ಬೆಯ ಕೊಂಡು ಹೋದವನೆಲ್ಲಿ ಉಳಿದನೆಂದರಿಯೆನವ್ವಾ
ನಿರಾಳ ನಿರಾಳದಲ್ಲಿ ಮಹಾಲಿಂಗ
ಗಜೇಶ್ವರದೇವನುಳಿದನೆಂದುಹೇಳಿದಡೆ
ಕಂಗಳ ನೀರಲ್ಲಿ ನಿಂದೆನವ್ವಾ

೧೫೯
ಆವುದ ಹಿಡಿದು ಬೀಸಿದಲ್ಲಿಯೂ ಗಾಳಿ ತಪ್ಪದು
ಏನ ಹಿಡಿದು ನುಡಿದಿಹೆನೆಂಬನ್ನಕ್ಕ ಮನದ ಸೂತಕ ಮೊದಲು

ಒಂದು ಕಂಡು ಒಂದರಲ್ಲಿ ಕೂಡಿಹೆನೆಂಬನ್ನಬರ
ಅರಿವಿನ ಸೂತಕ ಬಿಡದು
ದೀಪವ ಕೆಡಿಸಿದ ಸೆರಗಿನಂತೆ
ಅನಲನಾಹುತಿಗೊಂಡ ಸಾರದಂತೆ
ಬಯಲು ಬಯಲ ಕೂಡಿದ ನಿರಾಳಕ್ಕೆ ಲಕ್ಷವುಂಟೆ
ಅರಿವುದಕ್ಕೆ ಮುನ್ನವೆ ಅರಿದ ಅರಿವನು
ಕರಿಗೊಂಡಲ್ಲಿಯೆ ಲೋಪ ಕಾಮಧೂಮ ಧೂಳೇಶ್ವರಾ

೧೬೦
ಆಶೆಯಾಮಿಷವಳಿದು
ಹುಸಿ ವಿಷಯಂಗಳೆಲ್ಲ ಹಿಂಗಿ
ಸಂಶಯ ಸಂಬಂಧ ವಿಸಂಬಂಧವಾಯಿತ್ತು
ನೋಡಾ ಎನ್ನ ಮನದೊಳಗೆ ಘನಪರಿಣಾಮವ ಕಂಡು
ಮನ ಮಗ್ನವಾಯಿತ್ತಯ್ಯಾ
ಚೆನ್ನಮಲ್ಲಿಕಾರ್ಜುನಾ
[ನಿಮ್ಮ ಶರಣ ಪ್ರಭುದೇವರ ಕರುಣದಿಂದ ಬದುಕಿದೆನಯ್ಯಾ]

೧೬೧
ಆಸತ್ತೆ ಅಲಸಿದೆನೆಂದಡೆ ಮಾಣದು
ಬೇಸತ್ತೆ ಬೆಂಬಿದ್ದೆನೆಂದಡೆ ಮಾಣದು
ಏವೆನೇವೆನೆಂದಡೆ ಮಾಣದು ಕಾಯದ ಕರ್ಮದ ಫಲಭೋಗವು
ಕೂಡಲಸಂಗನ ಶರಣರು ಬಂದು
ಹೋ ಹೋ ಅಂಜದಿರೆಂದಡಾನು ಬದುಕುವೆನು

೧೬೨
ಆಸೆಯಿಂದ ಬಿಟ್ಟು ಕಿರಿಯರಿಲ್ಲ
ನಿರಾಶೆಯಿಂದ ಬಿಟ್ಟು ಹಿರಿಯರಿಲ್ಲ
ದಯದಿಂದ ಬಿಟ್ಟು ಧರ್ಮವಿಲ್ಲ
ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ
ಸಚರಾಚರಕ್ಕೆ ಸಕಳೇಶ್ವರನಿಂದ ಬಿಟ್ಟು ದೈವವಿಲ್ಲ

೧೬೩
ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ
ಗುಹೇಶ್ವರ
ನಿಮಗಾಗಿ ಸತ್ತವರನಾರನೂ ಕಾಣೆ

೧೬೪
ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು
ಪುಣ್ಯದ ಪದವಿಯ ಬಯಸಿದಡೆ
ಭವಮಾಲೆಯ ಬರವು ತಪ್ಪದು
ಬೇಡಲು ಹುಟ್ಟಿದ ಪ್ರಾಣಿಗೆ ಬೇಡಲು ವಿಧಿಯೆ
ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೆ
ಲಿಂಗಉದಯ ಶರಣವಿಸ್ತಾರವು ಬಯಸಿದಡೊಳವೆ
ಕೂಡಲಸಂಗಮದೇವಾ ನಿಮ್ಮಲ್ಲಿ

೧೬೫
ಆಸೆಯುಳ್ಳನ್ನಕ್ಕ ರೋಷ ಬಿಡದು
ಕಾಮವುಳ್ಳನ್ನಕ್ಕ ಕಳವಳ ಬಿಡದು
ಕಾಯಗುಣವುಳ್ಳನ್ನಕ್ಕ ಜೀವನ ಬುದ್ಧಿ ಬಿಡದು
ಭಾವವುಳ್ಳನ್ನಕ್ಕ ಬಯಕೆ ಸವೆಯದು
ನಡೆಯುಳ್ಳನ್ನಕ್ಕ ನುಡಿಗೆಡದು
ಇವೆಲ್ಲವು ಮುಂದಾಗಿದ್ದು ಹಿಂದನರಿದೆನೆಂಬ
ಸಂದೇಹಿಗಳಿರಾ ನೀವು ಕೇಳಿರೋ
ನಮ್ಮ ಶರಣರು ಹಿಂದ ಹೇಗೆ ಅರಿದರೆಂದಡೆ
ಆಸೆಯನಳಿದರು ರೋಷವ ಹಿಂಗಿದರು
ಕಾಮನ ಸುಟ್ಟರು ಕಳವಳವ ಹಿಂಗಿದರು
ಕಾಯಗುಣವಳಿದರು ಜೀವನ ಬುದ್ಧಿಯ ಹಿಂಗಿದರು
ಭಾವವ ಬಯಲುಮಾಡಿದರು ಬಯಕೆಯ ಸವೆದರು
ಹಿಂದನರಿದು ಮುಂದೆ ಲಿಂಗವೆ ಗೂಡಾದ ಶರಣರ
ಈ ಸಂದೇಹಿಗಳೆತ್ತ ಬಲ್ಲರು ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ

೧೬೬

ಆಸೆಯುಳ್ಳವಂಗೆ ಮಾಟಕೂಟವಲ್ಲದೆ
ನಿರಾಸೆಯುಳ್ಳವಂಗೆ ಮಾಟಕೂಟವೇಕೆ
ಮನಪರಿಣಾಮಿಗೆ ಮತ್ಸರವೇಕೆ
ಸುತ್ತಿದ ಮಾಯಾಪ್ರಪಂಚವ ಜರಿದವಂಗೆ
ಅಂಗನೆಯರ ಹಿಂದು ಮುಂದೆ ತಿರುಗಲೇಕೆ
ಅಮುಗೇಶ್ವರನೆಂಬ ಲಿಂಗವನರಿದವಂಗೆ
ಅಷ್ಟವಿಧಾರ್ಚನೆ ಷೋಡಶೋಪಚಾರದ ಹಂಗೇಕೆ

೧೬೭

ಆಸೆಯೆಂಬ ಕೂಸನೆತ್ತಲು
ರೋಷವೆಂಬ ತಾಯಿ ಮುಂದೆ ಬಂದಿಪ್ಪಳು
ನೋಡಾ
ಇಂತೆರಡಿಲ್ಲದ ಕೂಸನೆತ್ತಬಲ್ಲಡೆ
ಆತನೆ ಲಿಂಗೈಕ್ಯನು
ಗುಹೇಶ್ವರ

೧೬೮

ಆಸೆಯೆಂಬುದು ಅರಸಿಂಗಲ್ಲದೆ
ಶಿವಭಕ್ತರಿಗುಂಟೆ ಅಯ್ಯಾ
ರೋಷವೆಂಬುದು ಯಮದೂತರಿಗಲ್ಲದೆ
ಅಜಾತರಿಗುಂಟೆ ಅಯ್ಯಾ
ಈಸಕ್ಕಿಯಾಸೆ ನಿಮಗೇಕೆ ಈಶ್ವರನೊಪ್ಪ
ಮಾರಯ್ಯಪ್ರಿಯ ಅಮಲೇಶ್ವರಲಿಂಗಕ್ಕೆ ದೂರ ಮಾರಯ್ಯ

೧೬೯

ಆಳಾಪದ ಸೊಬಗು
ಘಂಟೆ ವಾದ್ಯದ ಕೂಗಿನ ಕೊರಚು
ಪುಂಚಾರಕರ ಎಡೆಯಾಟದಿಂದ
ಸೊಬಗು ಮರೆಯಿತ್ತು
ಎನಗೆ ಇನ್ನಾವುದು ಇಲ್ಲ
ಇನ್ನೇವೆನೆಂದನಂಬಿಗ ಚೌಡಯ್ಯ

೧೭೦
ಆಳುತನದ ಮಾತನೇರಿಸಿ ನುಡಿದಡೆ
ಆಗಳೆ ಕಟ್ಟಿದೆನು ಗಂಡುಗಚ್ಚೆಯ
ತಿಗುರನೇರಿಸಿ ತಿಲಕವನಿಟ್ಟು
ಕೈದುವ ಕೊಂಡು ಕಳನೇರಿದ ಬಳಿಕ
ಕಟ್ಟಿದ ನಿರಿ ಸಡಿಲಿದಡೆ
ಇನ್ನು ನಿಮ್ಮಾಣೆ ಕಾಣಾ
ಚೆನ್ನಮಲ್ಲಿಕಾರ್ಜುನಾ

೧೭೧
ಇಂದಿಗೆಂತು ನಾಳೆಗೆಂತೆಂದು ಚಿಂತಿಸಲೇಕೆ
ತಂದಿಕ್ಕುವ ಶಿವಂಗೆ ಬಡತನವೆ
ರಾಮನಾಥ

೧೭೨
ಇಂದ್ರನೀಲ ಗಿರಿಯನೇರಿಕೊಂಡು
ಚಂದ್ರಕಾಂತ ಶಿಲೆಯನಪ್ಪಿಕೊಂಡು
ಕೊಂಬ ಬಾರಿಸುತ್ತ ಎಂದಿಪ್ಪೆನೋ ಶಿವನೆ
ನಿಮ್ಮ ನೆನೆವುತ್ತ ಎಂದಿಪ್ಪೆನೋ
ಹರನೆ ಎನ್ನ ಕುಂಭ ಕುಚದ ಮೇಲೆ ನಿನ್ನನೆಂದೆತ್ತಿಕೊಂಬೆನಯ್ಯಾ
ಅಂಗಭಂಗ ಮನಭಂಗವಳಿದು
ನಿಮ್ಮನೆಂದಿಗೊಮ್ಮೆ ನೆರೆವೆನಯ್ಯಾ
ಚನ್ನಮಲ್ಲಿಕಾರ್ಜುನಾ

೧೭೩
ಇಂಬಪ್ಪ ಶರಧಿಯ ಸಂಭ್ರಮದ ಮೊರಹಿನಲಿ
ಶಂಭುವೆ ನಿನ್ನನೊಡಗೂಡಿದೆನಯ್ಯಾ
ಬೇರೊಂದ ಕೇಳೆ ಬೇರೊಂದ ಕಾಣೆ
ಮಹಾ ಉಲುಹೆ ಒಡಮನೆಯಾದೆನಯ್ಯಾ
ಅನಿಮಿಷನೆಂಬ ಶರಧಿಯ ಮಹಾ ಉಲುಹಿನ
ಉಲುಹುಗೆಟ್ಟೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ
ನೀನೆಂಬ ಸಮುದ್ರದಲಿ ಆನಿದ್ದನು

೧೭೪

ಇಂಬಿನ ಚುಂಬನ ಅಮೃತಾಹಾರ
ಆಲಿಂಗನವೆ ಆಭರಣ
ಸೋಂಕೆ ವಸ್ತ್ರ
ನೋಟವೆ ಕೂಟ
ಒಡನಾಟವೆ ಅಷ್ಟಭೋಗವೆನಗೆ
ಉರಿಲಿಂಗದೇವನ ಕೂಟವೆ
ಪರಾಪರ ವಾಙ್ಮಯಾತೀತ ಪರಮಸುಖ

೧೭೫

ಇದಿರೆನ್ನ ಹಳಿವವರು ಮತಿಯ ಬೆಳಗುವರು
ಮನದ ಕಾಳಿಕೆಯ ಕಳೆವವರೆನ್ನ ನಂಟರು
ದುರಾಚಾರದಲ್ಲಿ ನಡೆವವರು ಕನ್ನಡಿ ಎನಗೆ
ಹೇಯೋಪಾದಿಯ ತೋರುವವರು
ಇದು ಕಾರಣ ನಾನನ್ಯ ದೇಶಕ್ಕೆ ಹೋಗೆನು
ಸಕಳೇಶ್ವರದೇವರ ತೋರುವರೊಳರಿಲ್ಲಿಯೆ

೧೭೬

ಇನಿಯಂಗೆ ತವಕವಿಲ್ಲ
ಎನಗೆ ಸೈರಣೆಯಿಲ್ಲ
ಮನದಿಚ್ಛೆಯನರಿವ ಸಖಿಯರಿಲ್ಲ
ಇನ್ನೇವೆನವ್ವಾ
ಮನುಮಥವೈರಿಯ ಅನುಭಾವದಲ್ಲಿ ಎನ್ನ ಮನ ಸಿಲುಕಿ ಬಿಡದು
ಇನ್ನೇನ ಮಾಡುವೆನೆಲೆ ಕರುಣವಿಲ್ಲದ ತಾಯೆ
ದಿನ ವೃಥಾ ಹೋಯಿತ್ತಾಗಿ ಯೌವ್ವನ ಬೀಸರವಾಗದ ಮುನ್ನ
ಪಿನಾಕಿಯ ನೆರಯವ್ವಾ ಶಂಭುಜಕ್ಕೇಶ್ವರನ

೧೭೭

ಇನಿಯನೆನಗೆ ನೀನು
ಇನ್ನೇನನೊಂದ ನಾನರಿಯೆ
ನೀ ನುಡಿಸಲು ನುಡಿವೆನು

ನಡೆಸಲು ನಡೆವೆನು
ನೀನಲ್ಲದರಿಯೆನು
ನಲ್ಲ ನೀ ಕೇಳಾ
ನೀನೇ ಗತಿ ನೀನೇ ಮತಿ ನಿನ್ನಾಣೆಯಯ್ಯಾ
ಉರಿಲಿಂಗದೇವಾ

೧೭೮
ಇನ್ನಾಡುವೆ ಜಂಗಮ ಬಹುರೂಪ
ಅಲ್ಲಮನಂತೆ ಆಡುವೆ ಬಹುರೂಪ
ಅಜಗಣ್ಣನಂತೆ ಆಡುವೆ ಬಹುರೂಪ
ಮುಖವಾಡದಯ್ಯಗಳಂತೆ ಆಡುವೆ ಬಹುರೂಪ
ಪುರುಷಾಂಗಣವ ಮೆಟ್ಟಿ ಆಡುವೆ ಬಹುರೂಪ
ರೇಕಣ್ಣಪ್ರಿಯ ನಾಗಿನಾಥ
ಬಸವನಿಂದ ಬದುಕಿತೀ ಲೋಕವೆಲ್ಲಾ

೧೭೯
ಇನ್ನೆಲ್ಲರ ಕೇಳುವುದಕ್ಕೆ ಕುಲ ಛಲ ಮಲ ದೇಹಿಕರು ಬಿಡರೆನ್ನ
ಎದೆಯಲ್ಲಿ ಕಟ್ಟಿದ ಎಳೆಯಾಸೆ ಬಿಡದು
ಕೊಡುವ ಕೊಂಬಲ್ಲಿ ದ್ವಿಜರ ಒಡಗೂಡುವುದು ಬಿಡದು
ಎನ್ನೊಡೆಯ ಬಸವಣ್ಣ ಹೇಳಿದ ಮಾತಿಂಗೆ ಅಡಿಯಿಡಲಮ್ಮದೆ ಕಟ್ಟಿದೆ
ಹಿಡಿದು ಅರ್ಚಿಸುವುದಕ್ಕೆ ಶಿರದ ಕಡೆಯ ಕಾಣೆ
ಮಜ್ಜನ ಮಂಡೆಗೆಂದರಿಯೆ ಪಾದಕ್ಕೆಂದರಿಯೆ
ಕುಸುಮವನಿಕ್ಕುವುದಕ್ಕೆ ಸಸಿಯಾದೆ ಮಕುಟದಲ್ಲಿ
ಪಾದಕ್ಕೆ ಮದನ ಪಿತನ ಅಕ್ಷಿಯಾದೆ ಉಂಗುಷ್ಠದಲ್ಲಿ
ಊಟಕ್ಕೆ ಬಾಯ ಕಾಣೆ
ಕೂಟಕ್ಕೆ ಅವಯವಂಗಳಿಲ್ಲ
ಮಾತಿಗೆ ಆತ್ಮನ ಕಾಣೆ
ಇದೇತರ ಮುರಿ
ಪಾಷಾಣದಂತಿದೆ ಇದರಾಟವೆನಗೆ ಕಾಟವಾಗಿದೆ
ಅಲೇಖನಾದ ಶೂನ್ಯ ಕಲ್ಲಾದ ಭೇದವ ಮೆಲ್ಲಗೆ ಎನಗೆ ಹೇಳು

೧೮೦
ಇನ್ನೇವೆ
ನಾ ತಂದ ಬೆಂಕಿಯಲ್ಲಿ
ಸರ್ವಾಂಗವಿಷದ ಚೇಳು ಬಿದ್ದು ಬೇವುತ್ತಿದೆ
ಹಿಡಿದು ತೆಗೆದೆಹೆನೆಂದಡೆ ಉರಿ ತಾಗಿದ ಚೇಳು ಎನ್ನ ಹೊಯ್ದಿತ್ತು
ಸತ್ತಿತ್ತೆಂಬ ನೋವು ಬಿಡದು
ಎನಗೆ ವಿಷ ತಾಗಿತ್ತೆಂಬ ಆಸೆ ಬಿಡದು
ಬಿಟ್ಟಡೆ ಸಮಯಕ್ಕೆ ದೂರ
ಹಿಡಿದಡೆ ಜ್ಞಾನಕ್ಕೆ ದೂರ
ಉಭಯದ ಬೇನೆಯಲ್ಲಿ ಬೇವುದು
ಸದಾಶಿವಮೂರ್ತಿಲಿಂಗಕ್ಕೆ ದೂರ

೧೮೧
ಇಬ್ಬರಿಗೊಂದೆಂಬ ತೊಡುವೆ ಗಡ ಕಾಮಾ
ಅರಿದರಿದು ಬಿಲುಗಾರನಹೆಯೊ
ಎಸೆದಿಬ್ಬರು ಒಂದಹರು ಗಡ
ಇದು ಹೊಸತು
ಚೋದ್ಯವೀ ಸರಳ ಪರಿ ನೋಡಾ
ಎನಗೆಯೂ ಉರಿಲಿಂಗದೇವಗೆಯೂ ತೊಟ್ಟೆಸು
ನಾವಿಬ್ಬರೊಂದಾಗೆ ಬಿಲ್ಲಾಳಹೆ
ಎಸೆಯೆಲೋ ಕಾಮಾ

೧೮೨
ಇಬ್ಬರು ಮೂವರು ದೇವರೆಂದು
ಉಬ್ಬಿ ಮಾತನಾಡಬೇಡ
ಒಬ್ಬನೆ ಕಾಣಿರೊ
ಇಬ್ಬರೆಂಬುದು ಹುಸಿ
ನೋಡಾ
ಕೂಡಲಸಂಗಮದೇವನಲ್ಲದಿಲ್ಲೆಂದಿತ್ತು ವೇದ

೧೮೩
ಇರಿವ ಆಸಿ ನೋವ ಬಲ್ಲುದೆ
ಬೇಡುವಾತ ರುಜವ ಬಲ್ಲನೆ
ಕಾಡುವ ಕಾಳುಮೂಳರ ವಿಧಿ ಎನಗಾಯಿತ್ತು
ನಿಃಕಳಂಕ ಮಲ್ಲಿಕಾರ್ಜುನಾ

೧೮೪
ಇರುಹು ಕಡೆ ಎಂಭತ್ತನಾಲ್ಕು ಲಕ್ಷ ಜೀವ
ಅವು ಹುಟ್ಟುವಾಗಲೆ ಸುಖದುಃಖ ಭೋಗಂಗಳ ಕೊಂಡು ಹುಟ್ಟಿದವು
ಇದು ತಪ್ಪದ ದೃಷ್ಟ
ಅರುಹಿರಿಯರೆಲ್ಲರು ಮರೆಯಬೇಡಿ
ಅರಿವಿನ ಹೊಲನ ನೋಡಿಕೊಳ್ಳಿ
ವೇಷಕ್ಕೆ ತಪ್ಪುದಂತಾಡಿ ಹೋಗಿ
ಪುರುಷ ಸತ್ತಡೆ ಸತಿ ಮುಂಡೆತನದಂತೆ ನೀಸಲಾರೆ
ಕಳ್ಳನ ಹೆಂಡತಿಯಂತೆ ತಲ್ಲಳಿಸಲಾರೆ
ನಿಮ್ಮ ಅರಿವಿನ ಹಾನಿ ಎನ್ನ ಇಹಪರದ ಕೇಡು
ಈ ಪದಕ್ಕೆ ನೋಯಬೇಡ
ನೊಂದಡೆ ಸದಾಶಿವಮೂರ್ತಿಲಿಂಗಕ್ಕೆ ಹೊರಗು

೧೮೫
ಇರುಳಿಗೆ ಮೊಲೆ ಯೋನಿ ಅಧರ
ಹಗಲಿಗೆ ಸಂಪುಟ ಲೇಖ
ಮಾತಿನ ಮಾಲೆಯ ಸರಕು
ವೇಷದ ಪುಣ್ಯ
ಸುಡು ಭ್ರಾಂತರ ಮಾತು
ಸಾಕು ನಿಲ್ಲು
ಐಘಟದೂರ ರಾಮೇಶ್ವರಲಿಂಗ ಅವರ ಬಲ್ಲನಾಗಿ

೧೮೬
ಇರುಳಿನ ಮುಖ ಹಗಲೆಂದರಿಯರು
ಹಗಲಿನ ಮುಖ ಇರುಳೆಂದರಿಯರು

ಇರುಳಿನ ಮುಖದೊಳಗೊಂದು ನವರತ್ನದ
ಖಂಡಿತಹಾರವಡಗಿತ್ತು
ಹಗಲಿನ ಮುಖದೊಳಗೊಂದು ನವಚಿತ್ರ ಪತ್ರದ ವೃಕ್ಷವಡಗಿತ್ತು
ರತ್ನದ ಹಾರದ ವೃಕ್ಷಕ್ಕಾಹಾರವನಿಕ್ಕಿದಡೆ
ಗುಹೇಶ್ವರಲಿಂಗದಲ್ಲಿ ಪ್ರಾಣಲಿಂಗಕ್ಕೆ ಸುಖವಾಯಿತ್ತು

೧೮೭

ಇರುಳೊಂದು ಮುಖ ಹಗಲೊಂದು ಮುಖ
ಕಾಯವೊಂದು ಮುಖ ಜೀವವೊಂದು ಮುಖ
ಬುದ್ಧಿಯನರಿಯದಿದೆ ನೋಡಾ
ಪ್ರಾಣಲಿಂಗವೆಂಬ ಭ್ರಾಂತು ನೋಡಾ
ಇದು ಕಾರಣ ಮೂರು ಲೋಕವೆಯ್ದೆ
ಬರುಸೂರೆವೋಯಿತ್ತು ಗುಹೇಶ್ವರ

೧೮೮

ಇಲ್ಲವೆಯ ಮೇಲೊಂದು ಉಂಟೆಂಬ ಪರಿಭಾವ
ಅಲ್ಲಿ ಇಲ್ಲಿ ಎನ್ನವೆ ತಾನೆ ನಿಂದಿತ್ತು
ನೋಡಾ
ತನ್ನಲ್ಲಿಯ ಪ್ರಕೃತಿಯ ತಾನೆ ಹಿಂಗಿಸಲು
ಅಲ್ಲಿಯೆ ಸುಜ್ಞಾನ ಉದಯಸಿತ್ತು
ಎಲ್ಲಾ ಎಡೆಯಲ್ಲಿಯು ನಿಂದ ನಿಜಪದವ
ಗುಹೇಶ್ವರ ನಿಮ್ಮ ಶರಣ ಬಲ್ಲ

೧೮೯

ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯಾ
ಇವ ನಮ್ಮವ ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ
ಕೂಡಲಸಂಗಮದೇವಾ ನಿಮ್ಮ ಮನೆಯ ಮಗನೆಂದೆನಿಸಯ್ಯಾ

೧೯೦

ಇಷ್ಟಲಿಂಗ ಗುರುವಿನ ಹಂಗು
ಚಿತ್ತ ಕಾಮನ ಹಂಗು

ಪ್ರಜೆ ಪುಣ್ಯ ಮಹಾದೇವನ ಹಂಗು
ಎನ್ನ ದಾಸೋಹ ಆರ ಹಂಗೂ ಇಲ್ಲ
ಚನ್ನಬಸವಣ್ಣಪ್ರಿಯ ಚಂದೇಶ್ವರಲಿಂಗವೆ
ಕಣ್ಣಿಯ ಮಾಡಬಲ್ಲಡೆ ಬಾ ಎನ್ನ ತಂದೆ

೧೯೧
ಇಹಕ್ಕೊಬ್ಬ ಗಂಡನೆ
ಪರಕ್ಕೊಬ್ಬ ಗಂಡನೆ
ಲೌಕಿಕ್ಕೊಬ್ಬ ಗಂಡನೆ
ಪಾರಮಾರ್ಥಕ್ಕೊಬ್ಬ ಗಂಡನೆ
ಎನ್ನ ಗಂಡ ಚೆನ್ನಮಲ್ಲಿಕಾರ್ಜುನದೇವರಲ್ಲದೆ
ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ ಬೊಂಬೆಯಂತೆ

೧೯೨
ಇಹಪರವೆಂಬ ಇದ್ದೆಸೆಯಾಗಿರ್ದನ ಪರಿ ಹೊಸತು
ನೆಯಿ ಹತ್ತದ ನಾಲಗೆಯಂತೆ
ಹುಡಿ ಹತ್ತದ ಗಾಳಿಯಂತೆ
ಕಾಡಿಗೆ ಹತ್ತದ ಆಲಿಯಂತೆ ಇರ್ದನಯ್ಯಾ
ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗದಲ್ಲಿ
ಆಚರಿಸುತ್ತ ಆಚರಿಸುತ್ತ ಆಚರಿಸದಂತಿರ್ದ ನೋಡಯ್ಯಾ

೧೯೩
ಇಹಲೋಕ ಪರಲೋಕ ತಾನಿದ್ದಲ್ಲಿ
ಗಗನಮೇರುಮಂದಿರ ತಾನಿದ್ದಲ್ಲಿ
ಸಕಲಭುವನ ತಾನಿದ್ದಲ್ಲಿ
ಸತ್ಯನಿತ್ಯ ನಿರಂಜನ ಶಿವತತ್ತ್ವ ತಾನಿದ್ದಲ್ಲಿ
ಉತ್ತರೋತ್ತರ ಚತುರ್ವಳಯ ತಾನಿದ್ದಲ್ಲಿ
ಚಂದ್ರ ಸೂರ್ಯ ತಾರಾಮಂಡಲ ತಾನಿದ್ದಲ್ಲಿ
ಅಂತರ ಮಹದಂತರ ತಾನಿದ್ದಲ್ಲಿ
ಸ್ವತಂತ್ರ ಗುಹೇಶ್ವರಲಿಂಗ ತಾನಿದ್ದಲ್ಲಿ

೧೯೪

ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ
ಸುಳಿದು ಬೀಸುವ ಗಾಳಿ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ

೧೯೫

ಇಳೆಯನಾಧಾರ ಮಾಡಿ ಜಳವ ಜೀವನ ಮಾಡಿ
ಒಳಗಿಪ್ಪ ಭೇದವನು
ವಾಯುವ ಕಂಬವ ಮಾಡಿ ನಳನ ಚಂದ್ರಮನ ಮಡಗಿ
ಆಕಾಶವನು ಗಳನೆ ಮುಚ್ಚಿದ ಬೆಳಗಿಗೆ
ಆನು ಬೇಡಿಕೊಂಬೆ ರಾಮನಾಥ

೧೯೬

ಈ ನಲ್ಲನ ಬೇಟದ ಕೂಟದ ಪರಿಯನು ಏನೆಂದು ಹೇಳುವೆ
ವಿಪರೀತ ಕೆಳದಿ
ಪುರುಷ ಶಕ್ತಿಯಾಗಿ ಶಕ್ತಿ ಪುರುಷನಾಗಿ
ನೆರೆದು ಸುಖಿಸುವನು
ಕೇಳಾ ಕೆಳದಿ
ಅತಿ ಕಾಮಿ ವಿಪರೀತನು
ಉರಿಲಿಂಗದೇವನು
ನೆರೆಯಲು ನೆರೆವುದು ಮನದಿಚ್ಛೆ ಕೆಳದಿ

೧೯೭

ಈ ಲೋಕದ ಭೀತರು ಪರ ಲೋಕದ ಕಲಿಗಳು
ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯರೆಲ್ಲರು
ಅಜನಿತಂಗೆ ಸರಿಯೆ
ಮೂಜಗದಲ್ಲಿ ನಿರತರು
ಕೂಡಲಸಂಗನ ಶರಣರು
ತ್ರಿವಿಧವನರಿಯರು

೧೯೮

ಈರೇಳುನೂರುವರುಷ ಮಜ್ಜನಕ್ಕೆರೆದು ವೃಥಾ ಹೋಯಿತ್ತಲ್ಲಾ
ಏನೆಂದರಿಯದೆ ವೃಥಾ ಹೋಯಿತ್ತಲ್ಲಾ
ನೂಲುವರ ಕಂಡು ನೂತಿಹೆನೆಂದಡೆ
ಅಯ್ಯಾ
ಎನ್ನ ಕರಿಯ ಕದಿರು ಬಿಳಿದಾಗದು
ಅಯ್ಯಾ
ಎನ್ನ ತನುಮನಧನ ನಿಮ್ಮಲ್ಲಿ ಸಯವಾಗವು
ಬಂದವಸರದಲ್ಲಿ ಮನವು ಲಿಂಗದೊಳಗೆ ತೋರಿತ್ತು
ಅನುಭವಕ್ಕೊಳಗಾಗದೆ
ಎನ್ನ ವಿಚಾರಿಸಿ ನೋಡೆಹನೆಂದಡೇನೂ ಇಲ್ಲ
ಸುಳಿವಿನೊಳಗೆ ಅರಿದೆಹೆನೆಂದಡೆ ಸುಳುಹಿಂಗೆ ಭಂಗವಾಯಿತ್ತು
ಎನಗಿನ್ನು ಸುಳುಹೇಕೆ ಹೇಳಾ ಸಕಳೇಶ್ವರದೇವಾ

೧೯೯

ಈಳೆ ನಿಂಬೆ ಮಾವು ಮಾದಲಕೆ
ಹುಳಿ ನೀರನೆರೆದವರಾರಯ್ಯಾ
ಕಬ್ಬು ಬಾಳೆ ಹಲಸು ನಾರಿವಾಳಕ್ಕೆ
ಸಿಹಿ ನೀರನೆರೆದವರಾರಯ್ಯಾ
ಕಳವೆ ರಾಜಾನ್ನ ಶಾಲ್ಯನ್ನಕ್ಕೆ
ಓಗರದ ಉದಕವನೆರೆದವರಾರಯ್ಯಾ
ಮರುಗ ಮಲ್ಲಿಗೆ ಪಚ್ಚೆ ಮುಡಿವಾಳಕ್ಕೆ
ಪರಿಮಳದುದಕವನೆರೆದವರಾರಯ್ಯಾ
ಇಂತೀ ಜಲವು ಒಂದೆ ನೆಲನು ಒಂದೆ ಆಕಾಶವು ಒಂದೆ
ಜಲವು ಹಲವು ದ್ರವ್ಯಂಗಳ ಕೂಡಿ
ತನ್ನ ಪರಿಬೇರಾಗಿಹ ಹಾಗೆ
ಎನ್ನದೇವ ಚೆನ್ನಮಲ್ಲಿಕಾರ್ಜುನಯ್ಯನು
ಹಲವು ಜಗಂಗಳ ಕೂಡಿಕೊಂಡಿರ್ದಡೇನು
ತನ್ನ ಪರಿ ಬೇರೆ

## ೨೦೦

ಉಂಕೆಯ ನಿಗುಚಿ
ಸರಿಗೆಯ ಸಮಗೊಳಿಸಿ ಸಮಗಾಲನಿಕ್ಕಿ
ಅಣಿಯೇಳ ಮುಟ್ಟದೆ ಹಿಡಿದ ಲಾಳಿಯ ಮುಳ್ಳು
ಕಂಡಿಕೆಯ ನುಂಗಿತ್ತು
ಈ ಸೀರೆಯ ನೆಯ್ದುವ ನಾನೊ ನೀನೋ ರಾಮನಾಥ

## ೨೦೧

ಉಂಟೆಂಬಲ್ಲಿಯೆ ಜ್ಞಾನಕ್ಕೆ ದೂರ
ಇಲ್ಲಾ ಎಂಬಲ್ಲಿಯೆ ಸಮಯಕ್ಕೆ ದೂರ
ತನುವಿಗೆ ಬಂದ ಪ್ರಾಪ್ತಿಯ ಅನುಭವಿಸುವುದಕ್ಕೆ ಒಡಲಾಯಿತ್ತು
ಪ್ರಾಪ್ತಿಯನುಂಬುದು ಘಟವೋ ಆತ್ಮನೋ
ಒಂದನಹುದು ಒಂದನಲ್ಲಾ ಎನಬಾರದು
ಇಲ್ಲಾ ಎಂದಡೆ ಕ್ರೀವಂತರಿಗೆ ಭಿನ್ನ
ಅಹುದೆಂದಡೆ ಅರಿದಾತಂಗೆ ವಿರೋಧ
ತೆರಪಿಲ್ಲದ ಘನವ ಉಪಮಿಸಲಿಲ್ಲ
ಕಾಮಧೂಮ ಧೂಳೇಶ್ವರನ ಮುಂದೆ ಹೋಗಲಿಲ್ಲ
ಹಿಂದೆ ಉಳಿಯಲಿಲ್ಲ

## ೨೦೨

ಉಂಟೆಂಬುದು ಭಾವದ ನೆಮ್ಮುಗೆ
ಇಲ್ಲಾ ಎಂಬುದು ಚಿತ್ತದ ಪ್ರಕೃತಿ
ಉಭಯನಾಮ ನಷ್ಟವಾಗಿ ನಿಂದುಳುಮೆ
ಐಘಟದೂರ ರಾಮೇಶ್ವರಲಿಂಗ ಇಕ್ಕಿದ ಗೊತ್ತು

## ೨೦೩

ಉಂಬ ತಳಿಗೆಯ ಬೆಳಗಿದಡೆ
ನೊಂದಿತ್ತೆ ನನ್ನ ಬೆಳಗಿದರೆಂದು
ಬೆಂದ ಮಸಿಯ ತೊಳೆದಡೆ
ನೊಂದಿತ್ತೆ ಎನ್ನ ಹೊರೆಯನೆತ್ತಿದರೆಂದು
ಅಂದಮಂದದರಂದವ ನುಡಿದಡೆ ನೊಂದು ಬೇಯಲೇಕೆ

ಅವರು ನೊಂದರೂ ನೋಯಲಿ
ಹಿಂಗಬೇಕೆಂದೆ ನಿಃಕಳಂಕ ಮಲ್ಲಿಕಾರ್ಜುನಾ

೨೦೪
ಉಂಬ ಬಟ್ಟಲು ಬೇರೆ ಕಂಚಲ್ಲ
ನೋಡುವ ದರ್ಪಣ ಬೇರೆ ಕಂಚಲ್ಲ
ಭಾಂಡ ಒಂದೆ ಭಾಜನ ಒಂದೆ
ಬೆಳಗೆ ಕನ್ನಡಿಯೆನಿಸಿತ್ತಯ್ಯಾ
ಅರಿದಡೆ ಶರಣ ಮರೆದಡೆ ಮಾನವ
ಮರೆಯದೆ ಪೂಜಿಸು ಕೂಡಲಸಂಗನ

೨೦೫
ಉಂಬವರೆಲ್ಲ ಒಂದೇ ಪರಿಯೆ
ತಮ್ಮ ತಮ್ಮ ಬಾಯಿಚ್ಛೆಯಲ್ಲದೆ
ಇಕ್ಕುವರಂದಕ್ಕೆ ಉಂಡಡೆ
ತನಗೇ ಸಿಕ್ಕೆಂದೆ ಮಾರೇಶ್ವರಾ

೨೦೬
ಉಂಬಾಗಳಿಲ್ಲೆನ್ನ ಉಡುವಾಗಳಿಲ್ಲೆನ್ನ
ಬಂಧುಗಳು ಬಂದಾಗಳಿಲ್ಲೆನ್ನ
ಲಿಂಗಕ್ಕೆ ಇಲ್ಲೆಂಬ
ಜಂಗಮಕ್ಕೆ ಇಲ್ಲೆಂಬ
ಬಂದ ಪುರಾತರಿಗೆ ಇಲ್ಲೆಂಬ
ಸಾವಾಗ ದೇಹವ ದೇಗುಲಕ್ಕೆ ಒಯ್ಯೆಂಬ
ದೇವರಿಗೆ ಹೆಣ ಬಿಟ್ಟಿ ಹೇಳಿತ್ತೆ ಕೂಡಲಸಂಗಮದೇವಾ

೨೦೭
ಉಂಬುದು ಉಡುವುದು ಶಿವಾಚಾರ
ಕೊಂಬುದು ಕೊಡುವುದು ಕುಲಾಚಾರ
ಎಂಬ ಅನಾಚಾರಿಯ ಮಾತ ಕೇಳಲಾಗದು

ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರ ಒಂದೆ
ಎಂದು ಕೊಟ್ಟು ಕೊಂಬುದು ಸದಾಚಾರ
ಉಳಿದುವೆಲ್ಲ ಅನಾಚಾರ
ಅದೆಂತೆಂದಡೆ
ಸ್ಫಟಿಕದ ಕೊಡದಲ್ಲಿ ಕಾಳಿಕೆಯನರಸುವ ಹಾಗೆ
ಸಿಹಿಯೊಳಗೆ ಕಹಿಯನರಸುವ ಹಾಗೆ
ರಜಸ್ಸೂತಕ ಕುಲಸೂತಕ ಜನನಸೂತಕ ಪ್ರೇತಸೂತಕ
ಉಚ್ಛಿಷ್ಟಸೂತಕ
ಎಂದಡೆ ಆತಂಗೆ ಗುರುವಿಲ್ಲ ಲಿಂಗವಿಲ್ಲ ಜಂಗಮವಿಲ್ಲ
ತೀರ್ಥಪ್ರಸಾದವಿಲ್ಲ
ಇಂತೀ ಪಂಚಚೂತಕವ ಕಳೆದಲ್ಲದೆ ಭಕ್ತನಾಗ
ಇಂತಹ ಭಕ್ತರಲ್ಲಿ ಕೊಟ್ಟುಕೊಂಬುದು ಸದಾಚಾರ
ಕೂಡಲಚೆನ್ನಸಂಗಮದೇವಾ

೨೦೮
ಉಣಲೆಂದು ಬಂದ ಸುಖ ಉಂಡಲ್ಲದೆ ಹರಿಯದು
ಕಾಣಲೆಂದು ಬಂದ ದುಃಖ ಕಂಡಲ್ಲದೆ ಹರಿಯದು
ತನುವಿಂಗೆ ಬಂದ ಕರ್ಮ ಹರಿವ ಕಾಲಕ್ಕೆ
ಚೆನ್ನಮಲ್ಲಿಕಾರ್ಜುನದೇವರು ಕಡೆಗಣ್ಣಿನಿಂದ ನೋಡಿದರು

೨೦೯
ಉತ್ತಮಕುಲದಲ್ಲಿ ಹುಟ್ಟಿದೆನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ
ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ
ದಾಸಯ್ಯ ಶಿವದಾನವನೆರೆಯ ನೋಡಯ್ಯಾ
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ
ಉನ್ನತ ಮಹಿಮ
ಕೂಡಲಸಂಗಮದೇವಾ
ಶಿವಧೋ ಶಿವಧೋ

೨೧೦

ಉತ್ತಮತೇಜಿಗೆ ಚಬುಕಿನಲ್ಲಿ ತೆಗೆವರುಂಟೆ
ಪಟ್ಟಣಕ್ಕೆ ಒಡೆಯನಾದ ಬಳಿಕ ಜಾತಿಗೋತ್ರವನರಸಲುಂಟೆ
ಪರಮಸುಜ್ಞಾನಿಗೆ ಪ್ರಾಣದ ಹಂಗುಂಟೆ
ಲಿಂಗವನಪ್ಪಿದ ಶರಣನ ಕಂಡಕಂಡವರು ಜರಿದಡೆ ಸಂದೇಹವುಂಟೆ
ಇಹಲೋಕದವರು ಜರಿದರೆಂದು ವಿಪರೀತಗೊಳಲೇಕೆ
ಅಮುಗೇಶ್ವರಲಿಂಗವನರಿದ ಶರಣಂಗೆ
ಆರು ಹರಸಿದಡೇನು ಆರು ಹಳಿದಡೇನು

೨೧೧

ಉತ್ತರಾಪಥದ ಮೇಲೆ ಮೇಘ ವರ್ಷ ಕರೆಯಲು
ಆ ದೇಶದಲ್ಲಿ ಬರನಾಯಿತ್ತು
ಆ ದೇಶದ ಪ್ರಾಣಿಗಳೆಲ್ಲರೂ ಮೃತರಾದರು
ಅವರ ಸುಟ್ಟು ರುದ್ರಭೂಮಿಯಲ್ಲಿ ನಾ ನಿಮ್ಮನರಸುವೆ ಗುಹೇಶ್ವರ

೨೧೨

ಉದಕ ನಿಂದಲ್ಲಿ ಪ್ರತಿಬಿಂಬ ನಿಶ್ಚಯವಾಯಿತ್ತು
ಆ ಜಲ ಸಂಚಾರದಿಂದ ಕದಲೆ ಮತ್ತೆ
ಪ್ರತಿರೂಪಿಂಗೆ ಎಡೆಯುಂಟೆ
ಚಿತ್ತ ಸಂಚಾರಿಸುವಲ್ಲಿ
ಕುರುಹಿನ ಗೊತ್ತಿಗೆ ಒಡೆತನವುಂಟೆ
ಇಂತೀ ಉಭಯದ ಸಕೀಲ ನಿಂದು ಕಳೆ ಬೆಳಗುತ್ತದೆ
ಸದಾಶಿವಮೂರ್ತಿಲಿಂಗದಲ್ಲಿ

೨೧೩

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು
ನನೆಯೊಳಗಣ ಪರಿಮಳದಂತಿದ್ದಿತ್ತು
ಕೂಡಲಸಂಗಮದೇವ
ಕನ್ನೆಯ ಸ್ನೇಹದಂತಿದ್ದಿತ್ತು

೨೧೪

ಉದಯದಲ್ಲಿ ಬ್ರಹ್ಮನ ಕಾವೆ
ಮಧ್ಯಾಹ್ನಕ್ಕೆ ವಿಷ್ಣುವ ಕಾವೆ
ಅಸ್ತಮಯದಲ್ಲಿ ರುದ್ರನ ಕಾವೆ
ಕತ್ತಲೆಯಾದ ಮತ್ತೆ ತಮ್ಮ ತಮ್ಮ ಮಂದೆಗೆ ಹೊಡೆದು
ಈ ಕಾವ ಕಟ್ಟಿಗೆಯ ಇನ್ನೆಂದಿಗೆ ಬಿಡುವೆ
ಗೋಪತಿನಾಥ ವಿಶ್ವೇಶ್ವರಲಿಂಗವು ನಷ್ಟವಹನ್ನಕ್ಕ
ಎನ್ನ ಕೈಯ ಕಟ್ಟಿಗೆ ಬಿಡದು

೨೧೫

ಉದಯವಾಯಿತ್ತ ಕಂಡು
ಉದರಕ್ಕೆ ಕುದಿವರಯ್ಯ
ಕತ್ತಲೆಯಾಯಿತ್ತ ಕಂಡು
ಮಜ್ಜನಕ್ಕೆರೆವರಯ್ಯ
ಲಿಂಗಕ್ಕೆ ನೇಮವಿಲ್ಲ
ಇರುಳಿಗೊಂದು ನೇಮ
ಹಗಲಿಗೊಂದು ನೇಮ
ಲಿಂಗಕ್ಕೆ ನೇಮವಿಲ್ಲ
ಕಾಯವೊಂದಸೆ ಜೀವವೊಂದಸೆ
ಗುಹೇಶ್ವರನೆಂಬ ಲಿಂಗವು
ತಾನೊಂಧೆಸೆ

೨೧೬

ಉದರವ ತಾಗಿದ ಮಾತು
ಅಧರದಲ್ಲಿ ಬೀಸರವೋದೀತೆಂದು
ಅಧರವ ಮುಚ್ಚಿಕೊಂಡಿರ್ದಳವ್ವೆ
ಕಂಗಳ ಮುಚ್ಚಿಕೊಂಡಿರ್ದಳವ್ವೆ
ಪರಿಮಳ ಬೀಸರವೋದೀತೆಂದು
ಅಳಿಗೆ ಬುದ್ಧಿಯ ಹೇಳಿದಳವ್ವೆ
ಮನ ಬೀಸರವೋದೀತೆಂದು
ದಿನಕರನ ಕಾವಲಕೊಟ್ಟಳವ್ವೆ
ಇಂದು ನಮ್ಮ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ

೨೧೭

ಉಪಚಾರದ ಗುರುವಿಂಗೆ
ಉಪಚಾರದ ಶಿಷ್ಯ
ಉಪಚಾರದ ಲಿಂಗ
ಉಪಚಾರದ ಜಂಗಮ
ಉಪಚಾರದ ಪ್ರಸಾದವ ಕೊಂಡು
ಗುರುವಿಂಗೆ ಭವದ ಲೆಂಕನಾಗಿ
ಅಂಧಕನ ಕೈಯ ಅಂಧಕ ಹಿಡಿದಂತೆ
ಇವರಿಬ್ಬರು ಹೊಲಬುಗೆಟ್ಟರು ಕಾಣಾ ಗುಹೇಶ್ವರ

೨೧೮

ಉರಕ್ಕೆ ಜವ್ವನಗಳು ಬಾರದ ಮುನ್ನ
ಮನಕ್ಕೆ ನಾಚಿಕೆಗಳು ತೋರದ ಮುನ್ನ
ನಮ್ಮವರಂದೆ ಮದುವೆಯ ಮಾಡಿದರು
ಸಿರಿಶೈಲ ಚನ್ನಮಲ್ಲಿಕಾರ್ಜುನಂಗೆ
ಹೆಂಗೂಸೆಂಬ ಭಾವ ತೋರದ ಮುನ್ನ
ನಮ್ಮವರಂದೆ ಮದುವೆಯ ಮಾಡಿದರು

೨೧೯

ಉರವಣಿಸುವ ಮನ ಮುಟ್ಟುವನ್ನಕ್ಕ ಕಾಡುವುದು
ಘನಘನದಲ್ಲಿ ಮನ ನಂಬುವನ್ನಕ್ಕ ಕಾಡುವುದು
ಮಹಂತ ಸಕಳೇಶ್ವರನೆಂಬ ಶಬ್ದವುಳ್ಳನ್ನಕ್ಕ ಕಾಡುವುದು

೨೨೦

ಉರಿ ಕುಡಿದ ಎಣ್ಣೆಯಂತೆ
ತಾರಕ ಕೊಂಡ ವಾರಿಯಂತೆ
ಯಾತನೆ ಕೊಂಡ ವ್ಯಾಪ್ತಿಯಂತೆ
ಮಹಾರ್ಣವ ಕೊಂಡ ಮಣ್ಣಿನಂತೆ
ಭಾವರೂಪು ಕ್ರೀಯಲ್ಲಿ ಅಡಗಿ
ಆ ಕ್ರೀ ಉರಿಕರ್ಪುರದಂತೆ ಉಭಯನಾಮವಡಗಿ
ಏಣಾಂಕಧರ ಸೋಮೇಶ್ವರಲಿಂಗದಲ್ಲಿ
ಸುಳುಹುದೋರದಿದ್ದಿತ್ತು

## ೨೨೧

ಉರಿತಾಗಿದ ಮೃಗ ಒಂದಡಿಯಿಡುವುದೆ
ತನುತಾಗಿದ ಸುಖವಗಲುವುದೆ
ಕೂಡಲಚೆನ್ನಸಂಗನ ಶರಣರನುಭಾವವರಿದ ಬಳಿಕ
ಮತ್ತೆ ಮರಳೆನು

## ೨೨೨

ಉಲಿವ ಉಯ್ಯಲೆಯ ಹರಿದುಬಂದೇರಲು
ತಾಗದೆ ತೂಗುವುದು ಭವಸಾಗರ ಮರಳಿ ಬಾರದಂತೆ
ಹಂಸೆಯ ಮೇಲೆ ತುಂಬಿ ಕುಳ್ಳಿದ್ದು ಸ್ವರಗೆಯ್ವ ಘೋಷವದೇನೋ
ಆತನಿದ್ದ ಸರ ಹರಿಯದೆ ಇದ್ದಿತ್ತು
ದೇಹಿಗಳೆಲ್ಲ ಅರಿವರೆ
ಗುಹೇಶ್ವರನ ಆಹಾರಮುಖವ

## ೨೨೩

ಉಲಿವ ಮರದ ಪಕ್ಷಿಯಂತೆ ದೆಸೆದೆಸೆಯನಾಲಿಸುತ್ತಿದ್ದೆ
ಅರಿವರಿಲ್ಲ ಅರಿವರಿಲ್ಲ
ಅರಿದು ಮರೆಯಿತ್ತಯ್ಯ
ಮಡುವಿನೊಳಗೆ ಬಿದ್ದ ಆಲಿಕಲ್ಲಿನಂತೆ
ತಾನಿದ್ದನು ಗುಹೇಶ್ವರಯ್ಯನು

## ೨೨೪

ಉಲುಹಿನ ವೃಕ್ಷದ ನೆಳಲಡಿಯಲಿದ್ದು
ಗಲಭೆಯನೊಲ್ಲೆನೆಂಬ ಪರಿಯೆಂತಯ್ಯ
ಪಟ್ಟದ ರಾಣಿಯ ಮುಖವ ಮುದ್ರೆಯನಿಕ್ಕಿ
ಮೆಟ್ಟಿ ನಡೆವ ಸತಿಯ ನೆತ್ತಿಯ ಮೇಲೆ
ನಿಲುವ ಪರಿ ಎಂತಯ್ಯ
ಆದಿಯ ಹೆಂಡತಿಯನುಲ್ಲಂಘಿಸಿದ ಕಾರಣ
ಮೇದಿನಿಯ ಮೇಲೆ ನಿಲಬಾರದು
ಸಾಧಕರೆಲ್ಲರು ಮರುಳಾದುದ ಕಂಡು
ನಾಚಿ ನಗುತ್ತಿದ್ದೆನು ಗುಹೇಶ್ವರ

೨೨೫
ಉಸುರಿನ ಪರಿಮಳವಿರಲು
ಕುಸುಮದ ಹಂಗೇಕಯ್ಯಾ
ಕ್ಷಮೆ ದಮೆ ಶಾಂತಿ ಸೈರಣೆಯಿರಲು
ಸಮಾಧಿಯ ಹಂಗೇಕಯ್ಯಾ
ಲೋಕವೆ ತಾನಾದ ಬಳಿಕ
ಏಕಾಂತದ ಹಂಗೇಕಯ್ಯಾ
ಚೆನ್ನಮಲ್ಲಿಕಾರ್ಜುನಾ

೨೨೬
ಉಳ್ಳವರು ಶಿವಾಲಯ ಮಾಡಿಹರು
ನಾನೇನ ಮಾಡುವೆ ಬಡವನಯ್ಯಾ
ಎನ್ನ ಕಾಲೇ ಕಂಬ ದೇಹವೇ ದೇಗುಲ
ಶಿರವೆ ಹೊನ್ನ ಕಲಶವಯ್ಯಾ
ಕೂಡಲಸಂಗಮದೇವಾ ಕೇಳಯ್ಯಾ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ

೨೨೭
ಉಳ್ಳುದೊಂದು ತನು
ಉಳ್ಳುದೊಂದು ಮನ
ನಾನಿನ್ನಾವ ಮನದಲ್ಲಿ ಧ್ಯಾನವ ಮಾಡುವೆನಯ್ಯಾ
ಸಂಸಾರವನಾವ ಮನದಲ್ಲಿ ತಲ್ಲೀಯವಾಹೆನಯ್ಯಾ
ಅಕಟಕಟಾ ಕೆಟ್ಟೆ ಕೆಟ್ಟೆ
ಸಂಸಾರಕ್ಕಲ್ಲಾ ಪರಮಾರ್ಥಕ್ಕಲ್ಲಾ
ಎರಡಕ್ಕೆ ಬಿಟ್ಟ ಕರುವಿನಂತೆ
ಬಿಲ್ವ ಬೆಳವಲಕಾಯನೊಂದಾಗಿ ಹಿಡಿಯಬಹುದೆ
ಚೆನ್ನಮಲ್ಲಿಕಾರ್ಜುನಾ

೨೨೮
ಊಡಿದರುಣ್ಣದು ಒಡನೆ ಮಾತಾಡದು
ನೋಡದು ನುಡಿಯದು ಬೇಡದು ಕಾಡದು

ಕಾಡಬೆರಣಿಯ ಕೈಯಲ್ಲಿಕೊಟ್ಟು
ಹೇಳದೆ ಹೋದೆಯೋ ಮಾರೇಶ್ವರಾ

೨೨೯
ಊರ ಮಾಡುವನ ಭಕ್ತಿ
ಚೂರದ ಹೊಲನಂತೆ
ದೂರದಿಂ ಬಂದು
ಅದು ನಿಂದು
ಮುಂದೆ ಸಾಗರವಾಗಲರಿಯದು
ರಾಮನಾಥ

೨೩೦
ಊರ ಹೊರಗಣ ಹೊಲೆಯರ ಮನೆಯಲ್ಲಿ ಈರೈದು ಮಗ್ಗ
ಆ ಮಗ್ಗಕ್ಕೆ ಒಬ್ಬನೆ ಹಾರುವ ನೈವಾತ
ಆ ಮಗ್ಗದೊಳಗಿದ್ದು ಸುಂಕಕಂಜಿ ಹೊಲೆಯನಾದ
ಬಂಕೇಶ್ವರಲಿಂಗವನರಿಯದೆ

೨೩೧
ಊರವಂಕದ ಹೊರಗಿದ್ದು ಮನೆಯ ಬಾಗಿಲ ಕಾಣೆನೆಂದು ಅರಸುವನಂತೆ
ಇದಿರಿನಲ್ಲಿ ತೋರುವ ಕುರುಹ ಮರದು
ಅರಿವನೊಳಕೊಂಡೆನೆಂಬುವನಂತೆ
ಜಂಬುಕ ಶಸ್ತ್ರದ ಫಳವ ನುಂಗಿ ಜಂಬೂದ್ವೀಪವೆಲ್ಲಾ
ಪ್ರಳಯವಾಯಿತ್ತು ಎಂದಡೆ ಅದು ಚಂದವೇ
ಜಾಂಬೇಶ್ವರಾ

೨೩೨
ಊರಸೀರೆಗೆ ಅಗಸ ತಡಬಡಿವಡದಂತೆ
ಹೊನ್ನೆನ್ನದು
ಹೆಣ್ಣೆನ್ನದು
ಮಣ್ಣೆನ್ನದು
ಎಂದು ಮರುಳಾದೆ

ನಿಮ್ಮನರಿಯದ ಕಾರಣ
ಕೆಮ್ಮನೆ ಕೆಟ್ಟೆ ಕೂಡಲಸಂಗಮದೇವಾ

೨೩೩
ಊರಿಗೆ ಹೊಸಬರು ಬಂದರೆ
ಪುರದೊಳಗಣ ಶ್ವಾನ ನೋಡಿ ಬಗುಳದೆ ಸುಮ್ಮನೆ ಬಿಡುವುದೆ
ಊರಿಗೆ ಹೊರಗಾದ ಶರಣರು ಊರುಗಳ ಮಧ್ಯದೊಳಿರಲು
ದೂಷಕರು ದೂಷಿಸದಿಪ್ಪರೇ ಅಯ್ಯ
ದೂಷಕರ ಧೂಮಕೇತುಗಳು ನಿಮ್ಮ ಶರಣರು
ಕೂಡಲಸಂಗಮದೇವಾ

೨೩೪
ಊರಿಗೆ ಹೋಹಾತ ದಾರಿಯ ಭಯಂಗಳನರಿದು
ಆರೈಕೆಯಿಂದ ಹೋಗಬೇಕು
ಕುರಿತ ಕುರುಹ ಹಿಡಿವನ್ನಕ್ಕ
ಭೇದ ವಿವರವ ಸೋಧಿಸಬೇಕು
ಸೋಧಿಸಿ ಸ್ವಸ್ಥವಾಗಿ ನಿಜನಿಂದಲ್ಲಿ
ಉಭಯದ ಕುರುಹು ಅನಾದಿಯಲ್ಲಿ ಅಡಗಿತ್ತು
ಅಡಗಿದ ಮತ್ತೆ ವೀರಶೂರ ರಾಮೇಶ್ವರಲಿಂಗವ ಕುರುಹಿಡಲಿಲ್ಲ

೨೩೫
ಊರಿಗೊಕ್ಕಲಹ ಹೆಂಡತಿಗೆ ಗಂಡನಹ
ಮಕ್ಕಳಿಗೆ ತಂದೆಯಹ ಮಸಣಕ್ಕೆ ಹೆಣನಹ
ಸಕಳೇಶ್ವರದೇವಾ ನಿಮ್ಮ ಶರಣನ ಪರಿ ಬೇರೆ

೨೩೬
ಊರು ಕೆಟ್ಟು ಸೂರೆಯಾಡುವಲ್ಲಿ ಆರಿಗಾರೂ ಇಲ್ಲ
ಬಸವಣ್ಣ ಸಂಗಮಕ್ಕೆ
ಚನ್ನಬಸವಣ್ಣ ಉಳುವೆಗೆ
ಪ್ರಭು ಕದಳಿಗೆ

ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ತಮ್ಮ ಲಕ್ಷ್ಯ ಭಾವಕ್ಕೆ
ಮುಕ್ತಿಯನೆಯ್ದಿಹರು
ನನಗೊಂದು ಬಟ್ಟೆಯ ಹೇಳಾ
ನಿಃಕಳಂಕ ಮಲ್ಲಿಕಾರ್ಜುನಾ

೨೩೭

ಊರ್ಧ್ವ ಭೂಮಿಯ ವಿರಾಗದಲ್ಲಿ
ಸಪ್ತಸಮುದ್ರಕ್ಕೆ ಭೂಮಿ ಒಂದೆ
ಭೂಮಿಯ ಮಧ್ಯದಲ್ಲಿ
ಒಂದು ವಟವೃಕ್ಷ ಹುಟ್ಟಿತ್ತು
ಕೊಂಬು ಮೂರು
ಅದರ ಬೆಂಬಳಿಯಲ್ಲಿ ಹುಟ್ಟಿದ ಕವಲಿಗೆ ಲೆಕ್ಕವಿಲ್ಲ
ಆ ಆಲದ ಹಣ್ಣಿಂಗೆ ಮೋನದ ಹಕ್ಕಿ ಈರೇಳುಕೋಟಿ ಕೂಡಿ
ಎಂಬತ್ತುನಾಲ್ಕು ಲಕ್ಷ ಬೇಟೆಕಾರರ ಬಲೆಯೊಳಗಾಯಿತ್ತು
ಇದರ ಒಲವರವ ಕೇಳಿಹರೆಂದು
ಅಲೇಖಮಯನಾದ ಶೂನ್ಯ ಕಲ್ಲಿನ ನಿಳಯದೊಳಗಾದ

೨೩೮

ಊರ್ವಸಿ ಕರ್ಪೂರವ ತಿಂದು
ಎಲ್ಲರಿಗೆ ಮುತ್ತ ಕೊಟ್ಟಡೆ ಮಚ್ಚುವರಲ್ಲದೆ
ಹಂದಿ ಕರ್ಪೂರವ ತಿಂದು
ಎಲ್ಲರಿಗೆ ಮುತ್ತ ಕೊಟ್ಟಡೆ ಮಚ್ಚುವರೆ
ಹುದುಹುದು ಎಂದಟ್ಟುವರಲ್ಲದೆ
ನಡೆನುಡಿ ಶುದ್ಧವುಳ್ಳವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರಲ್ಲದೆ
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ
ಅನುಭಾವವ ಮಾಡಿದಡೆ ಮಚ್ಚುವರೆ
ನಡೆನುಡಿ ಶುದ್ಧವಿಲ್ಲದವರು ಪುರಾತನರ ವಚನವ ಓದಿದಡೆ
ಆ ಹಂದಿಗಿಂತ ಕರಕಷ್ಟ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ

೨೩೯
ಋತುಕಾಲ ತಪ್ಪಿದ ಕೋಗಿಲೆಯಂತೆ
ನುಡಿಯದಂತಿರ್ದಳಲ್ಲಾ
ಪರಿಮಳ ತಪ್ಪಿದ ಭ್ರಮರನಂತೆ
ಸುಳಿಸುಳಿಗೊಳುತಿರ್ದಳಲ್ಲಾ
ಫಲವು ತಪ್ಪಿದ ಬಂಜೆ ಬನದೊಳಗಣ ಅರಗಿಳಿಯಂತಿರ್ದಳಲ್ಲಾ
ಧುರಭಾರದ ಜವ್ವನದಲ್ಲಿ ತೋರಣದೆಲೆಯಂತೆ
ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ
ಅಳಿಕಾವೃದ್ಧೆಯಾಗಿರ್ದಳಲ್ಲಾ

೨೪೦
ಎಂದಿಂಗೂ ಸಾವುದು ತಪ್ಪದೆಂದು ಅರಿದು ಮತ್ತೆ
ವ್ರತಭಂಗಿತನಾಗಿ ಅಂದಿಂಗೆ ಸಾಯಲೇತಕ್ಕೆ
ನಿಂದೆಗೆಡೆಯಾಗದ ಮುನ್ನವೆ
ಅಂಗವ ಹಾಕಿ ಚಿತ್ತದ ನಿಜಲಿಂಗವನೆಯ್ದಿ
ಮನಕ್ಕೆ ಮನೋಹರ ಶಂಕೇಶ್ವರ ಲಿಂಗವ ಕೂಡಿ

೨೪೧
ಎಡದ ಕೈಯಲಿ ಕತ್ತಿ
ಬಲದ ಕೈಯಲಿ ಮಾಂಸ
ಬಾಯಲ್ಲಿ ಸುರೆಯ ಗಡಿಗೆ
ಕೊರಳಲ್ಲಿ ದೇವರಿರಲಿ
ಅವರ ಲಿಂಗವೆಂಬೆ ಸಂಗನೆಂಬೆ
ಕೂಡಲಸಂಗಮದೇವಾ
ಅವರ ಮುಖಲಿಂಗಿಗಳೆಂಬೆ

೨೪೨
ಎಡರಡಸಿದಲ್ಲಿ
ಮೃಡ ನಿಮ್ಮ ನೆನೆವರು
ಎಡರಡಸಿದ ವಿಪತ್ತು

ಕಡೆಯಾಗಲೊಡನೆ ಮೃಡ
ನಿಮ್ಮನೆಡಹಿಯೂ ಕಾಣರು
ರಾಮನಾಥ

೨೪೩
ಎಡರಿಂಗೆ ಕಡೆಯುಂಟೆ
ಅವ್ವಾ
ಉಂಡು ಹಸಿವ್ವಾಯಿತ್ತೆಂದಡೆ ಭಂಗವೆಂಬೆ
ಕಂಡ ಠಾವಿನಲ್ಲಿ ಮನ ಬೆಂದಡೆ
ಗಂಡ ಚನ್ನಮಲ್ಲಿಕಾರ್ಜುನಯ್ಯನೆಂತೊಲಿವನವ್ವಾ

೨೪೪
ಎಣ್ಣೆ ಬೇರೆ ಬತ್ತಿ ಬೇರೆ
ಎರಡೂ ಕೂಡಿ ಸೊಡರಾಯಿತ್ತು
ಪುಣ್ಯ ಬೇರೆ ಪಾಪ ಬೇರೆ
ಎರಡೂ ಕೂಡಿ ಒಡಲಾಯಿತ್ತು
ಮಿಗಬಾರದು ಮಿಗದಿರಬಾರದು
ಒಡಲಿಚ್ಚೆಯ ಸಲಿಸದೆ ನಿಮಿಷವಿರಬಾರದು
ಕಾಯಗುಣವಳಿದು ಮಾಯಾಜ್ಯೋತಿ ವಾಯುವ ಕೂಡದ ಮುನ್ನ
ಭಕ್ತಿಯ ಮಾಡಬಲ್ಲಾತನೇ ದೇವ
ಗುಹೇಶ್ವರ

೨೪೫
ಎತ್ತಣ ಮಾಮರ ಎತ್ತಣ ಕೋಗಿಲೆ
ಎತ್ತಣಿಂದೆತ್ತ ಸಂಬಂಧವಯ್ಯ
ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು
ಎತ್ತಣಿಂದೆತ್ತ ಸಂಬಂಧವಯ್ಯ
ಗುಹೇಶ್ವರಲಿಂಗಕ್ಕೆಯು ಎನಗೆಯೂ
ಎತ್ತಣಿಂದೆತ್ತ ಸಂಬಂಧವಯ್ಯ

೨೪೬
ಎತ್ತನೇರಿ ಎತ್ತನರಸುವನಂತೆ
ತಾನಿರ್ದು ತನ್ನನರಸಿ ಕೇಳುವನಂತೆ
ಹೊತ್ತ ನಿಜವನರಿಯದತ್ತಲಿತ್ತ ಸುತ್ತಿ ಬಳಲುವನಂತೆ
ಹಿಡಿದಿರ್ದ ಲಿಂಗವ ಕಾಣದೆ ಮೂವಿಧಿಗಾಣ್ಬರನೇನೆಂಬೆನಯ್ಯಾ
ಅಜ್ಞಾನಬದ್ಧರನೆನಗೆ ತೋರದಿರಯ್ಯಾ ಸೌರಾಷ್ಟ್ರ ಸೋಮೇಶ್ವರಾ

೨೪೭
ಎತ್ತಪ್ಪೆ ಶರಣಂಗೆ
ತೊತ್ತಪ್ಪೆ ಶರಣಂಗೆ
ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲು ಕಾಯ್ದಿಪ್ಪ ಸೊಣಗನಪ್ಪೆ
ಕರ್ತಾರ
ನಿನಗೆ ಕರವೆತ್ತಿ ಹೊಡವಡುವ
ಭಕ್ತರ ಮನೆಯ ಹಿತ್ತಿಲ ಬೇಲಿಯಾಗಿಪ್ಪೆನಯ್ಯಾ
ರಾಮನಾಥ

೨೪೮
ಎತ್ತು ನಿಮ್ಮದಾನ
ಬಿತ್ತು ನಿಮ್ಮದಾನ
ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ
ನಿಮ್ಮ ದಾನವನುಂಡು
ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ
ಹೇಳ ರಾಮನಾಥ

೨೪೯
ಎತ್ತು ಬಿತ್ತಿತ್ತು ಒಕ್ಕಲಿಗನಿಂದ ಉತ್ತಮರಿಲ್ಲೆಂದು ನುಡಿವರು.
ಹೊತ್ತಾರೆದ್ದು ಶಿವಲಿಂಗಾರ್ಚನೆಯ ಮಾಡಲರಿಯರು.
ಎತ್ತಾಗಿ ಬಿತ್ತಿದ ನಮ್ಮ ಬಸವಣ್ಣ.
ಹೊತ್ತು ಹೊರೆದನು ಜಗವನು.
ಮತ್ತೆ ಮರಳಿ ಅನ್ಯದೈವವ ನೆನೆಯಲೇಕೊ

ಎತ್ತು ಬಿತ್ತಿತ್ತು ಹಾಲುಹಯನ ಬಸವನಿಂದಾಯಿತ್ತು.
ಇಂತೀ ಬೆಳೆದ ಬಸವನ ಪ್ರಸಾದವನೊಲಿದು
ಮೃತ್ಯು ಮಾರಿಯ ಎಂಜಲ ಮಾಡಿಕೊಂಡು
ಭುಂಜಿಸುವ ತೊತ್ತುಜಾತಿಗಳ ನುಡಿಯ ಕೇಳಲಾಗದೆಂದ
ಕಲಿದೇವರದೇವ

**೨೫೦**

ಎತ್ತೆತ್ತ ನೋಡಿದಡತ್ತತ್ತ
ನೀನೇ ದೇವಾ
ಸಕಲವಿಸ್ತಾರದ ರೂಹು
ನೀನೇ ದೇವಾ
ವಿಶ್ವತಶ್ಚಕ್ಷು
ನೀನೇ ದೇವಾ
ವಿಶ್ವತೋಮುಖ
ನೀನೇ ದೇವಾ
ವಿಶ್ವತೋಬಾಹು
ನೀನೇ ದೇವಾ
ವಿಶ್ವತಃಪಾದ
ನೀನೇ ದೇವಾ
ಕೂಡಲಸಂಗಮದೇವಾ

**೨೫೧**

ಎತ್ತೆತ್ತ ನೋಡಿದಡೆ
ಅತ್ತತ್ತ ಬಸವನೆಂಬ ಬಳ್ಳಿ
ಎತ್ತಿ ನೋಡಿದಡೆ
ಲಿಂಗವೆಂಬ ಗೊಂಚಲು
ಒತ್ತಿ ಹಿಂಡಿದಡೆ
ಭಕ್ತಿಯೆಂಬ ರಸವಯ್ಯಾ
ಆಯತ ಬಸವಣ್ಣನಿಂದ
ಸ್ವಾಯತ ಬಸವಣ್ಣನಿಂದ
ಸನ್ನಿಹಿತವು ಬಸವಣ್ಣನಿಂದ

ಗುರು ಬಸವಣ್ಣನಿಂದ
ಲಿಂಗ ಬಸವಣ್ಣನಿಂದ
ಜಂಗಮ ಬಸವಣ್ಣನಿಂದ
ಪಾದೋದಕ ಬಸವಣ್ಣನಿಂದ
ಪ್ರಸಾದ ಬಸವಣ್ಣನಿಂದ
ಅತ್ತ ಬಲ್ಲಡೆ ನೀವು ಕೇಳಿರೆ
ಇತ್ತ ಬಲ್ಲಡೆ ನೀವು ಕೇಳಿರೆ
ಬಸವಾ ಬಸವಾ ಬಸವಾ
ಎಂದು ಮಜ್ಜನಕ್ಕೆರೆಯದವನ ಭಕ್ತಿ
ಶೂನ್ಯ ಕಾಣಾ
ಕಲಿದೇವರದೇವಾ

**೨೫೨**

ಎದೆಬಿರಿವನ್ನಕ್ಕರ
ಮನದಣಿವನ್ನಕ್ಕರ
ನಾಲಗೆ ನಲಿನಲಿದೋಲಾಡುವನ್ನಕ್ಕರ
ನಿಮ್ಮ ನಾಮಾಮೃತವ ತಂದೆರೆಸು ಕಂಡಯ್ಯಾ
ಶಿವನಾಮಾಮೃತವ ತಂದೆರೆಸು ಕಂಡಯ್ಯಾ
ಶಿವನಾಮಾಮೃತವ ತಂದೆರೆಸು ಕಂಡೆಲೆ ಹರನೆ
ಬಿರಿಮುಗುಳಂದದ ಶರೀರ
ನಿಮ್ಮ ಚರಣದಮೇಲೆ ಬಿದ್ದುರುಳುಗೆ
ಸಂಗಯ್ಯ

**೨೫೩**

ಎನಗೆ ನೀನು ಮಾಡಿದ ಸಂಸಾರದ ಬಳಲಿಕೆ
ನಿನಗೆನ್ನ ಕಾಡುವ ಬಳಲಿಕೆ
ಬಳಲಿಕೆಯಿಬ್ಬರಿಗೆಯೂ ಸರಿ
ನಿನ್ನ ಹೆಚ್ಚೇನು ಎನ್ನ ಕುಂದೇನು
ನೀನು ಭಕ್ತದೇಹಿಕದೇವನಾದ ಬಳಿಕ
ಸಕಳೇಶ್ವರದೇವ
ನೀನೂ ಬಲ್ಲೆ
ನಾನೂ ಬಲ್ಲೆ

೨೫೪
ಎನಗೆ ಮನೆ ಇಲ್ಲ
ಎನಗೆ ಧನವಿಲ್ಲ
ಮಾಡುವುದೇನು
ನೀಡುವುದೇನು
ಮನೆ ಧನ ಸಕಲಸಂಪದಸೌಖ್ಯವುಳ್ಳ
ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು
ಎನ್ನೊಡಲ ಹೊರೆವೆನಾಗಿ
ಅಮರೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ
[ಸಂಗನಬಸವಣ್ಣಾ]

೨೫೫
ಎನಗೆ ಸೋಂಕಿದ ಸಕಲರುಚಿಪದಾರ್ಥಂಗಳನು
ನಿನಗೆ ಕೊಡುವೆನೆಂದವಧಾನಿಸುವನ್ನಬರ
ಎನಗೂ ಇಲ್ಲದೆ ಹೋಯಿತ್ತು
ನಿನಗೂ ಇಲ್ಲದೆ ಹೋಯಿತ್ತು
ಈ ಭೇದಬುದ್ಧಿಯು ಬಿಡಿಸಿ
ಆನರಿದುದೆ ನೀನರಿದುದೆಂಬಂತೆ
ಎಂದಿಂಗೆನ್ನನಿರಿಸುವೆ ಸಕಳೇಶ್ವರಾ

೨೫೬
ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು
ನೆನೆದು ಮೃದುವಾಗಬಲ್ಲುದೆ ಅಯ್ಯಾ
ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ
ಮನದಲ್ಲಿ ದೃಢವಿಲ್ಲದನ್ನಕ್ಕ
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರ ವಿಧಿ ಎನಗಾಯಿತ್ತು ಕೂಡಲಸಂಗಮದೇವಾ

೨೫೭
ಎನ್ನ ಕಡೆಗಣ್ಣು ಕೆಂಪಾಯಿತವ್ವಾ
ಎನ್ನ ನಳಿತೋಳು ಉಡುಗಿದವವ್ವಾ

ಇಕ್ಕಿದ ಹವಳದ ಸರ ಬೆಳುಹಾದವವ್ವಾ
ಮುಕ್ತಾಫಳ ಹಾರದಿಂದ ಆನು ಬೆಂದೆನವ್ವಾ
ಇಂದೆನ್ನ ಮಹಾಲಿಂಗ ಗಜೇಶ್ವರನು
ಬಹಿರಂಗವನೊಲ್ಲದೆ ಅಂತರಂಗದಲಿ ನೆರೆದ ಕಾಣೆ ಅವ್ವಾ

೨೫೮
ಎನ್ನ ಕಣ್ಣೊಳಗಣ ಕಟ್ಟಿಗೆಯ ಮುರಿವವರನಾರನೂ ಕಾಣೆ
ಎನ್ನ ಕಾಲೊಳಗಣ ಮುಳ್ಳ ತೆಗೆವವರನಾರನೂ ಕಾಣೆ
ಎನ್ನ ಅಂಗದಲ್ಲಿದ್ದ ಅಹಂಕಾರವ ಸುಡುವವರನಾರನೂ ಕಾಣೆ
ಎನ್ನ ಮನದಲ್ಲಿಪ್ಪ ಮಾಯಾ ಪ್ರಪಂಚವ
ಕೆಡಿಸುವವರನಾರನೂ ಕಾಣೆನಯ್ಯಾ
ಆದ್ಯರ ವೇದ್ಯ ವಚನಂಗಳಿಂದ
ಅರಿದೆವೆಂಬವರು ಅರಿಯಲಾರರು
ನೋಡಾ
ಎನ್ನ ಕಣ್ಣೊಳಗಣ ಕಟ್ಟಿಗೆಯ
ನಾನೆ ಮುರಿಯಬೇಕು
ಎನ್ನ ಕಾಲೊಳಗಣ ಮುಳ್ಳ
ನಾನೆ ತೆಗೆಯಬೇಕು
ಎನ್ನ ಅಂಗದಲ್ಲಿಪ್ಪ ಅಹಂಕಾರವ
ನಾನೆ ಸುಡಬೇಕು
ಎನ್ನ ಮನದಲ್ಲಿಪ್ಪ ಮಾಯಾಪ್ರಪಂಚವ
ನಾನೆ ಕಳೆಯಬೇಕು
ಅಮುಗೇಶ್ವರಲಿಂಗವ
ನಾನೆ ಅರಿಯಬೇಕು

೨೫೯
ಎನ್ನ ಕಷ್ಟ ಕುಲದಲ್ಲಿ ಹುಟ್ಟಿಸಿದೆಯಯ್ಯಾ
ಎಲೆ ಲಿಂಗ ತಂದೆ
ಕೆಟ್ಟೆನಯ್ಯಾ ನಿಮ್ಮ ಮುಟ್ಟಿಯೂ ಮುಟ್ಟದಿಹನೆಂದು
ಎನ್ನ ಕೈ ಮುಟ್ಟದಿರ್ದಡೆ ಮನ ಮುಟ್ಟಲಾಗದೆ
ಅಭಿನವ ಮಲ್ಲಿಕಾರ್ಜುನಾ

## ೨೬೦

ಎನ್ನ ಕಾಯ ಮಣ್ಣು
ಜೀವ ಬಯಲು
ಆವುದ ಹಿಡಿವೆನಯ್ಯಾ
ದೇವಾ
ನಿಮ್ಮನಾವ ಪರಿಯಲ್ಲಿ ನೆನೆವೆನಯ್ಯಾ
ಎನ್ನ ಮಾಯೆಯನು ಮಾಣಿಸಯ್ಯಾ
ಚೆನ್ನಮಲ್ಲಿಕಾರ್ಜುನಾ

## ೨೬೧

ಎನ್ನ ಕಾಯವ ದಂಡಿಗೆಯ ಮಾಡಯ್ಯಾ
ಎನ್ನ ಶಿರವ ಸೋರೆಯ ಮಾಡಯ್ಯಾ
ಎನ್ನ ನರವ ತಂತಿಯ ಮಾಡಯ್ಯಾ
ಎನ್ನ ಬೆರಳ ಕಡ್ಡಿಯ ಮಾಡಯ್ಯಾ
ಬತ್ತೀಸ ರಾಗವ ಪಾಡಯ್ಯಾ
ಉರದಲೊತ್ತಿ ಬಾರಿಸು ಕೂಡಲಸಂಗಮದೇವಾ

## ೨೬೨

ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ
ವಿಚಾರಿಸಿದಡೆ ಏನೂ ಹುರುಳಿಲ್ಲಯ್ಯಾ
ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಪುಮಾಡಿ
ನೀವಿರಿಸಿದಿರಿ ಕೂಡಲಸಂಗಮದೇವಾ

## ೨೬೩

ಎನ್ನ ನಡೆಯೊಂದು ಪರಿ
ಎನ್ನ ನುಡಿಯೊಂದು ಪರಿ
ಎನ್ನೊಳಗೇನೂ ಶುದ್ಧವಿಲ್ಲ
ನೋಡಯ್ಯಾ
ನುಡಿಗೆ ತಕ್ಕ ನಡೆಯ ಕಂಡಡೆ
ಕೂಡಲಸಂಗಮದೇವನೊಳಗಿಪ್ಪನಯ್ಯಾ

೨೬೪
ಎನ್ನ ನಲ್ಲನೆನ್ನನೊಲ್ಲದಿರ್ದಡೆ
ನಾ ಎಲ್ಲಿ ಅರಸುವೆನವ್ವಾ
ಗಂಗೆಯ ನೋನೆನು
ಗೌರಿಯ ನೋನೆನು
ಎಲ್ಲಿ ಅರಸುವೆನವ್ವಾ
ಎನ್ನ ಅಂತರಂಗದ ಆತ್ಮಜ್ಯೋತಿ
ಉರಿಲಿಂಗದೇವಾ
ಎಂದು ಇಲ್ಲಿಯೇ ಅರಸುವೆನವ್ವಾ

೨೬೫
ಎನ್ನ ನಾನರಿಯದಂದು ಮುನ್ನ ನೀನೇನಾಗಿದ್ದೆ
ಹೇಳಾ
ಮುನ್ನ ನೀ ಬಾಯ ಮುಚ್ಚಿಕೊಂಡಿದ್ದೆಯೆಂಬುದ
ನಾ ನಿನ್ನ ಕಣ್ಣಿಂದ ಕಂಡೆನು
ಎನ್ನ ನಾನರಿದ ಬಳಿಕ ಇನ್ನು ನೀ
ಬಾಯ್ದೆರೆದು ಮಾತನಾಡಿದರೆ
ಅದನೆನ್ನ ಕಣ್ಣಿಂದ ಕಂಡು ನಾಚಿದೆ ನೋಡಾ
ಎನ್ನ ಕಾವ ನಿನಗೆ
ನಿನ್ನ ಕಾವ ಎನಗೆ
ಸಂಚದ ನೋಟ ಒಂದೆ ನೋಡಾ
ಗುಹೇಶ್ವರ
ನಿನ್ನ ಬೆಡಗಿನ ಬಿನ್ನಾಣವನರಿದೆ ನೋಡಾ

೨೬೬
ಎನ್ನ ನಾನರಿವುದಕ್ಕೆ ಮುನ್ನ ಎಲ್ಲಿದ್ದೆಯಯ್ಯ
ಎನ್ನೊಳಗೆ ಇದ್ದೆಯಯ್ಯ
ಎನ್ನ ನಾನರಿಯಲು
ಮುಂದೆ ಗುರುರೂಪಾಗಿ
ಎನ್ನೊಳಗೆ ಅಡಗಿದ್ದೆಯಲ್ಲ ರಾಮನಾಥ

೨೬೭

ಎನ್ನ ಭವಭಾರ ನಿಮ್ಮದಯ್ಯಾ
ಎನ್ನ ಹಾನಿವೃದ್ಧಿ ನಿಮ್ಮದಯ್ಯಾ
ಎನ್ನ ಕರಕರ ಕಾಡದಿರು ತಂದೆ
ನಿನ್ನ ಕಾಟ ಎನ್ನ ಪ್ರಾಣದೋಟ
ಕಪಿಲಸಿದ್ಧಮಲ್ಲಿನಾಥಾ
ಕೊಲ್ಲು ಕಾಯಿ
ನಿಮ್ಮ ಧರ್ಮದವ ನಾನು

೨೬೮

ಎನ್ನ ಮನದ ಮರವೆ ಭಿನ್ನವಾಗದು
ಮರೆದು ಅರಿದೆಹೆನೆಂದಡೆ
ಅರಿವಿನ ಮರವೆಯ ಮಧ್ಯದಲ್ಲಿ ಎಡೆದೆರಪಿಲ್ಲ
ಕೋಲಿನಲ್ಲಿ ನೀರ ಹೊಯ್ದಡೆ ಸೀಳಿ ಹೋಳಾದುದುಂಟೆ
ಅರಿವುದೊಂದು ಘಟ
ಮರೆವುದೊಂದು ಘಟ
ಒಡಗೂಡುವ ಠಾವಿನ್ನೆಂತೊ
ಹುತ್ತದ ಬಾಯಿ ಹಲವಾದಡೆ
ಸರ್ಪನೆಯಿದುವಲ್ಲಿ ಒಡಲೊಂದೆ ತಪ್ಪದು
ತನ್ನ ಚಿತ್ತದ ಭೇದವಲ್ಲದೆ ವಸ್ತುವಿಗೆ ಭೇದವುಂಟೆ
ವಿಷ ವಿಷವ ವೇಧಿಸುವಲ್ಲಿ ಬೇರೊಂದು ಅಸುವಿನ ಕಲೆವುಂಟೆ
ಅಸಿಯ ಮಡುವಿನಲ್ಲಿ ಲತೆಯ ಹಾಸಿಕೆಯುಂಟೆ
ಇಂತೀ ಹುಸಿಗಂಜಿ ಗೂಡಿನಲ್ಲಿ ಅಡಗಿದೆ
ಗುಮ್ಮಟನಾಥನ ಒಡೆಯ ಅಗಮ್ಯೇಶ್ವರಲಿಂಗವೆ

೨೬೯

ಎನ್ನ ಮನದಲ್ಲಿ ದಿಟವಿಲ್ಲ
ಪೂಜಿಸಿ ಏವೆನು
ಹೃದಯದಲ್ಲೊಂದು ವಚನದಲ್ಲೊಂದು ಎನಗೆ
ನೋಡಾ

ಎನ್ನ ಕಾಯ ಭಕ್ತ
ಮನ ಭವಿ
ಸಕಳೇಶ್ವರದೇವಾ

೨೭೦
ಎನ್ನ ಮನವ ಮಾರುಗೊಂಡನವ್ವಾ
ಎನ್ನ ತನುವ ಸೂರೆಗೊಂಡನವ್ವಾ
ಎನ್ನ ಸುಖವನೊಪ್ಪುಗೊಂಡನವ್ವಾ
ಎನ್ನ ಇರವನಿಂಬುಗೊಂಡನವ್ವಾ
ಚೆನ್ನಮಲ್ಲಿಕಾರ್ಜುನನ ಒಲುಮೆಯವಳಾನು

೨೭೧
ಎನ್ನ ಮಾಯದ ಮದವ ಮುರಿಯಯ್ಯಾ
ಎನ್ನ ಕಾಯದ ಕತ್ತಲೆಯ ಕಳೆಯಯ್ಯಾ
ಎನ್ನ ಜೀವದ ಜಂಜಡವ ಮಾಣಿಸಯ್ಯಾ
ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯಾ
ಎನ್ನ ಸುತ್ತಿದ ಪ್ರಪಂಚವ ಬಿಡಿಸಾ
ನಿಮ್ಮ ಧರ್ಮ

೨೭೨
ಎನ್ನ ಲಿಂಗದ ಸೀಮೆಯಲ್ಲಿದ್ದ ಗೋವತ್ಸ ಮೊದಲಾದ ಘಟಕ್ಕೆಲ್ಲಕ್ಕೂ
ಶಿವಲಿಂಗಪೂಜೆ ಪಂಚಾಚಾರಶುದ್ಧ ನೇಮ
ಭಾವ ತಪ್ಪದೆ ಪಾದೋದಕ ಪ್ರಸಾದವಿಲ್ಲದೆ
ತೃಣ ಉದಕವ ಮುಟ್ಟಿದಡೆ
ಎನ್ನ ಸೀಮೆಗೆ ಎನ್ನ ವ್ರತಾಚಾರಕ್ಕೆ ನಾ ಕೊಂಡ ಗಮನಕ್ಕೆ
ತನುವಿಗೆ ಬಂದಲ್ಲಿ ಭೀತಿ
ಆತ್ಮಕ್ಕೆ ಬಂದಲ್ಲಿ ಸಂದೇಹವ
ಮಾಡಿದಡೆ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ ದೂರ

೨೭೩

ಎನ್ನವರೊಲಿದು ಹೊನ್ನ ಶೂಲದಲ್ಲಿಕ್ಕಿದರೆನ್ನ ಹೊಗಳಿ ಹೊಗಳಿ
ಎನ್ನ ಹೊಗಳತೆ ಎನ್ನನಿಮ್ಮೆಗೊಂಡಿತ್ತಲ್ಲಾ
ಅಯ್ಯೋ
ನೊಂದೆನು ಸೈರಿಸಲಾರೆನು
ಅಯ್ಯಾ
ನಿಮ್ಮ ಮನ್ನಣೆಯೆ ಮಸೆದಲಗಾಗಿ ತಾಗಿತ್ತಲ್ಲಾ
ಅಯ್ಯೋ
ನೊಂದೆನು ಸೈರಿಸಲಾರೆನು
ಕೂಡಲಸಂಗಮದೇವಾ
ನೀನೆನಗೆ ಒಳ್ಳಿದನಾದಡೆ
ಎನ್ನ ಹೊಗಳತೆಗಡ್ಡ ಬಾರಾ ಧರ್ಮಿ

೨೭೪

ಎನ್ನೊಡಲಾದಡೆ ಎನ್ನಿಚ್ಛೆಯಲ್ಲಿರದೆ
ನಿನ್ನೊಡಲಾದಡೆ ನಿನ್ನಿಚ್ಛೆಯಲ್ಲಿರದೆ
ಅದು ಎನ್ನೊಡಲೂ ಅಲ್ಲ
ನಿನ್ನೊಡಲೂ ಅಲ್ಲ
ಅದು ನೀ ಮಾಡಿದ ಜಗದ ಬಿನ್ನಾಣದೊಡಲು ಕಾಣಾ
ರಾಮನಾಥ

೨೭೫

ಎನ್ನೊಳಗೆ ನೀನು ಪ್ರವೇಶ
ನಿನ್ನೊಳಗೆ ನಾನು ಪ್ರವೇಶ
ದೇವ ನೀನಿಲ್ಲದಿಲ್ಲ
ಭಕ್ತ ನಾನಲ್ಲದಿಲ್ಲ
ಈ ಪರಿಯ ಮಾಡುವರಿನ್ನಾರು ಹೇಳಾ
ಎನಗೆ ನೀನೇ ಗತಿ
ನಿನಗೆ ನಾನೇ ಗತಿ
ಇನ್ನೇಕೆ ಜವನಿಕೆ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ

೨೭೬
ಎಮ್ಮ ನಲ್ಲನ ಕೂಡಿದ ಕೂಟ
ಇದಿರಿಗೆ ಹೇಳಬಾರದವ್ವಾ
ನೀವೆಲ್ಲಾ ನಿಮ್ಮ ನಲ್ಲನ ಕೂಡಿದ ಸುಖವ
ಬಲ್ಲಂತೆ ಹೇಳಿ
ಉರಿಲಿಂಗದೇವ ಬಂದು
ನಿರಿಗೆಯ ಸೆರಗ ಸಡಿಲಿಸಲೊಡನೆ
ನಾನೊ ತಾನೊ ಏನೆಂದರಿಯನು

೨೭೭
ಎಮ್ಮ ನಲ್ಲನವ್ವಾ
ನಲ್ಲರಿಗೆ ನಲ್ಲನು
ವಂಚನೆಗೆ ನೆರೆಯನು
ನಿರ್ವಂಚನೆಗೆ ನೆರೆವನು
ಉರಿಲಿಂಗದೇವನು

೨೭೮
ಎಮ್ಮವರು ಬೆಸಗೊಂಡಡೆ
ಶುಭಲಗ್ನವೆನ್ನಿರಯ್ಯಾ
ರಾಶಿಕೂಟ ಗಣಸಂಬಂಧವುಂಟೆಂದು
ಹೇಳಿರಯ್ಯಾ
ಚಂದ್ರಬಲ ತಾರಾಬಲವುಂಟೆಂದು
ಹೇಳಿರಯ್ಯಾ
ನಾಳಿನ ದಿನಕಿಂದನ ದಿನ ಲೇಸೆಂದು
ಹೇಳಿರಯ್ಯಾ
ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ

೨೭೯
ಎರದ ಮುಳ್ಳಿನಂತೆ ಪರಗಂಡರೆನಗವ್ವಾ
ಸೋಂಕಲಮ್ಮೆ
ಸುಳಿಯಲಮ್ಮೆ

ನಂಬಿ ನಚ್ಚಿ ಮಾತನಾಡಲಮ್ಮೆನವ್ವಾ
ಚನ್ನಮಲ್ಲಿಕಾರ್ಜುನನಲ್ಲದ ಗಂಡರಿಗೆ
ಉರದಲ್ಲಿ ಮುಳ್ಳುಂಟೆಂದು
ನಾನಪ್ಪಲಮ್ಮೆನವ್ವಾ

೨೮೦
ಎರೆದಡೆ ನನೆಯದು
ಮರೆದಡೆ ಬಾಡದು
ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ
ಕೂಡಲಸಂಗಮದೇವಾ
ಜಂಗಮಕ್ಕೆರೆದಡೆ ಸ್ಥಾವರ ನನೆಯಿತ್ತು

೨೮೧
ಎರೆಯಂತೆ ಕರಕರಗಿ
ಮಳಲಂತೆ ಜರಿಜರಿದು
ಕನಸಿನಲ್ಲಿ ಕಳವಳಿಸಿ ಆನು ಬೆರಗಾದೆ
ಆವಿಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ
ಆಪತ್ತಿಗೆ ಸಖಿಯರನಾರನೂ ಕಾಣೆ
ಅರಸಿ ಕಾಣದ ತನುವ
ಬೆರಸಿ ಕೂಡದ ಸುಖವ
ಎನಗೆ ನೀ ಕರುಣಿಸಾ
ಚನ್ನಮಲ್ಲಿಕಾರ್ಜುನಾ

೨೮೨
ಎಲುವೆಂಬ ಹಂಜರ ಥಟ್ಟಾಗಿ
ಉಭಯವ ಘಟಿಸಿದ ತೊಗಲಬ್ರಹ್ಮನೆಂಬ ಅಳಿಲೆಯ ಕಾಯಲ್ಲಿ
ವಿಷ್ಣುವೆಂಬ ನೀರ ಹೊಯಿದು
ರುದ್ರನೆಂಬ ಚೂರ್ಣದಲ್ಲಿ ಖಾರಕ್ಕೆ ಮೆಟ್ಟಲಾಗಿ
ತೊಗಲ ಹೊಲಸು ಕೆಟ್ಟಿತ್ತು
ಹರಗುಲ ಹುದಿಯಿತ್ತು
ವರ್ತನವೆಂಬ ಹುಟ್ಟ ಹಿಡಿದು

ಮಾಟಕೂಟವೆಂಬ ಹೊಳೆಯಲ್ಲಿ ಕೂಟದವರು ದಾಟುತ್ತಿದ್ದಾರೆ
ಎಂದನಂಬಿಗ ಚೌಡಯ್ಯ

೨೮೩
ಎಲೆ ಅಯ್ಯಗಳಿರಾ
ಎಲೆಗಳೆದ ವೃಕ್ಷವ ಕಂಡಿರೆ ಬಸವನ
ಎಲೆ ಅಯ್ಯಗಳಿರಾ
ರೂಹಿಲ್ಲದ ಚೋಹವ ಕಂಡಿರೆ ಬಸವನ
ಎಲೆ ಸ್ವಾಮಿಗಳಿರಾ
ನಿಮ್ಮ ನಿಲವಿನ ದರ್ಪಣವ ಕಂಡಿರೆ ಬಸವನ
ಸಂಗಯ್ಯನಲ್ಲಿ ಸ್ವಯವಳಿದ ಬಸವನ ಕುರುಹ ಕಂಡಿರೆ

೨೮೪
ಎಲೆ ಇಲ್ಲದ ವೃಕ್ಷದಲ್ಲಿ ಹೂವಿಲ್ಲದ ಕಾಯಾಗಿತ್ತು
ಕಾಯಿ ಉದುರಿ ಹಣ್ಣು ಬಲಿಯಿತ್ತು
ಕಣ್ಣಿಗೆ ಹಣ್ಣಲ್ಲದೆ ಮೆಲುವುದಕ್ಕಲ್ಲ
ಏಣಾಂಕಧರ ಸೋಮೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು

೨೮೫
ಎಲೆ ಎಲೆ ತಾಯೆ
ನೋಡವ್ವಾ
ಇರುಳು ತೊಳಲುವ ಜಕ್ಕವಕ್ಕಿಯಂತೆ ಹಲಬುತ್ತಿದ್ದೆ ನೋಡವ್ವಾ
ಮಾಗಿಯ ಕೋಗಿಲೆಯಂತೆ ಮೂಗಿಯಾಗಿದ್ದೆ ನೋಡವ್ವಾ
ಮಹಾಲಿಂಗ ಗಜೇಶ್ವರನ
ಅನುಭಾವಸಂಬಂಧಿಗಳ ಬರವೆನ್ನ
ಪ್ರಾಣದ ಬರವು ನೋಡವ್ವಾ

೨೮೬
ಎಲೆ ಗಂಡುಗೂಸೆ ನೀ ಕೇಳಾ
ನಿನಗೊಬ್ಬಗೆಂದುಟ್ಟೆ ಗಂಡುಡಿಗೆಯನು
ಮತ್ತೊಮ್ಮೆ ಆನು ಗಂಡಪ್ಪೆನಯ್ಯಾ

ಮತ್ತೊಮ್ಮೆ ಆನು ಹೆಣ್ಣಪ್ಪೆನಯ್ಯಾ
ಕೂಡಲಸಂಗಮದೇವಾ
ನಿಮ್ಮಡಿಗೆ ವೀರನಪ್ಪೆ
ನಿಮ್ಮ ಶರಣರಿಗೆ ವಧುವಪ್ಪೆ

೨೮೭
ಎಲೆಗಳೆದ ಮರದಲ್ಲಿ ನೆಳಲನರಸಲಿಲ್ಲ
ಕಳೆಯರತ ದೀಪದಲ್ಲಿ ಬೆಳಗನರಸಲಿಲ್ಲ
ಕುರುಹಳಿದ ಮೂರ್ತಿಯಲ್ಲಿ ರೂಪನರಸಲಿಲ್ಲ
ಶಬ್ದವಡಗಿ ನಿಶ್ಶಬ್ದನಾದ ಬಸವನಲ್ಲಿ ಶಬ್ದವನರಸಲಿಲ್ಲ
ಸಂಗಯ್ಯನಲ್ಲಿ ಕಾಯವಿಲ್ಲದ ಕರುಣಿಯಾದೆ ನಾನು

೨೮೮
ಎಲೆಗಳೆದ ವೃಕ್ಷಕ್ಕೆ ತಳಿರ ಕೊನರಲ್ಲದೆ
ಬೇರು ಸಾರಗೆಟ್ಟು ನಷ್ಟವಾದ ತರುವಿಂಗೆ ಮತ್ತೆ ಅಂಕುರವುಂಟೆ
ತ್ರಿವಿಧಮಲಕ್ಕೆ ದೂರಸ್ಥನಾಗಿ ಅಪೇಯವೆಂದು ಬಿಟ್ಟಲ್ಲಿ
ಮತ್ತರಿದು ಹಿಡಿದೆಹೆನೆಂದಡೆ ಪೇಯವಪ್ಪುದೆ
ತಳನನಗೆದು ಮೇಲನರಿಯದೆ ಬೀಳಿಸಿಕೊಂಬವನಂತೆ
ತನ್ನ ಊಣೆಯವ ತಾನರಿಯದೆ
ಮೂಕೊರತಿ ಮೂಕುತಿಯ ಮಣಿಯ
ತನಗೆಂದು ವಿಚಾರಿಸುವಂತೆ
ಇಂತೀ ನಿರ್ವಾಣ ಬರುದೊರೆವೋಯಿತ್ತಲ್ಲಾ ಸಂಗನಬಸವಣ್ಣಾ
ಇವರುವನರಿಯದಂತೆ
ಬ್ರಹ್ಮೇಶ್ವರಲಿಂಗಕ್ಕೆ ಉರಿಯದೆ ಹೋದರಲ್ಲಾ

೨೮೯
ಎಲ್ಲರ ಗಂಡಂದಿರು ಪರದಳವಿಭಾಡರು
ಎನ್ನ ಗಂಡ ಮನದಳವಿಭಾಡ
ಎಲ್ಲರ ಗಂಡಂದಿರು ಗಜವೇಂಟೆಕಾರರು
ಎನ್ನ ಗಂಡ ಮನವೇಂಟೆಕಾರ
ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು

ಎನ್ನ ಗಂಡ ತಾರದೆ ಇಕ್ಕಿಸಿಕೊಂಬ
ಎಲ್ಲರ ಗಂಡಂದಿರಿಗೆ ಮೂರು
ಎನ್ನ ಗಂಡಂಗೆ ಅದೊಂದೆ
ಅದೊಂದೂ ಸಂದೇಹ
ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ

೨೯೦
ಎಲ್ಲರ ಸುಂಕ
ಎತ್ತು ತೊತ್ತು ಬಂಡಿ ಬಲ್ಲೆತ್ತು
ಎನ್ನ ಸುಂಕ ಎಲ್ಲರ ಪರಿಯಲ್ಲ
ಕಟ್ಟಿದ ಕುರುಹಿಂಗೆ ಹಿಡಿದ ವ್ರತನೇಮನಿತ್ಯಕ್ಕೆ
ತಪ್ಪಲಿಲ್ಲಾಯೆಂದು ಕೊಟ್ಟ ಚೀಟ ಸಿಕ್ಕಿಸಿದೆ ನಿಮ್ಮಂಗದಲ್ಲಿ
ಭಕ್ತರಾಗಿ ಕಳವು ಹಾದರ ಮಿಕ್ಕಾದೊಂದೂ ಬೇಡ
ಎಂದು ಕೊಟ್ಟ ಚೀಟು ವಿಶುದ್ಧಿ
ಜಗದ ಸುಂಕದೊಡೆಯ ಬಂಕೇಶ್ವರಲಿಂಗನು

೨೯೧
ಎಲ್ಲರ ಹೆಂಡಿರು ತೊಳಸಿಕ್ಕುವರು
ಎನ್ನ ಗಂಡಂಗೆ ತೊಳಸುವುದಿಲ್ಲ
ಎಲ್ಲರ ಗಂಡಂದಿರಿಗೆ ಬಸಿವರು
ಎನ್ನ ಗಂಡಂಗೆ ಬಸಿವುದಿಲ್ಲ
ಎಲ್ಲರ ಗಂಡಂದಿರಿಗೆ ಬೀಜವುಂಟು
ಎನ್ನ ಗಂಡಂಗೆ ಅಂಡದ ಬೀಜವಿಲ್ಲ
ಎಲ್ಲರ ಗಂಡಂದಿರು ಮೇಲೆ
ಎನ್ನ ಗಂಡ ಕೆಳಗೆ ನಾ ಮೇಲೆ
ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ

೨೯೨
ಎಲ್ಲವ ಬಿಟ್ಟು ಹಲ್ಲ ಸುಲಿಯ ಬಂದೆ
ಮುನ್ನಿನಲ್ಲಿಯ ಹಾವಚೆ ಹಲ್ಲ ಬಿಡದು ನೋಡಾ
ಮೆಲ್ಲನೆ ಥಾಳಿಸಿದಡೆ ಹಾವಚೆ ಒಲ್ಲಗಾಗದು

ಬಲ್ಲಿತ್ತಾಗಿ ಥಾಳಿಸಿದಡೆ ಒಸಡಿನಲ್ಲಿ ಜಾರಿತ್ತು
ಇಂತೀ ಬಲ್ಲತನದಲ್ಲಿ ಸಂಸಾರದ ಬಾಯ ಹಲ್ಲ ಸುಲಿಯಬೇಕು
ಇದ ಬಲ್ಲವರ ಬಲ್ಲ ತಾನರಿಯ
ಚೆನ್ನಬಸವಣ್ಣಪ್ರಿಯ ಕಮಳೇಶ್ವರಲಿಂಗ ಸಾಕ್ಷಿಯಾಗಿ

೨೯೩

ಎಸುವರ ಬಲ್ಲೆ
ಎಚ್ಚ ಬಾಣ ತಿರುಗಿ ಬಪ್ಪಂತೆ ಎಸುವರ ಕಾಣೆ
ಪೂಜಿಸುವವರ ಬಲ್ಲೆ
ಪೂಜಿಸಿದ ಲಿಂಗ ಅಭಿಮುಖವಾಗಿ
ಸರ್ವಾಂಗದಲ್ಲಿ ವೇಧಿಸುವರ ಕಾಣೆ
ನುಡಿಗೆ ನಡೆ ಆ ನಡೆಗೆ ನುಡಿ
ಉಭಯವ ಬೇಧಿಸುವರ ಕಾಣೆ
ಈ ಉಭಯವು ಸಿದ್ಧಿಯಾಗಿ ಸಿದ್ಧಾಂತವಾದಲ್ಲಿ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನು
ಕ್ರೀಜ್ಞಾನ ನಿರುತವಾದವಂಗಲ್ಲದೆ ಸಾಧ್ಯವಿಲ್ಲ

೨೯೪

ಎಸೆಯದಿರು ಎಸೆಯದಿರು ಕಾಮ
ನಿನ್ನ ಬಾಣ ಹುಸಿಯಲೇಕೋ
ಕಾಮ ಕ್ರೋಧ ಲೋಭ ಮೋಹ
ಮದ ಮತ್ಸರ ಇದು ಸಾಲದೆ ನಿನಗೆ
ಗುಹೇಶ್ವರಲಿಂಗದ ವಿರಹದಲ್ಲಿ ಬೆಂದವರ
ಮರಳಿ ಸುಡಲುಂಟೆ ಮರುಳು ಕಾಮಾ

೨೯೫

ಏಕೆನ್ನ ಪುಟ್ಟಿಸಿದೆಯಯ್ಯಾ ಹೆಣ್ಣು ಜನ್ಮದಲ್ಲಿ
ಪುಣ್ಯವಿಲ್ಲದ ಪಾಪಿಯ
ನಾನು ಇರಪರಕ್ಕೆ ದೂರಳಯ್ಯಾ
ಎನ್ನ ನಾಮ ಹೆಣ್ಣು ನಾಮವಲ್ಲಯ್ಯಾ

ನಾನು ಸಿರಿಯಿದ್ದ ವಸ್ತುವಿನ ವಧುವಾದ ಕಾರಣ
ಸಂಗಯ್ಯನಲ್ಲಿ ಬಸವನ ವಧುವಾದ ಕಾರಣ
ಎನಗೆ ಹೆಣ್ಣುನಾಮವಿಲ್ಲವಯ್ಯಾ

೨೯೬
ಏತ ತಲೆವಾಗಿದಡೇನು
ಗುರುಭಕ್ತನಾಗಬಲ್ಲುದೆ
ಇಕ್ಕುಳ ಕೈಮುಗಿದಡೇನು
ಭೃತ್ಯಾಚಾರಿಯಾಗಬಲ್ಲುದೆ
ಗಿಳಿಯೋದಿದಡೇನು
ಲಿಂಗವೇದಿಯಾಗಬಲ್ಲುದೆ
ಕೂಡಲಸಂಗನ ಶರಣರ ಬಂದ ಬರವ ನಿಂದ ನಿಲವ
ಅನಂಗಸಂಗಿಗಳೆತ್ತಬಲ್ಲರು

೨೯೭
ಏನಿ ಬಂದಿರಿ ಹದುಳವಿದ್ದಿರೆ
ಎಂದಡೆ ನಿಮ್ಮೈಸಿರಿ ಹಾರಿ ಹೋಹುದೆ
ಕುಳ್ಳಿರೆಂದಡೆ ನೆಲ ಕುಳಿಹೋಹುದೆ
ಒಡನೆ ನುಡಿದಡೆ ಸಿರ ಹೊಟ್ಟೆಯೊಡೆವುದೆ
ಕೊಡಲಿಲ್ಲದಿದ್ದಡೊಂದು ಗುಣವಿಲ್ಲದಿದ್ದಡೆ
ಮೂಗ ಕೊಯ್ವುದ ಮಾಬನೆ ಕೂಡಲಸಂಗಮದೇವರು

೨೯೮
ಏನೆಂದೂ ಎನಲಿಲ್ಲ
ನುಡಿದು ಹೇಳಲಿಕ್ಕಿಲ್ಲ
ನಿಜದಲ್ಲಿ ನಿಂದ ಬೆರಗ ಕುರುಹ ಹರಿವುದೆ ಮರುಳೆ
ಹರಿದು ಹತ್ತುವುದೆ ಮರುಳೆ ಬಯಲು
ಅದು ತನ್ನಲ್ಲಿ ತಾನಾದ ಬಯಲು ತಾನಾದ ಘನವು
ಇನ್ನೇನನರಸಲಿಲ್ಲ
ಆದು ಮುನ್ನವೆ ತಾನಿಲ್ಲ
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ

೨೯೯

ಏರಿದ ವಾಜಿ ಓಹೋ ಎಂದು ಕರೆದೋರಿದಲ್ಲಿ
ನಿಂದಿತ್ತು ವಾಹನ ವಾಹಕನ ಹೃದಯವನರಿತು
ವಸ್ತುವ ಮುಟ್ಟಿ ಆಡುವ ಚಿತ್ತ ನಿಜವಸ್ತುವಿನ ಗೊತ್ತನರಿಯದೆ
ತನ್ನ ಇಚ್ಛೆಯಲ್ಲಿ ಹರಿದಾಡುತ್ತಿದೆ ನೋಡಾ
ಇದಕ್ಕೆ ಒಂದು ಕಟ್ಟಣೆಯ ಗೊತ್ತ ಲಕ್ಷಿಸಿ
ಕಟ್ಟುವಡೆವಂತೆ ಮಾಡು
ಗೋಪತಿನಾಥ ವಿಶ್ವೇಶ್ವರಲಿಂಗ

೩೦೦

ಏರಿಯ ಕಟ್ಟಬಹುದಲ್ಲದೆ
ನೀರ ತುಂಬಬಹುದೆ
ಕೈದುವ ಕೊಡಬಹುದಲ್ಲದೆ
ಕಲಿತನವ ಕೊಡಬಹುದೆ
ವಿವಾಹವ ಮಾಡಬಹುದಲ್ಲದೆ
ಪುರುಷತನವ ಹರಸಬಹುದೆ
ಘನವ ತೋರಬಹುದಲ್ಲದೆ
ನೆನಹ ನಿಲಿಸಬಹುದೆ
ಓದು ಒಕ್ಕಾಲು ಬುದ್ಧಿ ಮುಕ್ಕಾಲು ಎಂಬ
ಲೋಕದ ಗಾದೆಮಾತಿನಂತೆ
ಸದ್ಗುರುಕಾರುಣ್ಯವಾದಡೂ ಸಾಧಿಸಿದವನಿಲ್ಲ
ಸಕಳೇಶ್ವರಾ

೩೦೧

ಐಗೈಮನೆ ನಾಗೈಕಂಬ ಮೂಗೈತೊಲೆ
ಭೇದ ಕರವಳವ ಹಾಕಿ
ನೋಡಿ ಅರಿದಡೆ ಆಯ ಬಂದಿತ್ತು
ಮಸದಡೆ ಆಯ ಹೋಯಿತ್ತು
ಮೂಗೆಯ್ಯ ಕರದಲ್ಲಿ ಇದರರಿಕೆಯಾಗಿ
ಹೇಳಾ ಧಾರೇಶ್ವರ ನಿನ್ನಾಲಯಕ್ಕೆ

೩೦೨
ಒಂದ ಬಿಟ್ಟು ಒಂದನರಿದೆಹೆನೆಂಬನ್ನಕ್ಕ
ಮರದ ಸಂದಿನ ಬೊಂಬೆಯೆ
ಅರಿವುದು ಕುರುಹೊ ಅರಿವೊ
ಸುಡುವುದು ಮರನೊ ಬೆಂಕಿಯೊ
ಎರಡರ ಹೆಚ್ಚು ಕುಂದ ತಿಳಿದು ಹೇಳೆಂದನಂಬಿಗ ಚವುಡಯ್ಯ

೩೦೩
ಒಂದು ಕೋಳಿ ಕೂಗುತ್ತದೆ ಇರುಳು ಹಗಲೆನ್ನದೆ
ಅದನರಿಯರಲ್ಲಾ ಮರ್ತ್ಯದ ಗಣಂಗಳು
ಅರಿದಡೆ ಭವಬಂಧವಿಲ್ಲ ಮರೆದಡೆ ಜನನ ಮರಣಕ್ಕಳವಿಲ್ಲ
ಕಪಿಲಸಿದ್ಧಮಲ್ಲಿಕಾರ್ಜುನ

೩೦೪
ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ
ಎನ್ನ ಬಿಡು ತನ್ನ ಬಿಡು
ಎಂಬುದು ಕಾಯವಿಕಾರ
ಎನ್ನ ಬಿಡು ತನ್ನ ಬಿಡು
ಎಂಬುದು ಮನೋವಿಕಾರ
ಕರಣೇಂದ್ರಿಯಂಗಳೆಂಬ ಸೊಣಗ ಮುಟ್ಟದ ಮುನ್ನ
ಮನ ನಿಮ್ಮನೈದುವುದೆ
ಕೂಡಲಸಂಗಮದೇವಾ

೩೦೫
ಒಂದು ಶರೀರ ನಾನಾ ಲಾಗ ಕಲಿತು ಆಡುವ ಭೇದ ಬೇರಾದಂತೆ
ಆಡುವವ ತಾನೊಬ್ಬನೆಯಾಗಿ ಆದುದ ಕಂಡು
ಅನ್ಯರ ಕೇಳಲೇಕೆ
ಇದಿರಿಗೆ ಹೇಳಲೇಕೆ
ವಸ್ತುವಾಟ ಒಂದು ವರ್ತನ ಬೇರೆ
ಉಭಯವೂ ತಾನೆ ಸದಾಶಿವಮೂರ್ತಿಲಿಂಗದ ಅಂಗ

೩೦೬

ಒಡಲ ಹೊರೆವ ಇಚ್ಛೆಯಿಂದ
ಹಗಲೆನ್ನದೆ ಇರುಳೆನ್ನದೆ
ಬೆಂದ ಬಸುರಿಂಗೆ ಕುದಿವುತ್ತಿದ್ದೇನೆ
ನಿಮ್ಮ ನೆನೆಯಲೂ ವೇಳೆಯಿಲ್ಲ
ಪೂಜಿಸಲೂ ವೇಳೆಯಿಲ್ಲ
ಒಂದುವೇಳೆಯಾದರೂ
ಶಿವಮಂತ್ರವ ಸ್ಮರಿಸ ತೆರಹಿಲ್ಲ
ಈ ಪ್ರಯಾಸವ ಬಿಡಿಸಿ
ನಿಮ್ಮ ನೆನೆವಂತೆ ಮಾಡಯ್ಯಾ
ಕಲಿದೇವರದೇವಾ
ನಿಮ್ಮ ಧರ್ಮ ನಿಮ್ಮ ಧರ್ಮ

೩೦೭

ಒಡಲುಗೊಂಡವ ನಾನು
ಪ್ರಾಣವಿಡಿದವ ನೀನು
ಎನ್ನೊಡಲು ಸಂಚುವ ನೀ ಬಲ್ಲೆ
ನಿನ್ನ ಪ್ರಾಣದ ಸಂಚುವ ನಾ ಬಲ್ಲೆ
ಇದು ಕಾರಣ
ಇದು ಎನ್ನೊಡಲಲ್ಲ ನಿನ್ನೊಡಲು
ನಿನ್ನ ಪ್ರಾಣವೆನ್ನಲ್ಲಿ ಅಡಗಿದ ಭೇದವ
ನೀ ಬಲ್ಲೆ ನಾ ಬಲ್ಲೆನೈ
ರಾಮನಾಥ

೩೦೮

ಒಡಲುಗೊಂಡವ ಹಸಿವ
ಒಡಲುಗೊಂಡವ ಹುಸಿವ
ಒಡಲುಗೊಂಡವನೆಂದು
ನೀನೆನ್ನ ಜರಿದೊಮ್ಮೆ ನುಡಿಯದಿರ
ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡ
ರಾಮನಾಥ

೩೦೯
ಒಡಲುಗೊಂಡೆನಾಗಿ ಮೃಡ
ನಿಮಗೆ ಹಗೆಯಾದೆನಯ್ಯ
ಆನು ಒಡಲುಗೊಂಡಡೇನು
ಕಡಲೊಳಗಣ ಬೊಬ್ಬುಳಿಕೆ ಕಡಲೊಳಗೆ ಆಳಿವಂತೆ
ಎನ್ನ ಒಡಲಳಿದು ಹೋದಡೇನು
ಪ್ರಾಣ ನಿಮ್ಮ ಎಡೆಯಲಡಗುವದಯ್ಯಾ
ರಾಮನಾಥ

೩೧೦
ಒಡೆದ ಮಡಕೆಗೆ ಸರಿಯಿಂದ ಸಂದು ಕೂಡುವುದೆ
ದಗ್ಧವಾದ ಪಟ ಅಗಸರ ಕಲ್ಲಿಗೆ ಹೊದ್ದುವುದೆ
ಬದ್ಧ ಭವಿಗಳೆಂದು ಬಿಟ್ಟ ಮತ್ತೆ ಸಮಯದ ಹೊದ್ದಿಗೆ ಏಕೆ
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ

೩೧೧
ಒಡೆದೋಡು ಎನ್ನ ಮನೆಯಲಿಲ್ಲದಂತೆ ಮಾಡಯ್ಯಾ
ಕೊಡು ದೇವ ಎನ್ನ ಕೈಯಲೊಂದು ಕರಿಕೆಯನು
ಮೃಡದೇವಾ ಶರಣೆಂದು ಭಿಕ್ಷಕ್ಕೆ ಹೋದಡೆ ಅಲ್ಲಿ
ನಡೆ ದೇವಾ ಎಂದೆನಿಸು
ಕೂಡಲಸಂಗಮದೇವಾ

೩೧೨
ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದಡೆ
ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನನರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ
ನಿಮ್ಮಾಣೆ
ನಿರ್ಲಜ್ಜೇಶ್ವರಾ

೩೧೩
ಒಬ್ಬಂಗೆ ಇಹವುಂಟು
ಒಬ್ಬಂಗೆ ಪರವುಂಟು
ಒಬ್ಬಂಗೆ ಇಹವಿಲ್ಲ ಒಬ್ಬಂಗೆ ಪರವಿಲ್ಲ
ಒಬ್ಬಂಗೆ ಇಹಪರವೆರಡೂ ಇಲ್ಲ
ಚೆನ್ನಮಲ್ಲಿಕಾರ್ಜುನದೇವರ ಶರಣರಿಗೆ
ಇಹಪರವೆರಡೂ ಉಂಟು

೩೧೪
ಒಬ್ಬನೆ ಗರುವನಿವ
ಒಬ್ಬನೆ ಚೆಲುವನಿವ
ಒಬ್ಬನೆ ಧನಪತಿ
ಕೇಳಾ ಕೆಳದಿ
ಇವಗೆ ಹಿರಿಯರಿಲ್ಲ
ಇವಗೆ ಒಡೆಯರಿಲ್ಲ
ಇಂತಪ್ಪ ನಲ್ಲನು ಲೇಸು ಕಾಣೆಲಗೆ
ನಾವೆಲ್ಲಾ ಒಂದಾಗಿ ಹಿಡಿದು ಬಿಡದಿರೆ
ಬಿಡಿಸುವರಿನ್ನಿಲ್ಲ ಉರಿಲಿಂಗದೇವನ

೩೧೫
ಒಮ್ಮೆ ಕಾಮನ ಕಾಲ ಹಿಡಿವೆ
ಮತ್ತೊಮ್ಮೆ ಚಂದ್ರಮಂಗೆ ಸೆರಗೊಡ್ಡಿ ಬೇಡುವೆ
ಸುಡಲೀ ವಿರಹವ
ನಾನಾರಿಗೆ ಧೃತಿಗೆಡುವೆ
ಚೆನ್ನಮಲ್ಲಿಕಾರ್ಜುನ ಕಾರಣ
ಎಲ್ಲರಿಗೆ ಹಂಗುಗಿತ್ತಿಯಾದೆನವ್ವಾ

೩೧೬
ಒರತೆಗಳ ಕಂಡಿಂತು ಕೆಲರೀ ಬಾವಿಯ ತೋಡೆಂಬರು
ಅರವಟಿಗೆ ಛತ್ರವು ತಮ್ಮದೆಂಬರು
ಎಲೆ ಪಯಿರೈದದಿರೆ

ಸುರಿವ ಮಳೆ ಸುರಿಸದಿದ್ದಡೆ
ಅವರೇತರಲ್ಲಿ ನೀಡುವರಯ್ಯ
ರಾಮನಾಥ

೩೧೭
ಒಲವಿಲ್ಲದ ಪೂಜೆ
ನೇಹವಿಲ್ಲದ ಮಾಟ
ಆ ಪೂಜೆಯು ಆ ಮಾಟವು
ಚಿತ್ರದ ರೂಹು ಕಾಣಿರಣ್ಣಾ
ಚಿತ್ರದ ಕಬ್ಬು ಕಾಣಿರಣ್ಣಾ
ಅಪ್ಪಿದಡೆ ಸುಖವಿಲ್ಲ
ಮೆಲಿದಡೆ ರುಚಿಯಿಲ್ಲ
ಕೂಡಲಸಂಗಮದೇವಾ
ನಿಜವಿಲ್ಲದವನ ಭಕ್ತಿ

೩೧೮
ಒಲಿದವರ ಕೊಲುವಡೆ ಮಸೆದ ಕೂರಲಗೇಕೆ
ಅವರನೊಲ್ಲೆನೆಂದಡೆ ಸಾಲದೆ
ಮಹಾಲಿಂಗ ಗಜೇಶ್ವರನ ಶರಣರನಗಲಿದಡೆ
ತುಪ್ಪದಲ್ಲಿ ಕಿಚ್ಚ ನಂದಿಸಿದಂತಾದೆನವ್ವಾ

೩೧೯
ಒಲುಮೆ ಒಚ್ಚತವಾದವರು
ಕುಲಛಲವನರಸುವರೆ
ಮರುಳುಗೊಂಡವರು
ಲಜ್ಜೆನಾಚಿಕೆಯ ಬಲ್ಲರೆ
ಚೆನ್ನಮಲ್ಲಿಕಾರ್ಜುನದೇವಗೊಲಿದವರು
ಲೋಕಾಭಿಮಾನವ ಬಲ್ಲರೆ

೩೨೦
ಒಲುಮೆಯ ಕೂಟಕ್ಕೆ ಹಾಸಿನ ಹಂಗೇಕೆ
ಬೇಟದ ಮರುಳಿಗೆ ಲಜ್ಜೆ ಮುನ್ನುಂಟೆ

ನಿಮ್ಮನರಿದ ಶರಣಂಗೆ ಪ್ರಜೆಯ ಹಂಬಲ ದಂದುಗವೇಕೆ
ಮಿಸುನಿಯ ಚಿನ್ನಕ್ಕೆ ಒರೆಗಲ್ಲ ಹಂಗೇಕೆ
ಗುಹೇಶ್ವಲಿಂಗಕ್ಕೆ ಕುರುಹು ಮುನ್ನುಂಟೆ

೩೨೧
ಒಲೆ ಹತ್ತಿ ಉರಿದಡೆ
ನಿಲಬಹುದಲ್ಲದೆ
ಧರೆ ಹತ್ತಿ ಉರಿದಡೆ
ನಿಲಲುಬಾರದು
ಏರಿ ನೀರುಂಬಡೆ
ಬೇಲಿ ಕೆಯ್ಯ ಮೇವಡೆ
ನಾರಿ ತನ್ನ ಮನೆಯಲ್ಲಿ ಕಳುವಡೆ
ತಾಯ ಮೊಲೆವಾಲು ನಂಜಾಗಿ ಕೊಲುವಡೆ
ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ

೩೨೨
ಒಲೆಯ ಹೊಕ್ಕು ಉರಿಯ ಮರೆದವಳ
ಮಲೆಯ ಹೊಕ್ಕು ಉಲುಹ ಮರೆದವಳ ನೋಡು
ನೋಡಾ
ಸಂಸಾರ ಸಂಬಂಧವ ನೋಡಾ
ಸಂಸಾರ ಸಂಬಂಧ ಭವಭವದಲ್ಲಿ ಬೆನ್ನಿಂದ ಬಿಡದು
ಸರವು ನಿಸ್ಸರವು ಒಂದಾದವಳನು
ಎನ್ನಲೇಸ ನೋಡುವಿರಯ್ಯಾ
ಚೆನ್ನಮಲ್ಲಿಕಾರ್ಜುನಯ್ಯ

೩೨೩
ಒಲ್ಲೆನಯ್ಯಾ ಒಲ್ಲೆನಯ್ಯಾ
ನಿಮ್ಮವರಲ್ಲದವರ
ಒಲ್ಲೆನಯ್ಯಾ ಒಲ್ಲೆನಯ್ಯಾ
ಜಗವೆಲ್ಲರಿಯಲು
ಒಲ್ಲೆನಯ್ಯಾ ಒಲ್ಲೆನಯ್ಯಾ

ನೀ ಮುನಿದಡೆ ಮುನಿ
ಕೂಡಲಸಂಗಮದೇವಾ
ನಿಮ್ಮಾಣೆ ನಿಮ್ಮ ಪ್ರಮಥರಾಣೆ

೩೨೪
ಒಳಗಣ ಗಂಡನಯ್ಯಾ
ಹೊರಗಣ ಮಿಂಡನಯ್ಯಾ
ಎರಡನೂ ನಡೆಸಲು ಬಾರದಯ್ಯಾ
ಲೌಕಿಕ ಪಾರಮಾರ್ಥವೆಂಬೆರಡನೂ ನಡೆಸಲು ಬಾರದಯ್ಯಾ
ಚೆನ್ನಮಲ್ಲಿಕಾರ್ಜುನಯ್ಯಾ
ಬಿಲ್ವ ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದಯ್ಯಾ

೩೨೫
ಒಳಗೆ ನೋಡಿಹೆನೆಂದರೆ
ಒಳಗೆ ನೋಡಲಿಲ್ಲ
ಹೊರಗೆ ನೋಡಿಹೆನೆಂದರೆ
ಹೊರಗೆ ನೋಡಲಿಲ್ಲ
ಜ್ಞಾನವೆಂತುಟೋ ಅಜ್ಞಾನವೆಂತುಟೋ
ಬಲೆಯ ಬೀಸಿ ಕೊಲುವವನ ಮನೆಯಲ್ಲಿ ಸತ್ತಡೆ
ಏನು ಕಾರಣ ಅಳುವರೋ
ಗುಹೇಶ್ವರ

೩೨೬
ಓಗರ ಹಸಿಯಿತ್ತೆಂದು ಉಂಬವರಿಲ್ಲ
ನೀರು ಬಾಯಾರಿತ್ತೆಂದು ಕುಡಿವರಿಲ್ಲ
ಭೂಮಿಗೆ ಬಡತನವೆಂದು ಬಿತ್ತುವರಿಲ್ಲ
ತಮ್ಮ ಒಲವರಕ್ಕೆ ತಾವು ಮಾಡುವಲ್ಲಿ ಗನ್ನದ ಆಸೆ ಬೇಡ
ಸದಾಶಿವಮೂರ್ತಿಲಿಂಗವನರಿವುದಕ್ಕೆ

೩೨೭
ಓದುವಾತ ಲೆಂಕನಲ್ಲ
ಬೇಡುವಾತ ಭಕ್ತನಲ್ಲ

ಓಡಲಾಗದು ಲೆಂಕನು
ಬೇಡಲಾಗದು ಭಕ್ತನು
ಓಡೆನಯ್ಯಾ
ಬೇಡೆನಯ್ಯಾ
ಕೂಡಲಸಂಗಮದೇವಾ

೩೨೮
ಓಡೆತ್ತ ಬಲ್ಲುದೋ
ಅವಲಕ್ಕಿಯ ಸವಿಯ
ಕೋಡುಗ ಬಲ್ಲುದೆ
ಸೆಳೆಮಂಚದ ಸುಖವ
ಕಾಗೆ ನಂದನವನದೊಳಗಿದ್ದಡೇನು
ಕೋಗಿಲೆಯಾಗಬಲ್ಲುದೆ ಹೇಳಾ
ಕೊಳನ ತಡಿಯಲೊಂದು ಹೊರಸು ಕುಳ್ಳಿರ್ದಡೇನು
ಕಳಹಂಸಿಯಾಗಬಲ್ಲುದೆ
ಕೂಡಲಸಂಗಮದೇವಾ

೩೨೯
ಓತಿ ಬೇಲಿವರಿವಂತೆ ಎನ್ನ ಮನವಯ್ಯಾ
ಹೊತ್ತಿಗೊಂದು ಪರಿಯಪ್ಪ ಗೋಸುಂಬೆಯಂತೆನ್ನ ಮನವು
ಬಾವುಲ ಬಾಳುವೆಯಂತೆನ್ನ ಮನವು
ನಡುವಿರುಳೆದ್ದ ಕುರುಡಂಗ ಅಗುಸೆಯಲ್ಲಿ ಬೆಳಗಾದಂತೆ
ನಾನಿಲ್ಲದ ಭಕ್ತಿಯ ಬಯಸಿದಡುಂಟೆ
ಕೂಡಲಸಂಗಮದೇವಾ

೩೩೦
ಓದಿ ಬೋಧಿಸಿ ಇದಿರಿಗೆ ಹೇಳುವನ್ನಬರ ಚದುರತೆಯಲ್ಲವೆ
ತನ್ನ ತಾನರಿದಲ್ಲಿ ಆ ಅರಿಕೆ ಇದಿರಿಗೆ ತೋರದಲ್ಲಿ
ಅದೆ ದೇವತ್ವವೆಂದನಂಬಿಗ ಚವುಡಯ್ಯ

೩೩೧
ಒಲೆಯಕಾರ ಭಕ್ತನಾದಡೇನು
ಮನದ ಕ್ರೋಧ ಬಿಡದು
ಒಕ್ಕಲಿಗ ಭಕ್ತನಾದಡೇನು
ಅವನ ಪೂರ್ವಾಶ್ರಯ ಬಿಡದು
ಹಾರುವ ಭಕ್ತನಾದಡೇನು
ಅವನ ಜಾತಿ ಸೂತಕ ಬಿಡದು
ಬೆವಹಾರಿ ಭಕ್ತನಾದಡೇನು
ಅವನ ಭಕ್ತಿ ಒಂದು ಶಬ್ದದಲ್ಲಿ ಹೋಯಿತ್ತು
ಅರಸು ಭಕ್ತನಾದಡೇನು
ಅರಸಿ ನೋಡಲಿಲ್ಲ
ಸೂಳೆಯ ಭಕ್ತಿ ಹದಿನೆಂಟು ಜಾತಿಯ ಎಂಜಲ ತಿಂದಿತ್ತು
ಕೂಡಲಚೆನ್ನಸಂಗಯ್ಯ
ಮಜ್ಜನಕ್ಕೆರೆವ ಭವಿಗಳನೆಂತು ಭಕ್ತರೆಂಬೆ

೩೩೨
ಕಂಗಳ ನಾಮ ಹರುಗುಲವಾಗಿ
ನೋಡುವ ದೃಷ್ಟಿ ಅಂಬಿಗನಾಗಿ
ಕರಣೇಂದ್ರಿಯವೆಂಬ ಬಹುಜನಂಗಳು ಕೂಡಿ
ಆಸೆಯೆಂಬ ಹೊಳೆಯ ದಾಟುವುದಕ್ಕೆ ಹುಟ್ಟ ಕಾಣದೆ
ಹರುಗುಲು ಈಚೆ ಉಳಿಯಿತ್ತನೆಂದನಂಬಿಗ ಚವುಡಯ್ಯ

೩೩೩
ಕಂಗಳ ಬಲದಲ್ಲಿ ಮುನಿದೆಹೆನೆಂಬೆನೆ
ಕಂಗಳು ತನ್ನನಲ್ಲದೆ ನೋಡವು
ಮನದ ಬಲದಲ್ಲಿ ಮುನಿದೆಹೆನೆಂಬೆನೆ
ತನುಮನ ತಾಳಲಾರವವ್ವಾ
ಇಂತೀ ಮನಪ್ರೇರಕ ಮನ ಚೋರಕ
ತನ್ನಾಧೀನವಾಗಿ ಸಾಧನವಪ್ಪಡೆ
ಮನದ ಒಳ ಮೆಚ್ಚುವನವ್ವಾ
ಮನದಲ್ಲಿ ಬಯಸುವೆ

ಭಾವದಲ್ಲಿ ಬೆರಸುವೆ
ಮನಹಿಂಗೆ ಪ್ರಾಣನಾಥನಾಗಿ
ಮಹಾಲಿಂಗ ಗಜೇಶ್ವರದೇವ
ಮನಸಿಂಗೆ ಮನಸ ತರಲೀಸನವ್ವಾ

೩೩೪
ಕಂಗಳ ಮುಂದಣ ಕತ್ತಲೆಯಿದೇನೋ
ಮನದ ಮುಂದಣ ಮರಣವಿದೇನೋ
ಒಳಗಣ ರಣರಂಗ ಹೊರಗಣ ಶೃಂಗಾರ
ಬಳಕೆಗೆ ಬಂದ ಬಟ್ಟೆಯಿದೇನೋ
ಗುಹೇಶ್ವರ

೩೩೫
ಕಂಗಳ ಮುಂದೆ ತೋರಿದ ಮಿಂಚು
ಮನದ ಮೇಲೆ ತಿಳಿಯಿತ್ತಿದೇನೊ
ಕಳೆಯಬಾರದು ಕೊಳಬಾರದು
ಕಂಗಳ ಕತ್ತಲೆಯ ಮನದ ಮಿಂಚುವ
ಇದ ಬಲ್ಲವರನಲ್ಲೆನಿಸಿತ್ತು
ಸಿಮ್ಮಲಿಗೆಯ ಚೆನ್ನರಾಮನೆಂಬ ನಾಮದೊಡಕು

೩೩೬
ಕಂಗಳ ಸೂತಕದಿಂದ
ಕಾಣಿಸಿಕೊಂಬುದು
ಮನದ ಸೂತಕದಿಂದ
ನೆನೆಯಿಸಿಕೊಂಬುದು
ಕಾಯದ ಸೂತಕದಿಂದ
ಮುಟ್ಟಿಸಿಕೊಂಬುದು
ಮೂರರ ಸೂತಕದಲ್ಲಿ ಗಾರಾಗುತ್ತ
ಮೀರಿ ಕಾಬ ಅರಿವು ಸೂರೆಯೇ
ನೆನಹಿಂಗೆ ಮುನ್ನವೆ ನೆನೆಯಿಸಿಕೊಂಡು
ಅರಿವುದಕ್ಕೆ ಮುನ್ನವೆ ಅರುಹಿಸಿಕೊಂಡು

ಬಂದುದನರಿಯದೆ ಕುರುಹಿನ ಹಾವಸೆಯಲ್ಲಿ
ಮರೆದು ಒರಗುತ್ತಿಹರ ಕಂಡು
ಮರೆ ಮಾಡಿದೆಯಲ್ಲಾ
ಕಾಮಧೂಮ ಧೂಳೇಶ್ವರಾ

೩೩೭
ಕಂಗಳಲ್ಲಿ ಕಾಂಬೆನೆಂದು
ಕತ್ತಲೆಯ ಹೊಕ್ಕಡೆಂತಹುದಯ್ಯಾ
ಬೆಟ್ಟದ ತುದಿಯ ಮೆಟ್ಟಲೆಂದು
ಹಳ್ಳಕೊಳ್ಳಂಗಳಲ್ಲಿ ಇಳಿದಡೆಂತಹುದಯ್ಯಾ
ನೀನಿಕ್ಕಿದ ಸಯದಾನವನೊಲ್ಲದೆ
ಬೇರೆ ಬಯಸಿದೊಡೆಂತಹುದಯ್ಯಾ
ಚೆನ್ನಮಲ್ಲಿಕಾರ್ಜುನನ ಘನವನರಿಯಲೆಂದು
ಕಿರುಕುಳಕ್ಕೆ ಸಂದಡೆಂತಹುದಯ್ಯಾ

೩೩೮
ಕಂಗಳಲ್ಲಿ ನಟ್ಟ ಗಾಯವನಾರಿಗೂ ತೋರಬಹುದೇ
ಮನ ಸೋಂಕಿದ ಸುಖವ ಮೊಟ್ಟೆಯ ಕಟ್ಟಬಹುದೆ
ಆತ ನಿಂದ ಸುಖವಾತಂಗೆ ಸಾಧ್ಯವಾಯಿತ್ತು
ಆತ ನಿಂದ ನಿಲವನೇನೆಂಬೆ
ಗುಹೇಶ್ವರ

೩೩೯
ಕಂಗಳಾಲಿಯ ಕರಿಯ ನಾಳದಲ್ಲಿ ಈರೇಳು ಭುವನಂಗಳಡಗಿದವು
ನಾಟಕ ನಾಟಕವ ನಟಿಸುತ್ತ
ಆಡಿಸುವ ಸೂತ್ರದ ಪರಿ
ಗುಹೇಶ್ವರ ಲಿಂಗ ನಿರಾಳಚೈತನ್ಯ

೩೪೦
ಕಂಗಳು ತುಂಬಿದ ಬಳಿಕ ನೋಡಲಿಲ್ಲ
ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ

ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ
ಮನ ತುಂಬಿದ ಬಳಿಕ ನೆನೆಯಲಿಲ್ಲ
ಮಹಂತ ಕೂಡಲಸಂಗಮದೇವನ

೩೪೧
ಕಂಗಳೇಕೆ ನೋಡ ಬೇಡ ಎಂದಡೆ ಮಾಣವು
ಶ್ರೋತ್ರಂಗಳೇಕೆ ಆಲಿಸಬೇಡ ಎಂದಡೆ ಮಾಣವು
ಜಿಹ್ವೆಯೇಕೆ ರುಚಿಸಬೇಡ ಎಂದಡೆ ಮಾಣವು
ನಾಸಿಕವೇಕೆ ವಾಸಿಸಬೇಡ ಎಂದಡೆ ಮಾಣವು
ತ್ವಕ್ಕೇಕೆ ಸೋಂಕಬೇಡ ಎಂದಡೆ ಮಾಣವು
ಈ ಭೇದವನರಿದು ನುಡಿಸಲು ಸಮಧಾತುವಾಯಿತ್ತು
ಗುಹೇಶ್ವರಲಿಂಗಕ್ಕೆ ಒಲಿದ ಕಾರಣ
ಅಭಿಮಾನದ ಲಜ್ಜೆ ಬೇಸತ್ತು ಹೋಯಿತ್ತು

೩೪೨
ಕಂಡ ಕನಸು ದಿಟವಾಗಿ ಕಂಡೆನೆಂಬೆ
ಕಂಡೆನೆಂಬುದು ಬೆನ್ನ ಬಿಡದು
ನೋಡಾ
ಕಂಡುದ ಕಾಣೆನೆಂಬುದ ಎರಡನೂ ಅರಿಯದೆ
ತವಕ ತಲ್ಲಣಕ್ಕೆ ಎಡೆಯಾದೆನು
ತವಕದ ಕೂಟ ನಿಮ್ಮಲ್ಲಿ ತದುಗತವಾದೆನು
ಕಪಿಲಸಿದ್ಧಮಲ್ಲಿನಾಥಯ್ಯಾ
ನಿಮ್ಮ ಕರುಣವೆನಗೆ ಸಾಧ್ಯವಾಯಿತ್ತು

೩೪೩
ಕಂಡುದ ಹಿಡಿಯಲೊಲ್ಲದೆ
ಕಾಣದುದನರಸಿ ಹಿಡಿದಹೆನೆಂದರೆ
ಸಿಕ್ಕದೆಂಬ ಬಳಲಿಕೆಯ ನೋಡಾ
ಕಂಡುದನೆ ಕಂಡು
ಗುರುಪಾದವ ಹಿಡಿದಲ್ಲಿ
ಕಾಣದುದ ಕಾಣಬಹುದು
ಗುಹೇಶ್ವರ

೩೪೪
ಕಂಡೆನೆಂಬುದು
ಕಂಗೆ ಮರವೆ
ಕಾಣೆನೆಂಬುದು
ಮನದ ಮರವೆ
ಕೂಡಿದೆನೆಂಬುದು
ಅರಿವಿನ ಮರವೆ
ಅಗಲಿದೆನೆಂಬುದು
ಮರಹಿನ ಮರವೆ
ಇಂತು
ಕಂಡೆ ಕಾಣೆ ಕೂಡಿದೆನಗಲಿದೆನೆಂಬ
ಭ್ರಾಂತಿಸೂತಕವ ತಿಳಿದು ನೋಡಲು
ಗೊಹೇಶ್ವರನೆಂಬ ಲಿಂಗವನಗಲಲೆಡೆಯಿಲ್ಲ [ಕೇಳಾ ಎಲೆ ತಾಯೆ]

೩೪೫
ಕಂಡೆಹೆನೆಂಬ ಭ್ರಾಂತಿ
ಕಾಣೆನೆಂಬ ಬಯಕೆ
ಅರಿವುದಕ್ಕೆ ಮುನ್ನ ಅರಿದ ಅರಿವು
ಮನಸಂದಿತ್ತು
ಮಾರೇಶ್ವರಾ

೩೪೬
ಕಂಥೆಯ ಕಟ್ಟಿ ತಿತ್ತಿಯ ಹೊತ್ತು
ಮರಿಯ ನಡಸುತ್ತ
ದೊಡ್ಡೆಯ ಹೊಡೆವುತ್ತ
ಅಡ್ಡಗೋಲಿನಲ್ಲಿ ಹೋಹ ಚುಕ್ಕಿ ಬೊಟ್ಟಿನವ ತಿಟ್ಟುತ್ತ
ಹಿಂಡನಗಲಿ ಹೋಹ ದಿಂಡೆಯ
ಮಣೆಘಟ್ಟನ ಅಭಿಸಂದಿಯ ಕೋಲಿನಲ್ಲಿಡುತ್ತ
ಈ ಹಿಂಡಿನೊಳಗೆ ತಿರುಗಾಡುತಿದೇನೆ
ಈ ವಿಕಾರದ ಹಿಂಡ ಬಿಡಿಸಿ
ನಿಜನಿಳಯ ನಿಮ್ಮಂಗವ ತೋರಿ ಸುಸಂಗದಲ್ಲಿರಿಸು
ಎನ್ನೊಡೆಯ ವೀರಬೀರೇಶ್ವರಲಿಂಗಾ

೩೪೭

ಕಚ್ಚುವ ಹಾವ ಹಿಡಿವುದಕ್ಕೆ ಗಾರುಡವ ಕಲಿಸಿದುದಿಲ್ಲ
ಕುತ್ತುವ ಹಸುವಿನ ಕೊಂಬ ಹಿಡಿಯ ಕಲಿಸಿದುದಿಲ್ಲ
ತಿಂಬ ಹುಲಿಗೆ ಅಂಗವ ತಪ್ಪಿಸುವುದ ಕಲಿಸಿದುದಿಲ್ಲ
ಇದು ನಿನಗೆ ದಿಂಡೆಯತನವೊ
ನಿರಂಗ ನಿಃಕಳಂಕ ಮಲ್ಲಿಕಾರ್ಜುನಾ

೩೪೮

ಕಟ್ಟಿದ ಕೊಟ್ಟಿಗೆಯಲ್ಲಿ ಗುಬ್ಬಿ ಗೂಡನಿಕ್ಕದೆ
ತೋಡಿದ ಬಾವಿಯಲ್ಲಿ ತೊತ್ತು ನೀರ ತಾರಳೆ
ರಾಜಮಾರ್ಗದಲ್ಲಿ ಆರಾರೆಡೆಯಾಡರು
ಅಂತೆ ಎನಗಿವರ ಭ್ರಾಂತಿಯಿಲ್ಲ
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ
ನಿಲ್ಲು ಮಾಣು

೩೪೯

ಕಟ್ಟಿದೆ ಘಟದಟ್ಟೆಯ ಹೊಲಿದು
ಇಕ್ಕಿದೆ ಚತುರ್ವಿಧದ ನಾಲ್ಕು ಗುಂಟವ ಬಲಿದು
ಗುಂಟದ ದ್ವಾರದಲ್ಲಿ ಉಭಯಸಂಚದ ಬಾರ ತೆಗೆದು
ತೊಡಕು ಬಂಧವನಿಕ್ಕಿ ಅಡಿಯ ಬಿಡದಂತೆ
ಹಿಂದಣ ಮಡ ಮುಂದಣ ಉಂಗುಷ್ಠಕ್ಕೆ
ಒಂದನೊಂದು ಜಾರದಂತೆ ಬಂಧಿಸಿ
ಸಕಲೇಂದ್ರಿಯವೆಂಬ ಉಭಯವ ಸಂಧಿಸಿ ಕುಣಿಕೆಯನಿಕ್ಕಿ
ಕಾಮದ ಒಡಲ ಮಾದಿಗ ಬಂದೆ
ಘಟ ತೋಕುಳು ತೊಗಲು ಹದಬಂದಿತ್ತು
ಹೊತ್ತು ಹೋದಿಹಿತಣ್ಣಾ
ಮೆಟ್ಟಡಿಯ ಕೊಂಡ ರೊಕ್ಕವ ಕೊಡಿ
ಒಪ್ಪಿದರಿರಲಿ ಒಪ್ಪದಿದ್ದಡೆ
ಮೂರು ಮುಖದಪ್ಪಗೆ ಕೊಟ್ಟೆಹೆ
ತಪ್ಪಡಿಯ ಮೆಟ್ಟಿ ಹೋಗುತ್ತಿದ್ದೇನೆ
ಚನ್ನಯ್ಯಪ್ರಿಯ ಧೂಳನ ಧೂಳಿಗೊಳಗಾಗಿ

೩೫೦
ಕಟ್ಟಿದೆನೊರೆಯ ಬಿಟ್ಟೆ ಜನ್ನಿಗೆಯರ
ಮುಟ್ಟಿ ಬಂದಿರಿದಡೆ ಓಸರಿಸುವನಲ್ಲ
ಓಡದಿರು ಓಡದಿರು
ನಿಮ್ಮ ಶರಣರ ಮನೆಯ ಬಿರಿದಿನ ಅಂಕಕಾರ
ಓಡದಿರು ಓಡದಿರು
ಎಲೆ ಎಲೆ ದೇವಾ
ಎಲೆ ಎಲೆ ಸ್ವಾಮಿ
ಎಲೆ ಎಲೆ ಹಂದೆ
ಕೂಡಲಸಂಗಮದೇವಾ

೩೫೧
ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬುದೆ
ಕಡೆಗೀಲು ಬಂಡಿಗಾಧಾರ
ಈ ಕಡುದರ್ಪವೇರಿದ ಒಡಲೆಂಬ ಬಂಡಿಗೆ
ಮೃಡಭಕ್ತರ ನುಡಿಗಡಣವೆ ಕಡೆಗೀಲು
ಕಾಣಾ ರಾಮನಾಥ

೩೫೨
ಕಣ್ಣು ಮೀಸಲು ಶಿವನ
ಕೈ ಮೀಸಲು ಶಿವನ
ಕಾಲು ಮೀಸಲು ಶಿವನ
ನಾಲಗೆ ಮೀಸಲು ಶಿವನ
ಕಿವಿ ಮೀಸಲು ಶಿವನ
ನಾಸಿಕ ಮೀಸಲು ಶಿವನ
ತನು ಮನವೆಲ್ಲಾ ಮೀಸಲು ಶಿವನ
ಈ ಮೀಸಲು ಬೀಸರವಾಗದಂತಿರ್ದಡೆ
ಆತನೇ ಜಗದೀಶ ಕಾಣಾ ರಾಮನಾಥ

೩೫೩
ಕತ್ತಲೆಯ ಮನೆಯಲ್ಲಿ ಸಕ್ಕರೆಯ ಸವಿದವನಂತಿರಬೇಕು
ಬಟ್ಟಬಯಲಲ್ಲಿ ನಿಂದು ಇಷ್ಟಲಿಂಗವ ಕಂಡವನಂತಿರಬೇಕು

ಇದಕ್ಕೆ ಗುರುವಿನ ಹಂಗೇಕೆ
ಲಿಂಗದಪೂಜೆ ಏಕೆ
ಸಮಯದ ಹಂಗೇಕೆ
ತನ್ನ ತಾನು ಅರಿದವಂಗೆ
ಏಣಾಂಕನಶರಣರ ಸಂಗವೇಕೆ
ಇಷ್ಟವನರಿದವಂಗೆ ನಾನೇನು ನೀನೇನು ಎಂಬ
ಗೊಜಡಿನ ಭ್ರಮೆಯೇಕೆ
ಅಮುಗೇಶ್ವರಾ

೩೫೪
ಕತ್ತಲೆಯಲ್ಲಿ ಕನ್ನವನಿಕ್ಕಿದಡೆ
ಎನಗೆ ಕತ್ತಿಯ ಕೊಟ್ಟ ಕರ್ತುವಿಗೆ ಭಂಗ
ಅವರು ಮರದಿರ್ದಲ್ಲಿ ಮನೆಯ ಹೊಕ್ಕಡೆ
ಎನ್ನ ಚೋರತನದ ಅರಿಕೆಗೆ ಭಂಗ
ಮರದಿರ್ದವರ ಎಬ್ಬಿಸಿ ಅವರಿಗೆ ಅವರೊಡವೆಯ ತೋರಿ
ಎನ್ನೊಡವೆಯ ತಂದೆ ಮಾರನವೈರಿ ಮಾರೇಶ್ವಾರಾ

೩೫೫
ಕತ್ತಲೆಯೊಳಗಡಗಿದ ನೆಳಲಿನ ಬೀಜ
ಬಿತ್ತದ ಮುನ್ನ ಮಾಮರನಾಯಿತ್ತು
ತನ್ನ ನೆಳಲೆಲ್ಲಾ ಬೆಳದಿಂಗಳು
ನೋಡ ಹೋದವರ ಕಣ್ಣೆಲ್ಲಾ ಒಡೆದವು
ಉಲುಹಿದ್ದೂ ಉಲುಹಿಲ್ಲ
ಕಪಿಲಸಿದ್ಧಮಲ್ಲಿಕಾರ್ಜುನಯ್ಯ
ಆ ಮರದ ಹೋಟೆಯೊಳಗಣ ಮಧುವಿನಂತಿದ್ದನು

೩೫೬
ಕದಳಿ ಎಂಬುದು ತನು
ಕದಳಿ ಎಂಬುದು ಮನ
ಕದಳಿ ಎಂಬುದು ವಿಷಯಂಗಳು

ಕದಳಿ ಎಂಬುದು ಭವಘೋರಾರಣ್ಯ
ಈ ಕದಳಿ ಎಂಬುದ ಗೆದ್ದು ತವೆ ಬದುಕಿ ಬಂದು
ಕದಳಿಯ ಬನದಲ್ಲಿ ಭವಹರನ ಕಂಡೆನು
ಭವ ಗೆದ್ದು ಬಂದ ಮಗಳೆ ಎಂದು
ಕರುಣದಿ ತೆಗೆದು ಬಿಗಿಯಪ್ಪಿದಡೆ
ಚೆನ್ನಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು

**೩೫೭**

ಕನ್ನಡಿಯಲ್ಲಿ ಕಪ್ಪು ಹುಟ್ಟಿದಾಗ
ಕಪ್ಪ ಕಳೆದಲ್ಲದೆ ಒಪ್ಪವ ಕಾಣಬಾರದು
ತನ್ನ ಭಾವಶುದ್ಧಕ್ಕೆ ದರ್ಪಣದ ಒಪ್ಪವನರಸಬೇಕು
ಎನ್ನಯ ಮನದ ಕಪಟಕ್ಕೆ ನಿಮ್ಮಯ ಚಿತ್ತಶುದ್ಧವನರಸಬೇಕು
ನಿಮ್ಮಯ ನಿರ್ಮಲ ಎನ್ನಯ ಮಲದೇಹವ ತೊಳೆಯಬೇಕು
ಎಂಬುದಕ್ಕೆ ಅರಿವಿನ ಮಾರನ ಬಿನ್ನಹ
ಸದಾಶಿವಮೂರ್ತಿಲಿಂಗಕ್ಕೆ ತೆರಹಿಲ್ಲದ ಭಾವ

**೩೫೮**

ಕಬ್ಬಿನ ಬಿಲ್ಲಮಾಡಿ
ಪರಿಮಳದಲ್ಲಿ ಅಂಬ ಮಾಡಿ
ನಲ್ಲೊ ಬಿಲ್ಲಾಳೆ
ಎನ್ನ ಮನದಲ್ಲಿ ಎಸೆಯ ಬಲ್ಲೆಯಲ್ಲಾ
ಗುಹೇಶ್ವರನೆಂಬ ಲಿಂಗವನು

**೩೫೯**

ಕಬ್ಬುನದ ಕೋಡಗವ ಪರುಷ ಮುಟ್ಟಲು
ಅದು ಹೊನ್ನಾದಡೇನು
ಮತ್ತೇನಾದಡೇನು
ತನ್ನ ಮುನ್ನಿನ ರೂಹ ಬಿಡದನ್ನಕ್ಕ
ಕೂಡಲಸಂಗಮದೇವಾ
ನಿಮ್ಮ ನಂಬಿಯೂ ನಂಬದ ಡಂಬಕರುಗಳಯ್ಯಾ

೩೬೦

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ
ಒರೆಗೆ ಬಣ್ಣಕ್ಕೆ ತಂದೆನ್ನ ಪುಟವನಿಕ್ಕಿ ನೋಡಯ್ಯಾ
ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ
ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು
ಕೂಡಲಸಂಗಮದೇವಾ

೩೬೧

ಕರಿ ಘನ ಅಂಕುಶ ಕಿರಿದೆನ್ನಬಹುದೆ
ಬಾರದಯ್ಯಾ
ಗಿರಿ ಘನ ವಜ್ರ ಕಿರಿದೆನ್ನಬಹುದೆ
ಬಾರದಯ್ಯಾ
ತಮಂಧ ಘನ ಜ್ಯೋತಿ ಕಿರಿದೆನ್ನಬಹುದೆ
ಬಾರದಯ್ಯಾ
ಮರಹು ಘನ ನಿಮ್ಮ ನೆನೆವ ಮನ ಕಿರಿದೆನ್ನಬಹುದೆ
ಬಾರದಯ್ಯಾ
ಕೂಡಲಸಂಗಮದೇವಾ

೩೬೨

ಕರಿಯನಿತ್ತಡೆ ಒಲ್ಲೆ ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ
ಒಂದರೆಘಳಿಗೆಯಿತ್ತಡೆ ನಿನ್ನನಿತ್ತೆ
ಕಾಣಾ ರಾಮನಾಥ

೩೬೩

ಕರುವಿನ ರೂಹನರಗಿಳಿಯನೋದಿಸುವಂತೆ
ಓದಿಸುವುದಕ್ಕೆ ಜೀವವಿಲ್ಲ
ಕೇಳುವುದಕ್ಕೆ ಜ್ಞಾನವಿಲ್ಲ
ಚೆನ್ನಮಲ್ಲಿಕಾರ್ಜುನದೇವಯ್ಯಾ
ನಿಮ್ಮನರಿಯದವನ ಭಕ್ತಿ
ಕರುವಿನ ರೂಹು ಆ ಅರಗಿಳಿಯನೋದಿಸುವಂತೆ

೩೬೪
ಕರೆಯದೆ ಬಂದುದ
ಹೇಳದೆ ಹೋದುದನಾರೂ ಅರಿಯರಲ್ಲಾ
ಅದಂದಂದಿಗೆ ಬಂದ ಪ್ರಾಣಿಗಳು
ಆರೂ ಅರಿಯರಲ್ಲಾ
ಗುಹೇಶ್ವರಲಿಂಗ ಉಣ್ಣದೇ ಹೋದುದನಾರೂ ಅರಿಯರಲ್ಲಾ

೩೬೫
ಕರ್ಪೂರದ ಗಿರಿಯ ಉರಿಯು ಹಿಡಿದಡೆ ಇದ್ದಿಲುಂಟೆ
ಮಂಜಿನ ಶಿವಾಲಯಕ್ಕೆ ಬಿಸಿಲ ಕಳಶವುಂಟೆ
ಕೆಂಡದ ಗಿರಿಯನರಗಿನ ಬಾಣದಲೆಚ್ಚಡೆ
ಮರಳಿ ಬಾಣವನರಸಲುಂಟೆ
ಗುಹೇಶ್ವರನೆಂಬ ಲಿಂಗವನರಿದು
ಮರಳಿ ನೆನೆಯಲುಂಟೆ

೩೬೬
ಕರ್ಮ ನಾಸ್ತಿಯೆಂಬೆ ಅನಾಸ್ತಿಯೆಂಬೆ
ಜ್ಞಾನಕೊಬ್ಬಿನಲ್ಲಿ ಉಲಿವೆ
ಉಲಿದಂತೆ ನಡೆವೆ
ಸಂಗಡಸಹಿತ ಕರಸ್ಥಲಕ್ಕೆ ಬಂದು
ನೀನೂ ಬಯಲಾಗೆ
ಎನ್ನನೂ ಬಯಲು ಮಾಡೆ
ಗುಹೇಶ್ವರ

೩೬೭
ಕಲಿಯ ಕೈಯ ಕೈದುವಿನಂತಿರಬೇಕಯ್ಯಾ
ಎಲುದೋರೆ ಸರಸವಾಡಿದಡೆ ಸೈರಿಸಬೇಕಯ್ಯಾ
ರಣದಲ್ಲಿ ತಲೆ ಹರಿದು ಅಟ್ಟೆ ನೆಲಕ್ಕೆ ಬಿದ್ದು
ಬೊಬ್ಬಿಡಲದಕ್ಕೆ ಒಲಿವ ಕೂಡಲಸಂಗಮದೇವ

೩೬೮
ಕಲಿಯಾಯಿತು ಕಲಿಯಾಯಿತು
ಕಲಿಯುಗದೊಳಗೊಂದು ಸೋಜಿಗವ ಕಂಡೆನು
ಸತ್ಯವರತಿತ್ತು
ಸಾತ್ವಿಕ ಬೆಂದಿತ್ತು
ವೈಶಿಕ ಘನವಾಯಿತ್ತು
ಠಕ್ಕು ಠವಣು ಮುಂಡು ಮುರುಹು ಭೂಮಂಡಲವೆಲ್ಲ ತುಂಬಿತ್ತು
ಆಗಳೆ ಭಕ್ತರು ಆಗಳೆ ಭವಿಗಳು
ಅಂಗಯ್ಯ ಮೇಗಯ್ಯಾದರು ನೋಡಯ್ಯಾ
ಎನ್ನ ಸ್ವತಂತ್ರ ಕಪಿಲಸಿದ್ಧಮಲ್ಲೇಶ್ವರದೇವಯ್ಯಾ
ದೃಷ್ಟ ಲಿಂಗ ಜಂಗಮವೆಲ್ಲ ಕಲ್ಲು ಕೊರಡಾಗಿ ಹೋದರು

೩೬೯
ಕಲ್ಯಾಣವೆಂಬುದಿನ್ನಾರಿಗೆ ಹೊಗಬಹುದು
ಹೊಗಬಾರದು ಅಸಾಧ್ಯವಯ್ಯಾ
ಆಸೆ ಆಮಿಷ ಅಳಿದಂಗಲ್ಲದೆ
ಕಲ್ಯಾಣದತ್ತಲಡಿಯಿಡಬಾರದು
ಒಳಹೊರಗು ಶುದ್ಧನಾದಂಗಲ್ಲದೆ
ಕಲ್ಯಾಣವ ಹೊಗಬಾರದು
ನೀನಾನೆಂಬುದ ಹರಿದಂಗಲ್ಲದೆ
ಕಲ್ಯಾಣದ ಒಳಗು ತಿಳಿಯಬಾರದು
ಚೆನ್ನಮಲ್ಲಿಕಾರ್ಜುನಂಗೊಲಿದು
ಉಭಯ ಲಜ್ಜೆ ಅಳಿದೆನಾಗಿ
ಕಲ್ಯಾಣವಂ ಕಂಡು
ನಮೋ ನಮೋ ಎನುತಿದ್ದೆನು

೩೭೦
ಕಲ್ಲ ನಾಗರ ಕಂಡಡೆ
ಹಾಲನೆರೆಯೆಂಬರು
ದಿಟದ ನಾಗರ ಕಂಡಡೆ
ಕೊಲ್ಲೆಂಬರಯ್ಯಾ

ಉಂಬ ಜಂಗಮ ಬಂದಡೆ
ನಡೆಯೆಂಬರು
ಉಣ್ಣದ ಲಿಂಗಕ್ಕೆ
ಬೋನವ ಹಿಡಿಯೆಂಬರಯ್ಯಾ
ನಮ್ಮ ಕೂಡಲಸಂಗನ ಶರಣರ ಕಂಡು ಉದಾಸೀನವ ಮಾಡಿದಡೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯಾ

೩೭೧
ಕಲ್ಲ ಮನೆಯ ಮಾಡಿ
ಕಲ್ಲ ದೇವರ ಮಾಡಿ
ಆ ಕಲ್ಲು ಕಲ್ಲ ಮೇಲೆ ಕೆಡೆದರೆ
ದೇವರೆತ್ತ ಹೋದರೋ
ಲಿಂಗಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ
ಗುಹೇಶ್ವರ

೩೭೨
ಕಲ್ಲ ಹೊತ್ತು ಕಡಲೊಳಗೆ ಮುಳುಗಿದಡೆ
ಎಡರಿಂಗೆ ಕಡೆಯುಂಟೆ
ಅವ್ವಾ
ಉಂಡು ಹಸಿವಾಯಿತ್ತೆಂದಡೆ
ಭಂಗವೆಂದೆ
ಕಂಡ ಕಂಡ ಠಾವಿನಲ್ಲಿ ಮನ ಬೆಂದಡೆ
ಗಂಡ ಚನ್ನಮಲ್ಲಿಕಾರ್ಜುನನೆಂತೊಲಿವನವ್ವಾ

೩೭೩
ಕಲ್ಲಿನ ಹೋಳ ಬೆಲ್ಲವೆಂದು ಮಕ್ಕಳ ಕೈಯಲ್ಲಿ ಕೊಟ್ಟಡೆ
ಹಲ್ಲಿನಲ್ಲಿ ಕಡಿದು ನಾಲಗೆಯಲ್ಲಿ ನಂಜಿ
ಬೆಲ್ಲವಲ್ಲಾ ಎಂದು ಹಾಕಿ ಮನೆಯವರೆಲ್ಲರ ಕಾಡುವಂತೆ
ನಾನರಿಯದೆ ಕುರುಹ ಹಿಡಿದು
ಅದು ಎನ್ನ ಮರವೆಯ ಮನಕ್ಕೆ ತೆರಹಾಗದು
ನಾನರಿವಡೆ ಎನ್ನ ಒಡಗೂಡಿದ ತುಡುಗುಣಿ ಬೆನ್ನಬಿಡದು

ಒಡೆಯ ಸತುವಿಲ್ಲದೆ ಬಡವನ ಬಂಟನಾದ ಮತ್ತೆ
ಬಾಯ ಹೊಡೆಯಿಸಿಕೊಂಬುದಕ್ಕೆ ಅಂಜಲೇಕೆ
ಬಿಡು ಬಡವೊಡೆಯನ
ಬಿಡದಿದ್ದಡೆ ಕಲ್ಲೆದೆಯಾಗು
ಇವರೆಲ್ಲರ ವಿಧಿ ಎನಗಾಯಿತ್ತು ಕೈಯಲ್ಲಿದ ಕಠಿಣವ ನಂಬಿ
ಇದರ ಬಲ್ಲತನವ ಹೇಳಾ
ಅಲೇಖನಾದ ಶೂನ್ಯ ಕಲ್ಲಿನ ಮರೆಯಾದವನೆ

೩೭೪
ಕಲ್ಲಿನಲ್ಲಿ ಕಠಿಣ
ಖುಲ್ಲರಲ್ಲಿ ದುರ್ಗುಣ
ಬಲ್ಲವರಲ್ಲಿ ಸುಗುಣ
ಉಂಟೆಂದೆಲ್ಲರೂ ಬಲ್ಲರು
ಇಂತೀ ಇವು ಎಲ್ಲರ ಗುಣ
ಅಲ್ಲಿಗಲ್ಲಿಗೆ ಸರಿಯೆಂದು
ಗೆಲ್ಲ ಸೋಲಕ್ಕೆ ಹೋರದೆ
ನಿಜವೆಲ್ಲಿತ್ತು ಅಲ್ಲಿಯೆ ಸುಖವೆಂದನಂಬಿಗ ಚವುಡಯ್ಯ

೩೭೫
ಕಲ್ಲಿನೊಳಗೆ ವಲ್ಲಭನಿದ್ದಹನೆಂದು
ಎಲ್ಲರೂ ಬಳಲುತಿರ್ಪರು ನೋಡಾ
ಅಲ್ಲಿ ಎಲ್ಲಿಯೂ ಕಾಣೆ
ತನ್ನಲ್ಲಿ ಕುರಿತು ಇದಿರಿಟ್ಟಲ್ಲಿಯಲ್ಲದೆ
ಮತ್ತೆಯಿಲ್ಲವಾಗಿ ಇದು ಬಲ್ಲವರ ಬಲ್ಲತನ
ಹಾಗಲ್ಲದೆ ತನ್ನ ಮರೆದು ಅನ್ಯವ ಕಂಡೆಹೆನೆಂದಡೆ
ಅದು ನನ್ನಿಯಲ್ಲ ಹುಸಿ
ಮನ್ನಣೆಗೆ ಸಿಕ್ಕಿದ ಶಿಲೆಯ ಬಣ್ಣಿಸುತ್ತಿರ್ಪವರ ನೋಡಾ
ಬಣ್ಣಿಸುತ್ತಿಪ್ಪ ಅಣ್ಣಗಳೆಲ್ಲರೂ ಸನ್ನದ್ಧವಾದರೂ
ಕೋಟೆಯಲ್ಲಿ ಸಿಕ್ಕಿ ಸತ್ತುದಿಲ್ಲ
ಎಲ್ಲರೂ ಕೋಟೆಯ ಹೊರಗಿರ್ದು ಸತ್ತು ಕೆಟ್ಟರಲ್ಲಾ
ನಿಃಕಳಂಕ ಮಲ್ಲಿಕಾರ್ಜುನಾ

೩೭೬
ಕಲ್ಲು ಕಲ್ಲು ತಾಕಿದಲ್ಲಿ ಕಿಚ್ಚಿನ ಕಿಡಿಯಲ್ಲದೆ
ಹೆಂಟೆ ಶಿಲೆ ಹೋರಿದಲ್ಲಿವುಂಟೆ
ಅರಿದವನಲ್ಲಿ ಒಡಗೂಡುವ ಸುಖವಲ್ಲದೆ
ಬರಿಯನಲ್ಲಿ ಅರಿವು ಹೀನನಲ್ಲಿ
ಅರಿವಿನ ಕುರುಹ ಮರೆದಾಡುವನಲ್ಲಿ
ಸುರೆಯ ಮಡಕೆಯ ಪೂಜಿಸಿ ಕುಡಿವವನಂತಾಗಬೇಡ
ಬರಿಯ ವಾಚಾಸಿದ್ಧಿಯಲ್ಲಿ ಅರಿದೆಹೆನೆಂದು
ಅವ ಕೊಟ್ಟರಿವಿನ ಕುರುಹ ಮರೆಯಬೇಡ
ಆ ಮರೆಯಲ್ಲಿ ಬೆಳಗು ತೋರುತ್ತದೆ
ಸದಾಶಿವಮೂರ್ತಿಲಿಂಗದಲ್ಲಿ

೩೭೭
ಕಲ್ಲು ಮರ ಮಣ್ಣಿನ ಮರೆಯಲ್ಲಿ ಪೂಜಿಸಿಕೊಂಬುದು ವಸ್ತುವೇ
ತನ್ನ ಮನಸ್ಸಿನ ಗೊತ್ತಲ್ಲದೆ
ಅಲ್ಲಿಪ್ಪುದನರಿವ ಅರಿವು
ತಾನೆ ನಿಜವಸ್ತುವಾಗಿ ಬೆಳಗುತ್ತದೆ
ಸದಾಶಿವಮೂರ್ತಿಲಿಂಗವೆಯಾಗಿ

೩೭೮
ಕಲ್ಲು ಲಿಂಗವಲ್ಲ
ಉಳಿಯ ಮೊನೆಯಲ್ಲಿ ಒಡೆಯಿತ್ತು
ಮರ ದೇವರಲ್ಲ
ಉರಿಯಲ್ಲಿ ಬೆಂದಿತ್ತು
ಮಣ್ಣು ದೇವರಲ್ಲ
ನೀರಿನ ಕೊನೆಯಲ್ಲಿ ಕದಡಿತ್ತು
ಇಂತಿವನೆಲ್ಲವನರಿವ ಚಿತ್ತ ದೇವರಲ್ಲ
ಕರಣಂಗಳ ಮೊತ್ತದೊಳಗಾಗಿ ಸತ್ವಗೆಟ್ಟಿತ್ತು
ಇಂತಿವ ಕಳೆದುಳಿದ ವಸ್ತುವಿಪ್ಪೆಡೆ ಯಾವುದೆಂದಡೆ
ಕಂಡವರೊಳಗೆ ಕೈಕೊಂಡಾಡದೆ
ಕೊಂಡ ವ್ರತದಲ್ಲಿ ಮತ್ತೊಂದನೊಡಗೂಡಿ ಬೆರೆಯದೆ

ವಿಶ್ವಾಸ ಗ್ರಹಿಸಿ ನಿಂದಲ್ಲಿ ಆ ನಿಜಲಿಂಗವಲ್ಲದೆ
ಮತ್ತೊಂದು ಪೆರತನರಿಯದೆ ನಿಂದಾತನೆ ಸರ್ವಾಂಗಲಿಂಗಿ
ವೀರಬೀರೇಶ್ವರಲಿಂಗದೊಳಗಾದ ಶರಣ

೩೭೯
ಕವುಳುಗೋಲ ಹಿಡಿದು ಶ್ರವವ ಮಾಡಬಹುದಲ್ಲದೆ
ಕಳನೇರಿ ಕಾದುವುದರಿದು ನೋಡಾ
ಬಣ್ಣವಿಟ್ಟು ನುಡಿದಲ್ಲಿ ಫಲವೇನು
ಚಿನ್ನಗೆಯ್ಯುವನ್ನಾಡುವವನಂತೆ
ಬಂದ ಸಮಯವನರಿತು ಇದ್ದುದ ವಂಚಿಸದಿದ್ದಡೆ
ಕೂಡಸಂಗಮದೇವನೊಲಿದು ಸಲಹುವ

೩೮೦
ಕಸ್ತುರಿಯ ಮೃಗ ಬಂದು ಸುಳಿಯತ್ತಯ್ಯ
ಸಕಲ ವಿಸ್ತಾರದ ರೂಹು ಬಂದು ನಿಂದಿತ್ತಯ್ಯ
ಆವ ಗ್ರಹ ಬಂದು ಸೋಂಕಿತ್ತೆಂದರಿಯೆನಯ್ಯ
ಆವ ಗ್ರಹ ಬಂದು ಹಿಡಿಯಿತ್ತೆಂದರಿಯೆನಯ್ಯ
ಹೃದಯ ಕಮಲ ಮಧ್ಯದಲ್ಲಿ ಗುರುವನರಿದು
ಪೂಜಿಸಿ ಗುರು ವಿಖ್ಯಾತನೆಂಬುದ ನಾನರಿದೆನಯ್ಯ
ಗುರುಗುಹೇಶ್ವರನಲ್ಲಿ
ಹಿಂದಣ ಹುಟ್ಟುರತು ಹೋದುದ ಕಂಡೆನಯ್ಯ

೩೮೧
ಕಳನನೇರಿದಲ್ಲಿ ಕೈದನರಸಲಿಲ್ಲ
ಬಲ್ಲವನಾದೆನೆಂಬಲ್ಲಿ ಗೆಲ್ಲ ಸೋಲಕ್ಕೆ ಹೋರಲಿಲ್ಲ
ನೇಮ ಸಂದಲ್ಲಿ
ತನುವಿನಾಸೆಯು ಮನಸಂದಿತ್ತು
ಮಾರೇಶ್ವರಾ

೩೮೨
ಕಳಬೇಡ ಕೊಲಬೇಡ
ಹುಸಿಯ ನುಡಿಯಲು ಬೇಡ

ಮುನಿಯಬೇಡ
ಅನ್ಯರಿಗೆ ಅಸಹ್ಯಬಡಬೇಡ
ತನ್ನ ಬಣ್ಣಿಸಬೇಡ
ಇದಿರ ಹಳಿಯಲು ಬೇಡ
ಇದೇ ಅಂತರಂಗಶುದ್ಧಿ
ಇದೇ ಬಹಿರಂಗಶುದ್ಧಿ
ಇದೇ
ನಮ್ಮ ಕೂಡಲಸಂಗಮದೇವರನೊಲಿಸುವ ಪರಿ

**೩೮೩**

ಕಳವಳದ ಮನ ತಲೆಕೆಳಗಾದುದವ್ವಾ
ಸುಳಿದು ಬೀಸುವ ಗಾಳಿ ಉರಿಯಾದುದವ್ವಾ
ಬೆಳುದಿಂಗಳು ಬಿಸಿಯಾಯಿತ್ತು ಕೆಳದಿ
ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವಾ
ತಿಳುಹಾ
ಬುದ್ಧಿಯ ಹೇಳಿ ಕರೆತಾರೆಲಗವ್ವಾ
ಚೆನ್ನಮಲ್ಲಿಕಾರ್ಜುನಂಗೆ ಎರಡರ ಮುನಿಸವ್ವಾ

**೩೮೪**

ಕಾಗೆ ಒಂದಗುಳ ಕಂಡಡೆ
ಕರೆಯದೆ ತನ್ನ ಬಳಗವನು
ಕೋಳಿ ಒಂದು ಕುಟುಕ ಕಂಡಡೆ
ಕೂಗಿ ಕರೆಯದೆ ತನ್ನ ಕುಲವೆಲ್ಲವ
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ
ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ

**೩೮೫**

ಕಾಗೆಯ ಮರಿ ಕೋಗಿಲೆಯಾಗಬಲ್ಲುದೆ
ಆಡಿನಮರಿ ಆನೆಯಾಗಬಲ್ಲುದೆ
ಸೀಳನಾಯಿ ಸಿಂಹದ ಮರಿಯಾಗಬಲ್ಲುದೆ

ಅರಿವು ಆಚಾರ ಸಮ್ಯಜ್ಞಾನವನರಿಯದೆ
ನಾಮವ ಹೊತ್ತುಕೊಂಡು ತಿರುಗುವ ಗಾವಿಲರ
ಮುಖವ ನೋಡಲಾಗದು ಅಮುಗೇಶ್ವರಾ

**೩೮೬**

ಕಾಡಪತ್ರೆಯ ನಾಡಕೀಡೆ ತಿಂದಿರವೆ
ತೋಳ ದಿಗಂಬರಿಯೆ
ಎತ್ತು ಬ್ರಹ್ಮಚಾರಿಯೆ
ಬಾವುಲ ತಲೆಕೆಳಗಾಗಿದ್ದಡೆ ತಪಸ್ವಿಯೆ
ಸಕಳೇಶ್ವರದೇವಾ
ನಿಮ್ಮ ನಿಜನರಿಯದ ಶರಣರು
ಹೊರಹಂಚೆ ಒಳಬೊಳ್ಳೆ
ಒಲ್ಲದು ಲಿಂಗೈಕ್ಯರು

**೩೮೭**

ಕಾಣದುದನರಸುವರಲ್ಲದೆ ಕಂಡುದನರಸುವರೇ
ಹೇಳಾ
ಘನಕ್ಕೆ ಘನವಾದ ವಸ್ತು
ತಾನೆ ಗುರುವಾದ
ತಾನೆ ಲಿಂಗವಾದ
ತಾನೆ ಜಂಗಮವಾದ
ತಾನೆ ಪ್ರಸಾದವಾದ
ತಾನೆ ಮಂತ್ರವಾದ
ತಾನೆ ಯಂತ್ರವಾದ
ತಾನೆ ಸಕಲ ವಿದ್ಯಾಸ್ವರೂಪನಾದ
ಇಂತಿವೆಲ್ಲವನೊಳಕೊಂಡು
ಎನ್ನ ಕರಸ್ಥಲಕ್ಕೆ ಬಂದು
ಇನ್ನು ನಿರ್ವಿಕಾರ ಗುಹೇಶ್ವರ

**೩೮೮**

ಕಾಣಬಹುದು ಕೈಗೆ ಸಿಲುಕದು
ಅರಿಯಬಹುದು ಕುರುಹಿಡಬಾರದು

ಭಾವಿಸಬಹುದು ಬೆರಸಬಾರದು
ಇಂತೀ ಉಪಮಿಸಬಾರದ ಮಹಾಘನವ
ಕಪಿಲಸಿದ್ಧಮಲ್ಲಿಕಾರ್ಜುನ
ನಿಮ್ಮ ಶರಣನೇ ಬಲ್ಲ

೩೮೯
ಕಾಣಬೇಕೆಂದು ಮುಂದೆ ನಿಂದು
ಕೇಳಬೇಕೆಂದು ಕೂಗಿ ಕರೆದು
ಈ ಕೇಣಸರದ ಜಾಣತನದ ಗುರುವೇಕೆ
ಸುಡು ಒಡಲ ಬಿಡು ಅಸುವ ನಿನಗೆ ಒಡೆಯತನವೇಕೆ
ಸುಖದಡಗಿಂಗೆ ಸಿಕ್ಕಿ ಹಿಡಿಮೊಲಕ್ಕೆ ಗಿಡುವಿನ ಹಂಗಿಲ್ಲ
ಬಿಡುವನವರ ಐಘಟದೂರ ರಾಮೇಶ್ವರಲಿಂಗ

೩೯೦
ಕಾಣುತ್ತ ಕಾಣುತ್ತ ಕಂಗಳ ಮುಚ್ಚಿದೆ
ನೋಡವ್ವಾ
ಕೇಳುತ್ತ ಕೇಳುತ್ತ ಮೈಮರೆದೊರಗಿದೆ
ನೋಡವ್ವಾ
ಹಾಸಿದ ಹಾಸಿಗೆಯ ಹಂಗಿಲ್ಲದೆ ಹೋಯಿತ್ತು
ಕೇಳವ್ವಾ
ಚೆನ್ನಮಲ್ಲಿಕಾರ್ಜುನದೇವರದೇವನ ಕೂಡುವ ಕೂಟವ
ನಾನೇನೆಂದರಿಯದೆ ಮರೆದೆ
ಕಾಣವ್ವಾ

೩೯೧
ಕಾಣುತ್ತ ಕಾಣುತ್ತ ಕಣ್ಣ ಮುಚ್ಚಿದೆ
ಕೇಳುತ್ತ ಕೇಳುತ್ತ ಮೈಮರದೊರಗಿದೆ
ಹಾಸಿದ ಹಾಸಿಗೆಯ ಬೀಸಾಡಿ ಕಳೆದೆ
ಚನ್ನಮಲ್ಲಿಕಾರ್ಜುನನ ಇರುಳೆಲ್ಲಾ ಕೂಡಿ
ಬೆಳಗಾಗಿ ಕಾಣದೆ ಬೆಂಬಿದ್ದೆನು

೩೯೨
ಕಾಣೆನೆಂಬ ಅರಿಕೆ
ಕಂಡೆನೆಂಬ ಸಂತೋಷ
ಉಭಯವ ವಿಚಾರಿಸುವನ್ನಬರ
ಮರವೆಯ ಬೀಜ
ಕಂಡೆನೆಂಬ ಕಾಣಿಕೆಯವನಲ್ಲ
ಕಾಣೆನೆಂಬ ಸಂಚಾರದವನಲ್ಲ
ಆ ಉಭಯದ ಅಂಗ ಲೇಪವಾದಲ್ಲಿ
ಮನಸಂದಿತ್ತು ಮಾರೇಶ್ವರಾ

೩೯೩
ಕಾದ ಹಾಲ ನೊಣ ಮುಟ್ಟಬಲ್ಲುದೆ
ಕಿಚ್ಚಿನೊಳಗಣ ಗುಂಡ ಬೆಕ್ಕು ಮುಟ್ಟಬಲ್ಲುದೆ
ಮರುಜವಣಿಯ ಕಡ್ಡಿ ಕಯ್ಯಲಿದ್ದವಂಗೆ ಸರ್ಪ ಕಡಿಯಬಲ್ಲುದೆ
ಈ ತ್ರಿವಿಧವನರಿದವಂಗೆ ಹಿಂದೆ ಶಂಕೆಯಿಲ್ಲ ಮುಂದೆ ಭೀತಿಯಿಲ್ಲ
ಕಳಂಕು ಇಲ್ಲದೆ ಅಮುಗೇಶ್ವರಲಿಂಗವು ಅಪ್ಪಿಕೊಂಡಿತ್ತು

೩೯೪
ಕಾಮಧೇನುವೆಂದಡೆ ಇಹುದಕ್ಕೆ ನೆಲೆ ಬೇಕು
ಕಲ್ಪತರುವೆಂದಡೆ ಹುಟ್ಟೂದಕ್ಕೆ ಭೂಮಿ ಬೇಕು
ಚಿಂತಾಮಣಿಯೆಂದಡೆ ತಾನೊಂದ ಚಿಂತಿಸಿ ಬೇಡಿಯಲ್ಲದೆ
ಕೊಡದೊಂದುವ
ಇವಕ್ಕೆಲ್ಲಕ್ಕೂ ಒಂದೊಂದು ನಿಂದ ನೆಲೆ ವಾಸವಾಯಿತ್ತು
ಮನದರಿವಿಂಗೆ ಕೈಯ ಕುರುಹಿಂಗೆ
ವಿಚಾರದಿಂದ ಒಳಹೊಕ್ಕು ನಿಂದು ನೋಡಲಾಗಿ
ಹಿಂದಳ ಕತ್ತಲೆಯ ಮುಂದಳ ಬೆಳಗಿನ ಉಭಯದ ಸಂಧಿಯಲ್ಲಿ
ಸಲೆ ಸಂದು ತೋರುತ್ತದೆ ನಿಜದ ಬೆಳಗು ತೋರುತ್ತದೆ
ಸದಾಶಿವಮೂರ್ತಿಲಿಂಗದಲ್ಲಿ

೩೯೫
ಕಾಮನೆಂಬ ಬಿಲ್ಲಾಳವುಂಟೆಂಬುದ
ನಾವು ಕೇಳಿ ಬಲ್ಲೆವೈಸೆ

ಅವನೆಲ್ಲರನೆಸೆವ
ಅವ ನಮ್ಮ ಕಂಡಡೆ
ಬಿಟ್ಟೆಮ್ಮ ನಿಟ್ಟೈಸದೆ ಸರಿವ
ಸಕಳೇಶ್ವರದೇವರನರಿಯದ ನಿರ್ಭಾಗ್ಯರನೆಸೆವಾ

೩೯೬
ಕಾಮಾ
ನಿನ್ನ ಬಿಲ್ಲಾಳುತನುವನು
ಎಸುಗೆಯನು ನೋಡುವೆನು
ಕೇಳೆಲವೊ
ಕುಸುಮಶರವನು ತೊಡು ನೀನು
ಎಸು
ನಿನ್ನೆಸುಗೆಯ ನೋಡುವೆನು
ಕೇಳಾ
ಎನಗೂ ಉರಿಲಿಂಗದೇವಗೂ ತೊಟ್ಟೆಸು
ಎಸಲು ನೀ ಬಿಲ್ಲಾಳಹೆಯೋ ಕಾಮಾ

೩೯೭
ಕಾಮಾರಿಯ ಗೆಲಿದನು ಬಸವಾ ನಿಮ್ಮಿಂದ
ಸೋಮಧರನ ಹಿಡಿತಪ್ಪೆನು ಬಸವಾ ನಿಮ್ಮ ಕೃಪೆಯಿಂದ
ನಾಮದಲ್ಲಿ ಹೆಂಗೂಸೆಂಬ ಹೆಸರಾದಡೇನು
ಭಾವಿಸಲು ಗಂಡು ರೂಪು ಬಸವಾ ನಿಮ್ಮ ದಯದಿಂದ
ಅತಿಕಾಮಿ ಚೆನ್ನಮಲ್ಲಿಕಾರ್ಜುನಂಗೆ ತೊಡರಿಕ್ಕಿ
ಎರಡುವರಿಯದೆ ಕೂಡಿದೆನು ಬಸವಾ ನಿಮ್ಮ ಕೃಪೆಯಿಂದ

೩೯೮
ಕಾಮಿಗೆ ಯೋನಿಯೆಲ್ಲವೂ ಸರಿ
ಕ್ರೋಧಿಗೆ ಕೊಲೆ ಸರ್ವಜೀವವೆಲ್ಲವೂ ಸರಿ
ಲೋಭಿಗೆ ಜಯ ಅಪಜಯದಿಂದ ಬಂದ ದ್ರವ್ಯವೆಲ್ಲವೂ ಸರಿ
ಪಾತಕಂಗೆ ಪಾಪಪುಣ್ಯವೆಂಬುದಿಲ್ಲ
ಇಂತೀ ಜಗದ ಸೂತಕಕ್ಕೆ ಹೊರಗಾಗಿ

ತ್ರಿಕರಣಸೂತಕಕ್ಕೆ ಒಳಗಲ್ಲದೆ
ಕಾತು ಕರ್ಮವನರಿಯದೆ ಜೀವ ಭವವನುಣ್ಣದೆ
ಆವ ಠಾವಿನಲ್ಲಿಯೂ ಕಲೆ ನಿಷ್ಪತ್ತಿಯಾದ ಮತ್ತೆ
ಕಾಯಕ್ಕೆ ಕುರುಹಿಲ್ಲ ಜೀವಕ್ಕೆ ಭಯವಿಲ್ಲ
ಅರಿವಿಂಗೆ ಮರವೆಯಿಲ್ಲದೆ ತೋರದ ನಿರಾಳ
ಕಾಮಧೂಮ ಧೂಳೇಶ್ವರ ತಾನೂ ತಾನೆ

೩೯೯

ಕಾಮಿಸಿ ಕಲ್ಪಿಸಿ ಭಾವಿಸಿ
ಬರಿದೆ ಬಳಲಿದೆ
ಚಿಂತೆ ಮರುಳುತನಂ
ಅದೆಂತು ಬಂದುದನಂತೆ ಕಾಬುದು
ಚಿಂತೆ ಮರುಳುತನಂ
ಅಚಿಂತ್ಯ ಸಕಳೇಶ್ವರ ಮಾಡಿದಂತೆ
ಅಂತೆಯಲ್ಲದೆ ಏಂತೂ ಆಗದು
ಚಿಂತೆ ಮರುಳುತನಂ

೪೦೦

ಕಾಮಿಸಿದಲ್ಲದೆ ಕೊಡದು ಕಾಮಧೇನು
ಕಲ್ಪಿಸಿದಲ್ಲದೆ ಕೊಡದು ಕಲ್ಪವೃಕ್ಷ
ಚಿಂತಿಸಿದಲ್ಲದೆ ಕೊಡದು ಚಿಂತಾಮಣಿ
ಭಾವಿಸಿದಲ್ಲದೆ ಕೊಡನು ಶಿವನು
ಕಾಮಿಸದೆ ಕಲ್ಪಿಸದೆ
ಚಿಂತಿಸದೆ ಭಾವಿಸಿದೆ
ಕೊಡಬಲ್ಲರು ಕೂಡಲಚೆನ್ನಸಂಗಾ
ನಿಮ್ಮ ಶರಣರು

೪೦೧

ಕಾಯ ಕರ್ರನೆ ಕಂದಿದಡೇನಯ್ಯಾ
ಕಾಯ ಮಿರ್ರನೆ ಮಿಂಚಿದಡೇನಯ್ಯಾ
ಅಂತರಂಗ ಶುದ್ಧವಾದ ಬಳಿಕ

ಚನ್ನಮಲ್ಲಿಕಾರ್ಜುನಯ್ಯಾ
ನೀನೊಲಿದ ಕಾಯವು ಹೇಗಿದ್ದರೇನು

೪೦೨
ಕಾಯ ನಿಮ್ಮ ದಾನ
ಜೀವ ನಿಮ್ಮದಾನ
ಕಾಯ ಜೀವ ಉಳ್ಳಲ್ಲಿಯೇ
ನಿಮ್ಮ ಪೂಜಿಸದ ನಾಯಿಗಳನೇನೆಂಬೆ
ಹೇಳ ರಾಮನಾಥ

೪೦೩
ಕಾಯ ಬ್ರಹ್ಮಚಾರಿಯಾದಡೇನಯ್ಯಾ
ಆಸೆ ಬ್ರಹ್ಮಚಾರಿಯಾಗದನ್ನಕ್ಕರ
ಶಬ್ದ ಮೌನಿಯಾದಡೇನಯ್ಯಾ
ನೆನಹು ಮೌನಿಯಾಗದನ್ನಕ್ಕರ
ತನು ಬೋಳಾದಡೇನಯ್ಯಾ
ಮನ ಬೋಳಾಗದನ್ನಕ್ಕರ
ಇದು ಕಾರಣ
ಕೂಡಲಚೆನ್ನಸಂಗಯ್ಯಾ
ನಿಮ್ಮ ಶರಣಸ್ಥಲವಾರಿಗೆಯೂ ಅಳವಡದು

೪೦೪
ಕಾಯ ಭ್ರಮೆಯಿಂದ ಕೈಲಾಸ
ಜೀವ ಭ್ರಮೆಯಿಂದ ಮಹದ ಕೂಟವೆಂಬುದು
ಕಾಯದ ಜೀವದ ಭೇದವನರಿತಲ್ಲಿ
ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ
ಇದು ನಿಶ್ಚಯದ ಕೂಟ
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನಲ್ಲಿ

೪೦೫
ಕಾಯ ಸಮಾಧಿಯನೊಲ್ಲೆ
ನೆನಹು ಸಮಾಧಿಗೆ ನಿಲ್ಲೆ
ಕೈಲಾಸವೆಂಬ ಭವಸಾಗರವನೊಲ್ಲೆ

ನೀ ಎನ್ನ ಅಲ್ಲಿಗೆ ಇಲ್ಲಿಗೆ ಎಂದೆಳೆಯದೆ
ನಿನ್ನಲ್ಲಿಗೆ ಕೂಟಸ್ಥವ ಮಾಡು
ನಿಃಕಳಂಕ ಮಲ್ಲಿಕಾರ್ಜುನಾ

೪೦೬

ಕಾಯಕಕ್ಕಾರದೆ ಮೈಸೋಂಬತನದಿಂದ
ಬೇರೆ ಕೂಳ ಗಳಿಸಲಾರದೆ ಹಸಿದಿಪ್ಪರಯ್ಯಾ
ಉಡಲು ಸೀರೆಯ ಗಳಿಸಲಾರದೆ ಕಚ್ಚುಟವ ಕಟ್ಟಿಕೊಂಡಿಪ್ಪರಯ್ಯಾ
ಮೀಯಲೆಣ್ಣೆಯ ಗಳಿಸಲಾರದೆ ಮಂಡೆ ಬೋಳಾಗಿಪ್ಪರಯ್ಯಾ
ದಿಟದಿಂದ ಬಿಡಿಸದೆ
ನಿಸ್ಸಂಸಾರದ ಸಟೆಯನವಧರಿಸಿಕೊಂಡಿಪ್ಪವರಿಗೆ ಆನಂಜುವೆ
ಸಕಳೇಶ್ವರದೇವಾ

೪೦೭

ಕಾಯಕದಲ್ಲಿ ನಿರತನಾದಡೆ
ಗುರುದರ್ಶನವಾದಡೂ ಮರೆಯಬೇಕು
ಲಿಂಗಪೂಜೆಯಾದಡೂ ಮರೆಯಬೇಕು
ಜಂಗಮ ಮುಂದೆ ನಿಂದಿದ್ದಡೂ
ಹಂಗ ಹರಿಯಬೇಕು
ಕಾಯಕವೆ ಕೈಲಾಸವಾದ ಕಾರಣ
ಅಮರೇಶ್ವರಲಿಂಗವಾಯಿತ್ತಾದಡೂ ಕಾಯಕದೊಳಗು

೪೦೮

ಕಾಯಕ್ಕೆ ಕರ್ಮ ಗುರುವಾಗಬೇಕು
ಉಭಯ ವೇಧಿಸಿ ನಿಂದಲ್ಲಿ
ಸ್ವಾನುಭಾವ ಸನ್ನದ್ಧನಾಗಿ ಗುರುವಾಗಬೇಕು
ಆತನನುಜ್ಞೆಯಿಂದ ಬಂದ ಚಿತ್ತದ ಗೊತ್ತಿನ ಕುರುಹು
ಅದೆ ವಸ್ತು ನಿಶ್ಚಯ
ಸದಾಶಿವಮೂರ್ತಿಲಿಂಗವು ತಾನಾಗಿ

೪೦೯
ಕಾಯಕ್ಕೆ ಕಾಹ ಕೊಡುವರಲ್ಲದೆ
ಮನಕ್ಕೆ ಕಾಹ ಕೊಡುವರೆ
ಕೆಳದಿ
ಇಂತಪ್ಪ ನಲ್ಲನನೆಲ್ಲಿಯೂ ಕಾಣೆ
ಇಂತಪ್ಪ ಪುರುಷನನೆಲ್ಲಿಯೂ ಕಾಣೆ
ಇಂತಪ್ಪ ಚೋದ್ಯವನೆಲ್ಲಿಯೂ ಕಾಣೆ
ಸದ್ಗುಣದ ಕಾಹನು ಮನಕ್ಕೆ ಕೊಟ್ಟನು
ಉರಿಲಿಂಗದೇವನು
ಅತಿಚೋದ್ಯವೆನಗೆ

೪೧೦
ಕಾಯಕ್ಕೆ ನೆಳಲಾಗಿ ಕಾಡಿತ್ತು
ಮಾಯೆ
ಪ್ರಾಣಕ್ಕೆ ಮನವಾಗಿ ಕಾಡಿತ್ತು
ಮಾಯೆ
ಮನಕ್ಕೆ ನೆನಹಾಗಿ ಕಾಡಿತ್ತು
ಮಾಯೆ
ನೆನಹಿಂಗೆ ಅರುಹಾಗಿ ಕಾಡಿತ್ತು
ಮಾಯೆ
ಅರುಹಿಂಗೆ ಮರಹಾಗಿ ಕಾಡಿತ್ತು
ಮಾಯೆ
ಜಗದ ಜಂಗುಳಿಗೆ ಬೆಂಗೋಲನೆತ್ತಿ ಕಾಡಿತ್ತು
ಮಾಯೆ
ಚೆನ್ನಮಲ್ಲಿಕಾರ್ಜುನಾ
ನೀನೊಡ್ಡಿದ ಮಾಯೆಯನಾರಿಗೂ ಗೆಲಬಾರದು

೪೧೧
ಕಾಯದ ಕಾನನದಲ್ಲಿ ಭಾವದ ನವಿಲು ನಲಿದಾಡುತ್ತಿರೆ
ಒಂದು ಹಾವಿನ ಮರಿ ಬಂದು ಹಾಯಿತ್ತು

ನವಿಲಂಜಿ ಹೋಗುತ್ತಿರಲಾಗಿ ಹಾವಿನ ಮರಿಯ ನವಿಲಗರಿ ನುಂಗಿತ್ತು
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಲಿಂಗವು
ಚೋದ್ಯವಾದ ಕಾರಣ

೪೧೨

ಕಾಯದ ಲಜ್ಜೆಯ ಕಲ್ಪಿತವ ಕಳೆದು
ಜೀವದ ಲಜ್ಜೆಯ ಮೋಹವನಳಿದು
ಮನದ ಲಜ್ಜೆಯ ನೆನಹ ಸುಟ್ಟು
ಭಾವದ ಕೂಟ ಬತ್ತಲೆಯೆಂದರಿದು
ತವಕದ ಸ್ನೇಹ ವ್ಯವಹಾರಕ್ಕೆ ಹುಗದು
ಕೂಡಲಸಂಗಮದೇವಯ್ಯಾ
[ಎನ್ನ ಹೆತ್ತ ತಾಯಿ ಮಹದೇವಿಕ್ಕನ ನಿಲವ ನೋಡಯ್ಯಾ ಪ್ರಭುವೆ]

೪೧೩

ಕಾಯದಿಂದ ಗುರುವ ಕಂಡೆ
ಕಾಯದಿಂದ ಲಿಂಗವ ಕಂಡೆ
ಕಾಯದಿಂದ ಜಂಗಮವ ಕಂಡೆ
ಕಾಯದಿಂದ ಪ್ರಸಾದವ ಕಂಡೆ
ಕಾಯದಿಂದ ಸಕಳೇಶ್ವರದೇವರ ಪೂಜಿಸುವಲ್ಲಿ
ಉತ್ತರಸಾಧಕನಾದೆಯಲ್ಲಾ ಎಲೆ ಕಾಯವೆ

೪೧೪

ಕಾಯದೊಳಗೆ ಕಾಯವಾಗಿ
ಪ್ರಾಣದೊಳಗೆ ಪ್ರಾಣವಾಗಿ
ಮನದೊಳಗೆ ಮನವಾಗಿ
ಭಾವದೊಳಗೆ ಭಾವವಾಗಿ
ಅರಿವಿನೊಳಗೆ ಅರುಹಿನ ತಿರುಳಾಗಿ
ಮರವು ಮಾರಡೆಯಿಲ್ಲದೆ ನಿಜಪದವು ಸಾಧ್ಯವಾದ ಬಳಿಕ
ಆವುದು ವರ್ಮ ಆವುದು ಕರ್ಮ
ಆವುದು ಬೋಧೆ
ಆವುದು ಸಂಬಂಧ

ನಾ ಹೇಳಲಿಲ್ಲ ನೀ ಕೇಳಲಿಲ್ಲ
ಅದೇನು ಕಾರಣವೆಂದರೆಬೆಸಗೊಂಬರೆ ತೆರಹಿಲ್ಲವಾಗಿ
ಗೊಹೇಶ್ವರಲಿಂಗದಲ್ಲಿ ತೆರೆಮರೆ ಯಾವುದು ಹೇಳಯ್ಯ [ಬಸವಣ್ಣ]

೪೧೫
ಕಾಯವ ಮರೆದು ಜೀವವನರಿಯಬೇಕು
ಜೀವವ ಮರೆದು ಜ್ಞಾನವನರಿಯಬೇಕು
ಜ್ಞಾನವ ಮರೆದು ಬೆಳಗನರಿಯಬೇಕು
ಬೆಳಗಿನ ಮರೆಯ ಈಶಾನ್ಯಮೂರ್ತಿ
ಮಲ್ಲಿಕಾರ್ಜುನಲಿಂಗವನರಿಯಬೇಕು

೪೧೬
ಕಾಯವಳಿಯಲಾಗಿ ಜೀವನ ಚೇತನಕ್ಕೆ ಸ್ಥಾಪ್ಯವಿಲ್ಲ
ಜೀವ ಹಿಂಗೆ ಘಟವೊಂದು ದಿನಕ್ಕೆ ಆಶ್ರಯಿಸಿ ನಿಲಲರಿಯದು
ಒಂದ ಬಿಟ್ಟೊಂದ ಹಿಡಿವುದಕ್ಕೆ ಎಡೆತೆರಪಿಲ್ಲ
ಇದು ಕಾರಣದಲ್ಲಿ
ಇಷ್ಟಕ್ಕೂ ಪ್ರಾಣಕ್ಕೂ ಬೆಚ್ಚಂತಿರಬೇಕು
ನಿಂದ ಇರವಿನಲ್ಲಿ ಸಂದು ಮತ್ತೊಂದು ವಿಚಾರಿಸಿಹೆನೆಂಬ
ಸಂದೇಹವಳಿದಲ್ಲಿ
ತೋರುತ್ತದೆ ಬೆಳಗು
ಸದಾಶಿವಮೂರ್ತಿಲಿಂಗದಲ್ಲಿ

೪೧೭
ಕಾಯವಿದ್ದಲ್ಲದೆ ಜೀವಕ್ಕೆ ಬೆಲೆಯಿಲ್ಲ
ಜೀವವಿದ್ದಲ್ಲದೆ ಜ್ಞಾನಕ್ಕೆ ಕುರುಹಿಲ್ಲ
ಜ್ಞಾನವಿದ್ದಲ್ಲದೆ ಬೆಳಗಿಗೆ ಒಡಲಿಲ್ಲ
ಒಂದಕ್ಕೊಂದ ಹಿಂಗಿ ಕಾಬ ಠಾವ ಹೇಳಾ
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೆ

೪೧೮
ಕಾಯವಿದ್ದು ಕಾಬುದು ವಿಜ್ಞಾನ
ಜೀವವಿದ್ದು ಕಾಬುದು ಸುಜ್ಞಾನ

ಎರಡಳಿದು ತೋರಿಕೆಯಲ್ಲಿ ಕಾಬುದು ಪರಂಜ್ಯೋತಿಜ್ಞಾನ
ಇಂತೀ ಮೂರು ಮುಖವ ಏಕವ ಮಾಡಿ
ಬೇರೊಂದು ಕಾಬುದು ಪರಮಪ್ರಕಾಶಜ್ಞಾನ
ಇಂತೀ ಅಂತರ ಪಟಂತರದಲ್ಲಿ
ನಿಂದು ನೋಡುವ ಸಂದೇಹವ ಹರಿದ ಸಂದಿನಲ್ಲಿ
ಕುಂದದ ಬೆಳಗು ತೋರುತ್ತದೆ
ಸದಾಶಿವಮೂರ್ತಿಲಿಂಗದಲ್ಲಿ

೪೧೯

ಕಾಯವೆಂಬ ಡಕ್ಕೆ
ಕ್ರೀ ಭಾವವೆಂಬ ಹೊದಕೆ
ಅರಿವೆಂಬ ನೇಣಿನಲ್ಲಿ
ಸ್ಥೂಲಸೂಕ್ಷ್ಮವೆಂಬ ಹೊಡೆಚೆಂಡು ಕಟ್ಟಿ
ಹೊಯ್ಯುತ್ತಿದೆ ಡಕ್ಕೆ
ಕಾಲಾಂತಕಭೀಮೇಶ್ವರಲಿಂಗವಲ್ಲದಿಲ್ಲಾ ಎಂದು

೪೨೦

ಕಾಯವೆಂಬ ಡಕ್ಕೆಯ ಮೇಲೆ
ಜೀವವೆಂಬ ಹೊಡೆಚೆಂಡು ಬೀಳೆ
ತ್ರಿವಿಧವ ತಾ ತಾಯೆಂಬ ಆಸೆ ಹಿಂಡಿ ಡಿಂಡಿಯೆನುತ್ತಿದೆ
ಇಂತೀ ಉಲುಹಿನ ಭೇಧದಲ್ಲಿ
ಹೊಲಬುದಪ್ಪದೆ ಗೆಲಬೇಕು ಕಾಲವೆಂಬ ಮಾರಿಯ
ಕಾಲಾಂತಕ ಭೀಮೇಶ್ವರಲಿಂಗಪನರಿಯಬಲ್ಲಡೆ

೪೨೧

ಕಾಯವೆಂಬ ಪಟ್ಟಣಕ್ಕೆ ಸತ್ಯವೆಂಬ ಕೋಟೆಯನಿಕ್ಕಿ
ಧರ್ಮಾರ್ಥಕಾಮಮೋಕ್ಷಂಗಳೆಂಬುಕ್ಕಡದವರೆಚ್ಚತ್ತಿರಿ
ಭಯ ಘನ ಭಯ ಘನ
ಅಜ್ಞಾನವೆಂಬ ತೀವ್ರ ಕತ್ತಲೆ
ಕರ ಘನ ಕರ ಘನ
ಒಂಬತ್ತು ಬಾಗಿಲ ಜತನವ ಮಾಡಿ

ಜ್ಞಾನಜ್ಯೋತಿಯ ಪ್ರಬಲವ ಮಾಡಿ ಪ್ರಬಲವ ಮಾಡಿ
ಐವರು ಕಳ್ಳರು ಕನ್ನವ ಕೊರೆವುತ್ತೈದಾರೆ
ಸುಯಿಧಾನವಾಗಿರಿ
ಜೀವಧನವ ಜತನವ ಮಾಡಿ ಜತನವ ಮಾಡಿ
ಬಳಿಕಿಲ್ಲ ಬಳಿಕಿಲ್ಲ
ಆ ಪಟ್ಟಣದ ಮೂಲಸ್ಥಾನದ ಶಿಖರದ ಮೇಲಣ
ಬಾಗಿಲ ತೆರದು ನಡೆವುದೆ ಸುಪಥ ಸ್ವಯಂಭುನಾಥನಲ್ಲಿರೆ
ಇದನರಿತು ಮಹಾಮಹಿಮ ಅಮರಗುಂಡದ
ಮಲ್ಲಿಕಾರ್ಜುನದೇವರಲ್ಲಿ
ಎಚ್ಚರಿಕೆಗುಂದದಿರಿ ಎಚ್ಚರಿಕೆಗುಂದದಿರಿ

**೪೨೨**

ಕಾಯವೊಂದು ಪ್ರಾಣವೊಂದು
ಭಾವವೊಂದು ನಿರ್ಭಾವವೊಂದು
ಒಂದಲ್ಲದೆ ಎರಡುಂಟೆ
ಗುರುವೊಂದು ಲಿಂಗವೊಂದು ಉಪದೇಶವೊಂದು
ಕೂಡಲಚೆನ್ನಸಂಗಯ್ಯನ ಶರನ ಬಸವಣ್ಣನ ಗರುಡಿಯಲ್ಲಿ
[ಇಬ್ಬರಿಗೆಯೂ ಅಭ್ಯಾಸವೊಂದೇ ಕಾಣಾ ಪ್ರಭುವೆ]

**೪೨೩**

ಕಾಯ ಹೇಯಸ್ಥಲವೆಂದು
ಜೀವ ಹೇಯಸ್ಥಲವೆಂದು
ಭಾವ ಹೇಯಸ್ಥಲವೆಂದು
ಇಂತಿವರೊಳಗಾದ ಸರ್ವಹೇಯಸ್ಥಲವೆಂದು ನುಡಿವಾಗ
ಜ್ಞಾನವೇತರ ನೆಮ್ಮುಗೆಯಿಂದ ರೂಪಾಯಿತ್ತು
ತೊರೆಯ ಹಾವುದಕ್ಕೆ ಹರುಗೋಲು ಲಘು ನೆಮ್ಮುಗೆಗಳಲ್ಲಿ
ಹಾಯ್ವ ತೆರದಂತೆ
ಅವು ಹೇಯವೆಂಬುದಕ್ಕೆ ತೆರಹಿಲ್ಲ
ಅವು ತೊರೆಯ ತಡಿಯಲ್ಲಿಯ ಲಘು
ಹರುಗೋಲು ಉಳಿದ ಮತ್ತೆ
ಅಡಿವಜ್ಜೆಗುಂಟೆ ಅವರ ಹಂಗು

ತಾನರಿದಲ್ಲಿ ಅಹುದಲ್ಲವೆಂದು ಪಡಿಪುಚ್ಚವಿಲ್ಲ
ತಾ ಸದ್ಯೋಜಾತಲಿಂಗದಲ್ಲಿ ನಾಶವಾಗಿ
ತನ್ನಲ್ಲಿ ವಸ್ತು ವಿನಾಶವಾದ ಕಾರಣ

೪೨೪
ಕಾಯಿ ಒಂದರಲ್ಲಿ ಶಾಖೆ ಹಲವಹ ತೆರದಂತೆ
ಅರಿವು ಒಂದೆ ರೂಪು ಭಿನ್ನಂಗಳಾಗಿ ತೋರುವ ತೆರದಂತೆ
ಘಟದ ವಾರಿಯಲ್ಲಿ ತೋರುವ ಇಂದುವಿನಂತೆ
ಅದೊಂದೆ ಭೇದ
ಏಣಾಂಕಧರ ಸೋಮೇಶ್ವರಲಿಂಗದಲ್ಲಿ

೪೨೫
ಕಾರ ಮೇಘವೆದ್ದು ಧಾರಾವರ್ತ ಸುರಿವಾಗ
ಧಾರಿಣಿಯೆಲ್ಲವು ಮುಳುಗಿತ್ತು
ನೋಡಾ
ಕಾರಿರುಳ ಕಣ್ಣೊಳಗೆ ಸೂರ್ಯರನೇಕರು ಮೂಡಿ
ದಾರಿಯ ಹೊಲಬೆಂಬುದು ಕೆಟ್ಟಿತ್ತು
ನೋಡಾ
ಪೂರಾಯ ಗಾಯದಲ್ಲಿ ಸಾಯಕೊಂದಲ್ಲದೆ
ಸೂರ್ಯರನೇಕರು ಮಡಿಯರು
ಗುಹೇಶ್ವರ

೪೨೬
ಕಾಲ ಸಡಗರ ಕೈಯಲದೆ
ಕೈಯ ಸಡಗರ ಕಂಗಳಲದೆ
ಅದೇನು ಕಾರಣವೆಂದಡೆ
ಕಂಗಳೇ ಕಾರಣವಾಗಿ
ಒಂದು ಮಾತಿನೊಳಗೆ ವಿಚಾರವದೆ
ಕನ್ನಡಿಯೊಳಗೆ ಕಾರ್ಯವದೆ
ಇದೇನು ಕಾರಣ ತಿಳಿಯಲರಿಯರು
ಹೇಳಾ ಗುಹೇಶ್ವರ

೪೨೭
ಕಾಲವಶದಿಂದ ಕಾಲನೆಡಹಿದಡೆ
ಹಾಲುಗುಡಿದಂತೆ ಪರಿಣಾಮಿಸಬೇಕು
ಕಾಲಕ್ಕೆ ಬೇಸತ್ತು ಬೆಂಬೀಳಲಾಗದು
ಕಾಲ ಮುನ್ನಾದಿಯಲ್ಲಿ ಬಂದುದಯ್ಯ
ಕಾಲನ ಬಾಯಿಗೆ ಒಳಗಾಗದ ಮುನ್ನ
ಕಾಲಾಂತಕ ಸಕಳೇಶ್ವರದೇವ ಶರಣೆಂದು ಬದುಕಿರಯ್ಯಾ

೪೨೮
ಕಾಲುಗಳೆರಡೂ ಗಾಲಿ ಕಂಡಯ್ಯ
ದೇಹವೆಂಬುದೊಂದು ತುಂಬಿದ ಬಂಡಿ ಕಂಡಯ್ಯ
ಬಂಡಿಯ ಹೊಡೆವವರೈವರು ಮಾನಿಸರು
ಒಬ್ಬರಿಗೊಬ್ಬರು ಸಮವಿಲ್ಲಯ್ಯ
ಅದರಿಚ್ಚೆಯನರಿದು ಹೊಡಯದಿದ್ದರೆ
ಅದರಚ್ಚು ಮುರಿಯಿತ್ತು
ಗುಹೇಶ್ವರ

೪೨೯
ಕಾಲೇ ಕಂಭಗಳಾದವೆನ್ನ
ದೇಹವೇ ದೇಗುಲವಾಯಿತ್ತಯ್ಯ
ಎನ್ನ ನಾಲಗೆಯೆ ಘಂಟೆ
ಶಿರ ಸುವರ್ಣದ ಕಳಶ
ಇದೇನಯ್ಯ
ಸರವೆ ಲಿಂಗಕ್ಕೆ ಸಿಂಹಾಸನವಾಗಿದ್ದಿತ್ತಯ್ಯ
ಗುಹೇಶ್ವರ
ನಿಮ್ಮ ಪ್ರಾಣಲಿಂಗಪ್ರತಿಷ್ಠೆ ಪಲ್ಲಟವಾಗದಂತಿದ್ದೆನಯ್ಯ

೪೩೦
ಕಾವುದು ಹುಟ್ಟುವುದು
ಮೀರಿದಡೆ ಹೊಡೆವುದು
ಗಣ್ಣಿನ ಕೋಲಹಿಡಿದು ಗೋವ ಕಾವುತ್ತಿರಲಾಗಿ

ಕಾವಗಣ್ಣಿನಲ್ಲಿ ಕರ್ಮವಡಗಿ
ಕಟ್ಟುವ ಕಗ್ಗಣ್ಣಿನಲ್ಲಿ ಧರ್ಮವಡಗಿ
ಮೀರುವಗಣ್ಣಿನಲ್ಲಿ ವರ್ಮವಡಗಿ
ತ್ರಿವಿಧವನೊಳಕೊಂಡ ಕೋಲು
ಗೋವಿನ ಬೆನ್ನಿನಲ್ಲಿ ಲಯವಾಯಿತ್ತು
ಗೋಪತಿನಾಥ ವಿಶ್ವೇಶ್ವರಲಿಂಗವನರಿಯಲಾಗಿ

೪೩೧
ಕಾಳಮೇಘಮಂದಿರದ ಜಾಳಾಂಧರದ ಮನೆಯಲ್ಲಿ
ಒಬ್ಬ ಸೂಳೆಯ ಬಾಗಿಲಲ್ಲಿ
ಎಂಬತ್ತನಾಲ್ಕು ಲಕ್ಷ ಮಿಂಡಗಾರರು
ಅವಳ ಸಂಗದಲ್ಲಿ ಇರಲಮ್ಮರು
ಅವಳು ತಾವೇ ಬರಲೆಂದು ಕರೆಯದಿಹಳು
ಅವಳಿಗೆ ಯೋನಿ ಹಿಂದು ಅಂಡ ಮುಂದು
ಕಣ್ಣು ಅಂಗಾಲಿನಲ್ಲಿ ತಲೆ ಮುಂಗಾಲಿನಲ್ಲಿ
ಕಿವಿ ಭುಜದಲ್ಲಿ ಕೈ ಮಂಡೆಯ ಮೇಲೆ
ಮೂಗು ಹಣೆಯಲ್ಲಿ ಮೂಗಿನ ದ್ವಾರ ಉಂಗುಷ್ಠದಲ್ಲಿ
ಬಸುರು ಬಾಯಲ್ಲಿ ನಡೆವಳು ತಲೆ ಮುಂತಾಗಿ ಕಾಲು ಮೇಲಾಗಿ
ಅವಳ ಕೂಡುವ ಪರಿಯ ಹೇಳಾ
ಅಲೇಖನಾದ ಶೂನ್ಯ ಗೆದ್ದೆಯಲ್ಲಾ ಕಲ್ಲಿನ ಹೊಟ್ಟೆಯ ಮರೆಯಲ್ಲಿ

೪೩೨
ಕಾಳಿಯ ಕಂಕಾಳದಿಂದ ಮುನ್ನ
ತ್ರಿಪುರಸಂಹಾರದಿಂದ ಮುನ್ನ
ಹರಿ ವಿರಿಂಚಿಗಳಿಂದ ಮುನ್ನ
ಉಮೆಯ ಕಲ್ಯಾಣದಿಂದ ಮುನ್ನ
ಮುನ್ನ ಮುನ್ನ ಮುನ್ನ
ಅಂದಿಂಗೆಳೆಯ ನೀನು ಹಳೆಯ ನಾನು
ಮಹಾದಾನಿ ಕೂಡಲಸಂಗಮದೇವಾ

೪೩೩
ಕಾಳೆಗದಲ್ಲಿ ಹೋಗದಿರಯ್ಯ
ಕೋಲು ಬಂದು ನಿಮ್ಮ ತಾಗುಗು
ಆರು ದರುಶನಕ್ಕೆ ತೋರದಿರಿ
ಸೂರೆಗೊಂಡಹವು ನಿಮ್ಮುವ
ನಾಲ್ಕು ವೇದ ಹದಿನಾರು ಶಾಸ್ತ್ರವೆಂಬರ ಬೆನ್ನುಹತ್ತದಿರು
ಬೇರೆ ತೀರ್ಥ ಜಾತ್ರೆಯೆಂಬವರ ಕೊಂಡು ಆರಡಿತನ ಬೇಡ
ಪುಣ್ಯಪಾಪವೆಂಬೆರಡು ಭಂಡವ ಬೆನ್ನಿಲಿಕ್ಕಿಕೊಂಡು ಬಾರದಿರು
ನಿನ್ನಾತ್ಮನ ನೀ ತಿಳಿ
ಜಗ ನಿನ್ನೊಳಗೆಂದನಂಬಿಗ ಚವುಡಯ್ಯ

೪೩೪
ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ
ಏರಿಲ್ಲದ ಗಾಯದಲ್ಲಿ ನೊಂದೆನವ್ವಾ
ಸುಖವಿಲ್ಲದೆ ಧಾವತಿಗೊಂಡೆನವ್ವಾ
ಚೆನ್ನಮಲ್ಲಿಕಾರ್ಜುನದೇವಂಗೊಲಿದು
ಬಾರದ ಭವಂಗಳಲ್ಲಿ ಬಂದೆನವ್ವಾ

೪೩೫
ಕಿಚ್ಚು ದೈವವೆಂದು ಹವಿಯ ಬೇಳುವರು
ಕಿಚ್ಚು ಹಾರುವರ ಮನೆಯ ಸುಡುವಾಗ
ಬಚ್ಚಲ ಕೆಸರ ಬೀದಿಯ ಧೂಳ ಚೆಲ್ಲಿ
ಬೊಬ್ಬಿರಿದೆಲ್ಲರ ಕರೆವರು
ಸಿಮ್ಮಲಿಗೆಯ ಚೆನ್ನರಾಮನ ಮಂತ್ರ ತಪ್ಪಿದ ಬಳಿಕ
ವಂದಿಸುವುದ ಬಿಟ್ಟು ನಂದಿಸುತ್ತಿದ್ದರು

೪೩೬
ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು
ಕಿಚ್ಚೆದ್ದು ಸುಡುವಾಗ
ಬಚ್ಚಲ ನೀರ ಬೀದಿಯ ದೂಳ ಹೊಯ್ದು

ಬೊಬ್ಬಿಟ್ಟೆಲ್ಲರ ಕರೆವರಯ್ಯಾ
ಕೂಡಲಸಂಗಮದೇವಾ
ವಂದನೆಯ ಮರೆದು ನಿಂದಿಸುತ್ತಿದ್ದರು

೪೩೭
ಕಿಡಿ ಕಿಡಿ ಕೆದರಿದಡೆ
ಎನಗೆ ಹಸಿವು ತೃಷೆಯಡಗಿತ್ತೆಂಬೆನು
ಮುಗಿಲು ಹರಿದು ಬಿದ್ದಡೆ
ಎನಗೆ ಮಜ್ಜನಕ್ಕೆರೆದರೆಂಬೆನು
ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬೆನು
ಚೆನ್ನಮಲ್ಲಿಕಾರ್ಜುನಯ್ಯಾ
ಶಿರ ಹರಿದು ಬಿದ್ದಡೆ
ಪ್ರಾಣ ನಿಮಗರ್ಪಿತವೆಂಬೆನು

೪೩೮
ಕೀಳು ಡೋಹರ ಕಕ್ಕ
ಕೀಳು ಮಾದರ ಚೆನ್ನ
ಕೀಳು ಓಹಿಲದೇವ
ಕೀಳು ಉದ್ಭಟಯ್ಯ
ಕೀಳಿಂಗಲ್ಲದೆ ಹಯನು ಕರೆಯದು
ಕಾಣಾ ರಾಮನಾಥ

೪೩೯
ಕುಂಬಾರನ ಆವಿಗೆಯಲ್ಲಿ ಕುಂಬಾರನಿಲ್ಲ
ಕಂಬಾರನ ಕಲಶಂಗಳಲ್ಲಿ ಕಂಬಾರನಿಲ್ಲ
ಆವಿಗೆ ಕಲಶಂಗಳಲ್ಲಿ ಅಸ್ತಿತ್ವ ಉಂಟಾಗಿಹ
ಕುಂಬಾರ ಕಂಬಾರನಂತಿಪ್ಪ ನೋಡಾ
ಈ ಪ್ರಪಂಚದಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನ

೪೪೦
ಕುಕ್ಕೊಂಬಿನ ಕಾಗೆಯಂತೆ ಜೀವ ಎತ್ತ ಹಂಬಲಿಸಿದಡೂ
ಆಸೆಯೆಂಬ ಗೊತ್ತಿಗೆ ಬಹವರೆಲ್ಲರು ನಿಶ್ಚಯವನರಿಯಬಲ್ಲರೆ

ತುತ್ತು ಕುತ್ತಿಗಾಗಿ ವೇಷವ ತೊಟ್ಟಿಹ
ಚಿತ್ತಶುದ್ಧಾತ್ಮವಿಲ್ಲದವರ ಅರ್ಕೇಶ್ವರಲಿಂಗನೊಪ್ಪನವರ

೪೪೧
ಕುಡಿವ ನೀರೆನ್ನಬಹುದೆ
ಹುಡುಕು ನೀರಲದ್ದುವಾಗ
ಆಡುವ ಕಿಚ್ಚೆನ್ನಬಹುದೆ
ಮನೆಯ ಸುಡುವಾಗ
ಒಡಲು ತನ್ನದೆನ್ನಬಹುದೆ
ಪುಣ್ಯ ಪಾಪವನುಂಬಾಗ
ಒಡಲ ಜೀವನೆನ್ನಬಹುದೆ
ಇಕ್ಕಿಹೋಹಾಗ
ಇವನೊಡೆಬಡಿದು ಕಳೆಯೆಂದಾತನಂಬಿಗ ಚವುಡಯ್ಯ

೪೪೨
ಕುರಿಕೋಳಿ ಕಿರುಮೀನ ತಿಂಬವರ
ಊರೊಳಗೆ ಇರು ಎಂಬರು
ಅಮೃತಾನ್ನವ ಕರೆವ ಗೋವ ತಿಂಬವರ
ಊರಿಂದ ಹೊರಗಿರು ಎಂಬರು
ಆ ತನು ಹರಿಗೋಲಾಯಿತ್ತು
ಬೊಕ್ಕಣ ಸಿದಿಕೆ ಬಾರುಕೋಲು ಪಾದರಕ್ಷೆ
ದೇವರ ಮುಂದೆ ಬಾರಿಸುವುದಕ್ಕೆ ಮದ್ದಳೆಯಾಯಿತ್ತು
ಈ ಬುದ್ಧಲಿಕೆಯೊಳಗಣ ತುಪ್ಪವ ಶುದ್ಧಮಾಡಿ
ತಿಂಬ ಗುಜ್ಜ ಹೊಲೆಯರ ಕಂಡಡೆ
ಉದ್ದನ ಚಮ್ಮಾಳಿಗೆಯ ತೆಕ್ಕೊಂಡು
ಬಾಯ ಕೊಯ್ಯುವೆನು ಎಂದಾತ ನಮ್ಮ ಅಂಬಿಗರ ಚವುಡಯ್ಯ

೪೪೩
ಕುರಿಯ ಹೆಸರು ಒಂದೆ ಅಗ್ನಿಯ ಹೆಸರು ಒಂದೆ ಆದಲ್ಲಿ
ಅಗ್ನಿಯ ಸಾಮರ್ಥ್ಯ ಕುರಿಗೆ ಬಂದೀತೇನಯ್ಯಾ
ಕಪ್ಪೆಯ ಹೆಸರು ಹಾವಿನ ಹೆಸರು ಒಂದೆ ಆದಲ್ಲಿ

ಹಾವಿನ ಸಾಮರ್ಥ್ಯ ಕಪ್ಪೆಗೆ ಬಂದೀತೇನಯ್ಯಾ
ನನ್ನ ಹೆಸರು ನಮ್ಮ ಶಿವಶರಣರ ಹೆಸರು ಒಂದೆ ಆದಲ್ಲಿ
ಅವರ ಸಾಮರ್ಥ್ಯ ಎನಗೆ ಬಂದೀತೇನಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ

**೪೪೪**

ಕುರಿವಿಂಡು ಕಬ್ಬಿನ ಉಲಿವ ತೋಟವ ಹೊಕ್ಕು
ತೆರನನರಿಯದೆ ತನಿರಸದ
ಹೊರಗಣೆಲೆಯನೆ ಮೆಲಿದುವು
ನಿಮ್ಮನರಿವ ಮದಕರಿಯಲ್ಲದೆ
ಕುರಿ ಬಲ್ಲುದೆ
ಕೂಡಲಸಂಗಮದೇವಾ

**೪೪೫**

ಕುರುಹುಳ್ಳನ್ನಕ್ಕ ಸಮಯದ ಹಂಗು
ಅರಿದಹೆನೆಂಬನ್ನಕ್ಕ ಆತ್ಮನ ಹಂಗು
ಅಲ್ಲ ಅಹುದೆಂಬನ್ನಕ್ಕ ಎಲ್ಲರ ಹಂಗು
ಗುಹೇಶ್ವರನೆಂಬನ್ನಕ್ಕ ಲಿಂಗದ ಹಂಗು ಬೇಕು [ಘಟ್ಟಿವಾಳಣ್ಣ]

**೪೪೬**

ಕುರುಹೆಂಬೆನೆ ಕಲ್ಲಿನಲ್ಲಿ ಹತ್ತಿದ ಹಾವಸೆ
ಅರಿವೆಂಬೆನೆ ಕಾಣಬಾರದ ಬಯಲು
ಒಂದನಹುದು ಒಂದನಲ್ಲಾಯೆಂದು ಬಿಡಬಾರದು
ಬಿಟ್ಟಡೆ ಸಮಯವಿಲ್ಲ
ಜಿಡ್ಡ ಹಿಡಿದಡೆ ಜ್ಞಾನವಿಲ್ಲ
ಉಭಯದ ಗುಟ್ಟಿನಲ್ಲಿ ಕೊಳೆವುತ್ತಿದೇನೆ
ಎಂದನಂಬಿಗ ಚವುಡಯ್ಯ

**೪೪೭**

ಕುಲದಲಧಿಕನು ಹೋಗಿ ಹೊಲೆಗೇರಿಯಲ್ಲಿ ಮನೆಯ ಕಟ್ಟಿದರೆ
ಕುಲಕೆಡದೆಯಿಪ್ಪ ಪರಿಯ ನೋಡಾ

ಆತನ ಕುಲದವರೆಲ್ಲರು ಮುಖವನೋಡಲೊಲ್ಲದೈದಾರೆ
ಕುಲವುಳ್ಳವರೆಲ್ಲರು ಕೈವಿಡಿದರು
ಕುಲಗೆಟ್ಟವನೆಂದು ತಿಳಿದು ವಿಚಾರಿಸಲು
ಹೊಲೆಗಟ್ಟು ಹೋಯಿತ್ತು ಕಾಣಾ
ಗುಹೇಶ್ವರ

೪೪೮
ಕುಲವೆರಡಲ್ಲದೆ ಹಲವಿಲ್ಲ
ದಿನವೆರಡಲ್ಲದೆ ಸಪ್ತದಿನವಿಲ್ಲ
ಅರಿವು ಮರವೆಯೆರಡಲ್ಲದೆ
ಬೇರೊಂದು ತೊಡಿಗೆಯಿಲ್ಲ
ಅರ್ಕೇಶ್ವರಲಿಂಗ ಏಕರೂಪನಲ್ಲದೆ
ಬಹುನಾಮದವನಲ್ಲ

೪೪೯
ಕುಲಸ್ವಾಮಿ ನಿಮ್ಮವ ಒಲಿವುದ ಕಂಡಡೆ
ತಲೆವಾಗುವೆ ಕಾತ ಕಳವೆಯಂತೆ
ಕುಲಜ ನಾನೆಂದು ತಲೆವಾಗದಿದ್ದಡೆ ಸಲೆ
ಶೂಲದ ತಲೆಯಯ್ಯಾ ರಾಮನಾಥ

೪೫೦
ಕೂಟದಿಂದ ಕೂಸು ಹುಟ್ಟುವಡೆ
ಬ್ರಹ್ಮನ ಆಟಕೋಟಲೆಯೇಕೆ
ಸ್ಥಿತಿ ಆಟದಿಂದ ನಡೆವಡೆ
ವಿಷ್ಣುವಿನ ಭೂತಹಿತವೇಕಯ್ಯಾ
ಘಾತಕದಿಂದ ಕೊಲುವಡೆ
ರುದ್ರನ ಆಸುರವೇತಕ್ಕೆ
ಇಂತಿವೆಲ್ಲವೂ ಜಾತಿಯುಕ್ತವಲ್ಲದೆ
ತಾ ಮಾಡುವ ನೀತಿಯುಕ್ತವಲ್ಲ
ಇದಕಿನ್ನಾವುದು ಗುಣ ಭೇದಿಸಾ
ಗೂಡಿನ ಗುಮ್ಮಟನೊಡೆಯ ಅಗಮ್ಯೇಶ್ವರಲಿಂಗ

೪೫೧
ಕೂಡಿ ಕೂಡುವ ಸುಖದಿಂದ
ಒಪ್ಪಚ್ಚಿ ಅಗಲಿ ಕೂಡುವ ಸುಖ ಲೇಸು
ಕೆಳದಿ
ಒಚ್ಚೊತ್ತಗಲಿದಡೆ ಕಾಣದಿರಲಾರೆ
ಎನ್ನ ದೇವ ಚೆನ್ನಮಲ್ಲಿಕಾರ್ಜುನನಗಲಿಯಗಲದ
ಸುಖವೆಂದಪ್ಪುದೊ

೪೫೨
ಕೂಪರನಗಲುವದು ಆತ್ಮಘಾತುಕವವ್ವಾ
ದಿಬ್ಬವ ತುಡುಕಿದಡೆ
ಕೈ ಬೇವುದಲ್ಲದೆ ಮೈ ಬೇವುದೆ
ಒಲಿದವರನಗಲಿದಡೆ
ಸರ್ವಾಂಗವೂ ಬೇವುದವ್ವಾ
ಮಹಾಲಿಂಗ ಗಜೇಶ್ವರನನಗಲಿ
ಆವುಗೆಯ ಮಧ್ಯದ ಘಟದಂತಾದೆನವ್ವಾ

೪೫೩
ಕೂಸುಳ್ಳ ಸೂಳೆ ಧನದಾಸೆಗೊತ್ತೆಯ ಕೊಂಡಡೆ
ಕೂಸಿಂಗಲ್ಲ ಬೊಜಗಂಗಲ್ಲ
ಕೂಸನೊಮ್ಮೆ ಸಂತವಿಡುವಳು
ಬೊಜಗನನೊಮ್ಮೆ ನೆರೆವಳು
ಧನದಾಸೆ ಬಿಡದು
ಕೂಡಲಸಂಗಮದೇವಾ

೪೫೪
ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ದ್ವಾಪರದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ

ಆಗಲಿ ಮಹಾಪ್ರಸಾದವೆಂದೆನಯ್ಯ
ಕಲಿಯುಗದಲ್ಲಿ ಶ್ರೀಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ
ಆಗಲಿ ಮಹಾಪ್ರಸಾದವೆಂದೆನಯ್ಯ
ಗುಹೇಶ್ವರ
ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾ ಬೆರಗಾದೆನು

**೪೫೫**
ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ
ಸತ್ಯಶುದ್ಧವಿಲ್ಲದುದು ಕಾಯಕವಲ್ಲ
ಆಸೆಯೆಂಬುದು ಭವದ ಬೀಜ
ನಿರಾಸೆಯೆಂಬುದು ನಿತ್ಯಮುಕ್ತಿ
ಉರಿಲಿಂಗಪೆದ್ದಿಗಳರಸನಲ್ಲಿ ಸದರವಲ್ಲ ಕಾಣವ್ವಾ

**೪೫೬**
ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭವಿದ್ದಿತ್ತು
ನೋಡಾ ಅಯ್ಯ
ಅರಗಿನ ಕಂಭದ ಮೇಲೆ ಒಂದು ಹಂಸೆಯಿದ್ದಿತ್ತು
ಕಂಭ ಬೆಂದಿತ್ತು ಹಂಸೆ ಹಾರಿತ್ತು ಗುಹೇಶ್ವರ

**೪೫೭**
ಕೆಂಡದ ಮಳೆ ಕರೆವಲ್ಲಿ ಉದಕವಾಗಿರಬೇಕು
ಜಲಪ್ರಳಯವಾದಲ್ಲಿ ವಾಯುವಿನಂತಿರಬೇಕು
ಮಹಾಪ್ರಳಯವಾದಲ್ಲಿ ಆಕಾಶದಂತಿರಬೇಕು
ಜಗತ್ಪ್ರಳಯವಾದಲ್ಲಿ ತನ್ನ ತಾ ಬಿಡಬೇಕು
ಗುಹೇಶ್ವರಲಿಂಗ ತಾನಾಗಿರಬೇಕು

**೪೫೮**
ಕೆರೆ ಹಳ್ಳ ಬಾವಿಗಳು ಮೈದೆಗೆದಡೆ
ಗುಳ್ಳೆ ಗೊರಜೆ ಚಿಪ್ಪು ಕಾಣಬಹುದು
ವಾರಿಧಿ ಮೈದೆಗೆದಡೆ
ರತ್ನಮುತ್ತುಗಳ ಕಾಣಬಹುದು

ಕೂಡಲಸಂಗನ ಶರಣರು
ಮನದೆರೆದು ಮಾತನಾಡಿದಡೆ
ಲಿಂಗವ ಕಾಣಬಹುದು

**೪೫೯**

ಕೆಸರಲ್ಲಿ ಬಿದ್ದ ಬಡ ಪಶುವಿನಂತೆ ಆನು
ದೆಸೆದೆಸೆಗೆ ಬಾಯ ಬಿಡುತ್ತಿದ್ದೇನೆ
ಅಯ್ಯಾ ಆರೈವವರಿಲ್ಲ
ಅಕಟಕಟ ಪಶುವೆಂದೆನ್ನ ಕೂಡಲಸಂಗಮದೇವ
ಕೊಂಬ ಹಿಡಿದೆತ್ತುವನ್ನಕ್ಕ

**೪೬೦**

ಕೇಳವ್ವಾ ಕೇಳವ್ವಾ ಕೆಳದಿ ಹೇಳುವೆ ನಿನಗೆ
ಆಹಾ ಕಂಗಳಲ್ಲಿ ಕಾಬೆ ಮತ್ತೆ ಕಾಣೆ
ಮನದಲ್ಲಿ ಹಿಡಿವೆ ಹಿಡಿದು ಮತ್ತೆ ಕಾಣೆನವ್ವಾ
ಮಿಂಚಿನ ರವೆರವೆಯಂತೆ ತೋರುವನಡಗುವ
ನಮ್ಮ ಕಪಿಲಮಲ್ಲಿನಾಥದೇವನು

**೪೬೧**

ಕೈ ಕೈದ ಹಿಡಿದು ಕಾದುವಾಗ
ಕೈದೊ ಕೈಯೊ ಮನವೊ
ಅಂಗ ಲಿಂಗ ಸಂಬಂಧದಲ್ಲಿ ಸಂಬಂಧಿಸುವಾಗ
ಅಂಗವೊ ಲಿಂಗವೊ ಆತ್ಮನೊ
ಈ ಮೂರಂಗವನರಿದಲ್ಲಿ
ಕಾಲಾಂತ ಭೀಮೇಶ್ವರಲಿಂಗವನರಿದುದು

**೪೬೨**

ಕೈದ ಹಿಡಿದಾಡುವರೆಲ್ಲರು ಇರಿಯಬಲ್ಲರೆ
ಸಾಧನೆಯ ಮಾಡುವ ಬಾಲರೆಲ್ಲರೂ ಕಾದಬಲ್ಲರೆ
ಅರ್ತಿಗೆ ಮಾಡುವ ಕೃತ್ಯವಂತರೆಲ್ಲರೂ ಸದ್ಭಕ್ತಪ್ಪರೆ
ಅದು ಚಂದೇಶ್ವರಲಿಂಗಕ್ಕೆ ಸಲ್ಲದ ಮಾತ

೪೬೩
ಕೈದಕೊಡುವರಲ್ಲದೆ ಕಲಿತನವ ಕೊಡುವರುಂಟೆ ಮಾರಯ್ಯಾ
ಹೆಣ್ಣಕೊಡುವ್ವರಲ್ಲದೆ ಕೂಟಕ್ಕೊಳಗಾದವರುಂಟೆ ಮಾರಯ್ಯಾ
ಕಳುವಚೋರಂಗೆ ಬಡವರೆಂದು ದಯವುಂಟೆ ಮಾರಯ್ಯಾ
ಮನವನೊರೆದು ಭಕ್ತಿಯನೋಡಿಹೆನೆಂಬವಂಗೆ
ಎಮ್ಮಲ್ಲಿ ಗುಣವ ಸಂಪಾದಿಸಲಿಲ್ಲ ಮಾರಯ್ಯಾ
ಶೂಲವನೇರಿ ಸಂದಲ್ಲಿ ಮತ್ತಿನ್ನು ಸಾವಿಂಗೆ ಹಂಗುಪಡಲೇಕೆ
ಮಾರಯ್ಯಪ್ರಿಯ ಅಮಲೇಶ್ವರಲಿಂಗಾ ನೀನೆ ಬಲ್ಲೆ

೪೬೪
ಕೈಯಲ್ಲಿ ಹಿಡಿದಡೆ ಕಲ್ಲು ಸಿಕ್ಕಿತ್ತಲ್ಲದೆ ಲಿಂಗವಿಲ್ಲಾ ಎಂದೆ
ಕಣ್ಣಿನಲ್ಲಿ ನೋಡಿ ಕಬಳೀಕರಿಸಿದೆನೆಂದಡೆ ಅದು ಕವುಳಿಕವೆಂಬೆ
ಮನದಲ್ಲಿ ನೆನೆದು ಘನದಲ್ಲಿ ನಿಂದೆಹೆನೆಂದಡೆ ಭವಕ್ಕೆ ಬೀಜವೆಂದೆ
ಕೈಗೂ ಕಣ್ಣಿಗೂ ಮನಕ್ಕೂ ಬಹಾಗ ತೊತ್ತಿನ ಕೂಸೆ
ಕಂಡಕಂಡವರ ಅಪ್ಪಾ ಅಪ್ಪಾ ಎಂಬ ಇಂತೀ ಸುಚಿತ್ತರನರಿಯದೆ
ಉದ್ಯೋಗಿಸಿ ನುಡಿವ ಜಗದ ಭಂಡಕರನೊಲ್ಲೆನೆಂದ
ನಿಃಕಳಂಕ ಮಲ್ಲಿಕಾರ್ಜುನ

೪೬೫
ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ
ಕೇಳಿರಯ್ಯಾ
ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳುಬೆಟ್ಟ
ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು
ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ
ಇದರಾಡಂಬರವೇಕಯ್ಯಾ
ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ
ಲಿಂಗಾಂಗ ಸಾಮರಸ್ಯವ ತಿಳಿದು
ನಿಮ್ಮ ಪಾದಪದ್ಮದೊಳು ಬಯಲಾದ ಪದವೆ ಕೈಲಾಸವಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ

೪೬೬

ಕೈಲಾಸ ಮರ್ತ್ಯಲೋಕ ಎಂಬರು
ಕೈಲಾಸವೆಂದಡೇನೊ ಮರ್ತ್ಯಲೋಕವೆಂದಡೇನೊ
ಅಲ್ಲಿಯ ನಡೆಯೂ ಒಂದೆ
ಇಲ್ಲಿಯ ನಡೆಯೂ ಒಂದೆ
ಅಲ್ಲಿಯ ನುಡಿಯೂ ಒಂದೆ
ಇಲ್ಲಿಯ ನುಡಿಯೂ ಒಂದೆ ಕಾಣಿರಯ್ಯಾ ಎಂಬರು
ಕೈಲಾಸದವರೆ ದೇವರ್ಕಳೆಂಬರು
ಸುರಲೋಕದೊಳಗೆ ಸಾಸಿರಕಾಲಕ್ಕಲ್ಲದೆ ಅಳಿದಿಲ್ಲವೆಂಬರು
ನರಲೋಕದೊಳಗೆ ಸತ್ತು ಸತ್ತು ಹುಟ್ಟುತಿಹರೆಂಬರು
ಇದ ಕಂಡು ನಮ್ಮ ಶರಣರು
ಸುರಲೋಕವನು ನರಲೋಕವನು ತೃಣವೆಂದು ಭಾವಿಸಿ
ಭವವ ದಾಂಟಿ ತಮ್ಮ ತಮ್ಮ ಹುಟ್ಟನರಿದು
ಮಹಾಬೆಳಗನೆ ಕೂಡಿ ಬೆಳಗಿನಲ್ಲಿ ಬಯಲಾದರಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ

೪೬೭

ಕೈಸಿರಿಯ ದಂಡವ ಕೊಳಬಹುದಲ್ಲದೆ
ಮೈಸಿರಿಯ ದಂಡವ ಕೊಳಲುಂಟೆ
ಉಟ್ಟಂತಹ ಉಡಿಗೆ ತೊಡಿಗೆಯನೆಲ್ಲ ಸೆಳೆದುಕೊಳಬಹುದಲ್ಲದೆ
ಮುಚ್ಚಿರ್ದ ಮುಸುಕಿರ್ದ ನಿರ್ವಾಣವ ಸೆಳೆದುಕೊಳಬಹುದೆ
ಚೆನ್ನಮಲ್ಲಿಕಾರ್ಜುನದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ
ಉಡುಗೆ ತೊಡುಗೆಯ ಹಂಗೇಕೋ ಮರುಳೆ

೪೬೮

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವರು
ವೀರರೂ ಅಲ್ಲ ಧೀರರೂ ಅಲ್ಲ
ಇದು ಕಾರಣ
ನೆರೆ ಮೂರುಲೋಕವೆಲ್ಲವು
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೋ

೪೭೯
ಕೊಲುವನೇ ಮಾದಿಗ
ಹೊಲಸು ತಿಂಬುವನೇ ಹೊಲೆಯ
ಕುಲವೇನೊ ಅವದಿರ ಕುಲವೇನೊ
ಸಕಲಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗನ ಶರಣರೆ ಕುಲಜರು

೪೮೦
ಕೊಳಲ ದನಿಗೆ ಸರ್ಪ ತಲೆದೂಗಿದಡೇನು
ಒಳಗಣ ವಿಷದ ಬಯಕೆ ಬಿಡದನ್ನಕ್ಕ
ಹಾಡಿದಡೇನು ಕೇಳಿದಡೇನು
ತನ್ನಲುಳ್ಳ ಅವಗುಣ ಬಿಡದನ್ನಕ್ಕ
ಒಳಗನರಿದು ಹೊರಗೆ ಮರೆದವರ
ನೀ ಎನಗೆ ತೋರಯ್ಯಾ ಚೆನ್ನಮಲ್ಲಿಕಾರ್ಜುನಾ

೪೮೧
ಕೊಳ್ಳಿಯ ಬೆಳಕಿನಲ್ಲಿ ಕುಳಿತು
ಒಡ್ಡದ ತಳಿಗೆಯಲಿ ಅಂಬಲಿಯನಿಕ್ಕಿಕೊಂಡು
ಸುರಿದು ಕೈದೊಳೆದು ಮುರಿದ ಗುಡಿಯೊಳಗೆ
ಹರಿದ ತಟ್ಟೆಯ ಮೇಲೆ ಹರಿದ ಬೊಂತೆಯ ಹಾಸಿಕೊಂಡು
ಕೆಡದಿಹಂಗೊಬ್ಬ ಮಗ ಹುಟ್ಟಿ ಸಿರಿವಂತನಾದಡೆ
ಇಳಿಯ ಬಿಟ್ಟು ಕಳೆಯದಿಹನೆ ಹಿಂದಣ ಕಷ್ಟದರಿದ್ರವ
ಬಂಡಿಯ ಹಿಡಿದಾತನ ತಂದೆಯ ತಲೆ ಹೋಹುದುಯೆಂದು
ಪಿತರಾಚಾರವೆಂದು ವೃಥಾ ಸಾವನೆ
ಕಂದ ಜಾಣನಾದಡೆ ತಮ್ಮ ತಂದೆಯಂತಹನೆ
ವಿಷಯದಿಂ ಬಂದ ದೈವಂಗಳಿಗೆ ಅನು ಎಂದೂ ಎರಗೆ
ಸೊಡ್ಡಳಂಗಲ್ಲದೆ

೪೮೨
ಕೋಗಿಲೆಗಳು ಉಗ್ಘಡಿಸಲು ಮಾಮರಂಗಳ ಮೇಲೆ
ತುಂಬಿಗಳೂ ಝೇಂಕಾರದಿಂ ಮೊರೆದು ಮೋಹರಿಸಲು

ಮಂದಾನಿಲಗಳ ತನ್ನ ಬೇಹಿಗೆ ಕಳುಹಲು
ಅನಂಗ ತನ್ನ ಬರವರಸಿ ಬಂದು ನಿಲಲು
ರಸಭರತವಾಗಿರ್ದ ಪರಿಯ ಕಬ್ಬಿನ ಬಿಲ್ಲೇರಿಸಿ ಕುಸುಮ ಸರವನೆ ತೊಟ್ಟು
ಎಸಲಾರದೆ ಬಿಲ್ಲು ಬೇರಾಗಿ ಇವರೆಲ್ಲರ ಪರಿಯೆಂದು ಬಗೆದುಬಂದೆ
ಕಾಮ ನಿಲ್ಲದಿರೈ
ನಿನ್ನ ರೂಪ ಮಹಾಲಿಂಗ ಕಲ್ಲೇಶ್ವರದೇವ ಬಲ್ಲ
ಸಿದ್ಧರಾಮ ನಿನ್ನಳವಲ್ಲ ಎಲವೊ ಕಾಮಾ

೪೭೩
ಕೋಗಿಲೆಗಳು ಘುಳುವಟ್ಟೆ ಹೋದ ಬನದಂತೆ ಆದೆ
ನೋಡವ್ವಾ
ರಾಮರಾಡಿದ ಹೊಳಲಿನಂತೆ ಆದೆ
ನೋಡವ್ವಾ
ಜವ್ವನೆಗಳು ಬಳಲ್ದ ಸ್ತ್ರೀಯರ ಮುಖ ಕಾಂತಿಯಂತೆ ಆದೆ
ನೋಡವ್ವಾ
ಪರಿಮಳವಿಲ್ಲದ ಪುಷ್ಪದಂತೆ ಆದೆ
ನೋಡವ್ವಾ
ಚಂದ್ರಮನಿಲ್ಲದ ನಕ್ಷತ್ರಗಳಂತೆ ಆದೆ
ನೋಡವ್ವಾ
ಮಹಾಲಿಂಗ ಗಜೇಶ್ವರನನಗಲುವದರಿಂದ ಸಾವುದು ಸುಖ
ನೋಡವ್ವಾ

೪೭೪
ಕೋಪದ ತಾಪದ ಸಂಗವ ಕಳೆದು
ವಿರೂಪ ನಿರೂಪವಾಯಿತ್ತಯ್ಯಾ
ನಿರಾಲಂಬ ನಿರಾಭಾರಿಯಾಗಿರಲು ಆನು ಅನುವರಿದು
ಹೆಣ್ಣೆಂಬ ನಾಮವ ಕಳೆದು ಸುಖ ವಿಶ್ರಾಂತಿಯನೆಯ್ದುವೆನಯ್ಯಾ
ಸಂಗಯ್ಯಾ ಬಸವನರೂಪವಡಗಿತೆನ್ನಲ್ಲಿ

೪೭೫
ಕೋಲ ತುದಿಯ ಕೋಡಗದಂತೆ
ನೇಣ ತುದಿಯ ಬೊಂಬೆಯಂತೆ

ಆಡಿದೆನಯ್ಯಾ ನೀನಾಡಿಸಿದಂತೆ
ಆನು ನುಡಿದೆನಯ್ಯಾ ನೀ ನುಡಿಸಿದಂತೆ
ಆನು ಇದ್ದೆನಯ್ಯಾ ನೀನು ಇರಿಸಿದಂತೆ
ಜಗದ ಯಂತ್ರವಾಹಕ ಚೆನ್ನಮಲ್ಲಿಕಾರ್ಜುನ
ಸಾಕೆಂಬನ್ನಕ್ಕ

೪೭೬

ಕೋಲೊಂದರಲ್ಲಿ ಹಲವು ಕುಲದ ಗೋವುಗಳ ಚಲಿಸದೆ ನಿಲಿಸುವಂತೆ
ಏಕಚಿತ್ತನಾಗಿ ಸರ್ವವಿಕಾರಂಗಳ ಕಟ್ಟುವಡೆದು
ಇಂದ್ರಿಯಂಗಳ ಇಚ್ಛೆಯಲ್ಲಿ ತ್ರಿವಿಧವ ಹಿಡಿದಿರುವರ ಸಂದಿಯಲ್ಲಿ ನುಸುಳದೆ
ವಸ್ತುವಿನ ಅಂಗದಲ್ಲಿಯೆ ತನ್ನಂಗ ತಲ್ಲೀಯವಾಗಿಪ್ಪುದೆ ಮಹಾ ನಿಜದ ನೆಲೆ
ಗೋಪತಿನಾಥ ವಿಶ್ವೇಶ್ವರಲಿಂಗವನರಿವುದಕ್ಕೆ ಇದೆ ಬಟ್ಟೆ

೪೭೭

ಕ್ರಿಯೆ ಎಂಬುದು ಪಿಪೀಲಿಕನ ಗುಣ
ಜ್ಞಾನವೆಂಬುದು ವಿಹಂಗದ ಗುಣ
ಮೆಲ್ಲಮೆಲ್ಲನೆ ತಿಳಿದಲ್ಲಿ ಕ್ರಿಯೆ ಎನಿಸಿತ್ತು
ಏಕಕಾಲಕ್ಕಳವಟ್ಟಲ್ಲಿ ಕಪಿಲಸಿದ್ಧಮಲ್ಲಿಕಾರ್ಜುನನ ಮನೆಯ
ಸೂರೆಗೊಂಬ ತಸ್ಕರಜ್ಞಾನವೆನಿಸಿತ್ತು ಮರುಳು ಶಂಕರಯ್ಯಾ

೪೭೮

ಕ್ರಿಯೆಯೆ ಜ್ಞಾನ ಆ ಜ್ಞಾನವೆ ಕ್ರಿಯೆ
ಜ್ಞಾನವೆಂದಡೆ ತಿಳಿಯುವುದು
ಕ್ರಿಯೆಯೆಂದಡೆ ತಿಳಿದಂತೆ ಮಾಡುವುದು
ಪರಸ್ತ್ರೀಯ ಭೋಗಿಸಬಾರದೆಂಬುದೆ ಜ್ಞಾನ
ಅದರಂತೆ ಆಚರಿಸುವುದೆ ಕ್ರಿಯೆ
ಅರಿತು ಆಚರಿಸದಿದ್ದಡೆ ಅದೆ ಅಜ್ಞಾನ
ನೋಡಾ ಕೂಡಲಚೆನ್ನ ಸಂಗಮದೇವಾ

೪೭೯

ಕ್ರೀಯ ಮರೆದಲ್ಲಿ ಅರಿವು ಹೀನವಾಗಿಪ್ಪುದು
ಅರಿವ ಮರೆದಲ್ಲಿ ಜ್ಞಾನ ಹೀನವಾಗಿಪ್ಪುದು

ಜ್ಞಾನವ ಮರೆದಲ್ಲಿ ಬೆಳಗಿನ ಕಳೆ ಹೋಯಿತ್ತು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು
ಅವರಿಗೆ ಮರೆಯಾಗಿ ತೊಲಗಿದ

## ೪೮೦

ಖಂಡವ ಮೆದ್ದು ಅರಗಿಸಿ ಹೆಂಡವ ಕುಡಿದು
ಉನ್ಮತ್ತವಿಲ್ಲದೆ ಮಿಕ್ಕಾದ ಕಿರುಹಕ್ಕಿಯ ಕೊಂದು ಕುಕ್ಕೆಯೊಳಗಿಟ್ಟು
ಹೆಬ್ಬದ್ದ ಹಿಡಿದು ಕಬ್ಬದ್ದ ಬಾಣಸವ ಮಾಡಿ
ಹುಲಿಯ ಹಲ್ಲ ಕಿತ್ತು ಎರಳೆಯ ಕಾಲ ಮುರಿದು
ಲಂಘಿಸುವ ಸಿಂಹದ ಅಂಗವ ಸೀಳಿ
ಉನ್ಮತ್ತದಿಂದ ಬಂದಪ್ಪ ಗಜವ ಕಂಗಳು ನುಂಗಿ
ಮೊಲ ನಾಯ ಕಚ್ಚಿ ನರಿ ಬಲೆಯ ನುಂಗಿ
ಸರ್ಪನ ಗಾಳಿ ತಾಗಿ ಗರುಡ ಸತ್ತು
ಇಂತಿವು ಹಗೆ ಕೆಳೆಯಾಗಿರಬಲ್ಲಡೆ ಭಕ್ತ
ಇಂತಹ ಭಕ್ತ ಕೆಳೆಯಾಗಿರಬಲ್ಲಡೆ ಮಾಹೇಶ್ವರ
ಇಂತಹ ಮಾಹೇಶ್ವರ ಕೆಳೆಯಾಗಿರಬಲ್ಲಡೆ ಪ್ರಸಾದಿ
ಇಂತಹ ಪ್ರಸಾದಿ ಕೆಳೆಯಾಗಿರಬಲ್ಲಡೆ ಪ್ರಾಣಲಿಂಗಿ
ಇಂತಹ ಪ್ರಾಣಲಿಂಗಿ ಕೆಳೆಯಾಗಿರಬಲ್ಲಡೆ ಶರಣ
ಇಂತಹ ಶರಣ ಕೆಳೆಯಾಗಿರಬಲ್ಲಡೆ ಐಕ್ಯ
ಇಂತಹ ಐಕ್ಯಾನುಭಾವ ಕೆಳೆಯಾಗಿರ್ದಲ್ಲಿ ಮಹದೊಳಗಾಯಿತ್ತು
ಆ ಮಹದೊಳಗು ಸಯವಾದಲ್ಲಿ
ಸರ್ವಮಯವೆಂಬುದು ಇಹಪರ ನಾಸ್ತಿ
ಚನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗಕ್ಕೆ ಇದಿರೆಡೆಯಿಲ್ಲ

## ೪೮೧

ಗಂಡ ನೀನು ಹೆಂಡತಿಯಾನು ಮತ್ತೊಬ್ಬರಿಲ್ಲಯ್ಯ
ನಿನ್ನ ಬೆಂಬಳಿಯಲಾನು ಮಚ್ಚಿ ಬಂದೆ
ಕಂಡಕಂಡವರೆಲ್ಲ ಬಲುಹಿಂದ ಕೈ ಹಿಡಿದರೆ
ಗಂಡಾ ನಿನಗೆ ಸ್ವೈರಣೆಯೆಂತಾಯಿತ್ತು ಹೇಳಾ
ಚನ್ನಮಲ್ಲಿಕಾರ್ಜುನಯ್ಯ
ನಿನ್ನ ತೋಳ ಮೇಲಣವಳನನ್ಯರೆಳೆದೊಯ್ಯುವರೆ
ನೋಡುತಿಹುದುಚಿತವೆ ಕರುಣಿಗಳರಸಾ

೪೮೨

ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮಾರಿ ಮಸಣಿಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆ ಮಾಂಸ
ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲಸಂಗಮದೇವಾ

೪೮೩

ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆಯಿಲ್ಲದ ಭಕ್ತ
ಇದ್ದಡೇನೊ ಸತ್ತಡೇನೊ
ಶಿವ ಶಿವಾ
ಕೂಡಲಸಂಗಮದೇವ
ಕೇಳಾ
ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ

೪೮೪

ಗಂಡು ಮೋಹಿಸಿ ಹೆಣ್ಣ ಹಿಡಿದಡೆ
ಅದು ಒಬ್ಬರ ಒಡವೆ ಎಂದು ಅರಿಯಬೇಕು
ಹೆಣ್ಣು ಮೋಹಿಸಿ ಗಂಡ ಹಿಡಿದಡೆ
ಉತ್ತರವಾವುದೆಂದರಿಯಬೇಕು
ಈ ಎರಡರ ಉಭಯವ ಕಳೆದು ಸುಖಿ ತಾನಾಗಬಲ್ಲಡೆ
ನಾಸ್ತಿನಾಥನು ಪರಿಪೂರ್ಣನೆಂಬೆ

೪೮೫

ಗಂಧವ ವಾಯು ಕೊಂಬಾಗ
ಅದ ತಂದು ಕೂಡಿದವರಾರು
ನಿಂದ ಮರಕ್ಕೆ ಸುಗಂಧ ಹುಟ್ಟುವಾಗ
ಅದ ಬಂಧಿಸಿ ತಂದು ಇರಿಸಿದವರಾರು

ಅವು ತಮ್ಮ ಅಂಗದ ಸ್ವಭಾವದಂತೆ
ನಿಂದ ನಿಜವೆ ತಾನಾಗಿ ಅಲ್ಲಿ ಬೇರೊಂದು
ಸಂದೇಹವ ಸಂಧಿಸಲಿಲ್ಲ
ಎಂದನಂಬಿಗ ಚವುಡಯ್ಯ

೩೮೬

ಗಂಧವನೊಳಕೊಂಡ ಕುಸುಮವ ಕೊಯ್ಯಬಹುದಲ್ಲದೆ
ಗಂಧವನೊಳಕೊಂಡ ವಾಯುವ ಕೊಯ್ಯಬಹುದೆ
ಘಟವಕೊಳಕೊಂಡಿದ್ದಾತ್ಮನನರಿಯಬಹುದೆ
ಆತ್ಮನನೊಳಕೊಂಡಿದ್ದ ಘಟವನರಿಯಬಹುದಲ್ಲದೆ
ವಸ್ತು ಅಂಗವಾದಲ್ಲಿ ಅರಿಯಬಹುದಲ್ಲದೆ
ಅಂಗ ವಸ್ತುವಾದಲ್ಲಿ ಹಿಂಗಿ ಅರಿವ ಠಾವಿನ್ನಾವುದು
ಕುಸುಮಕ್ಕೆ ಕಡೆ ನಡು ಮೊದಲಲ್ಲದೆ
ಗಂಧಕ್ಕೆ ಕಡೆ ನಡು ಮೊದಲುಂಟೆ
ಅರಿವುದಕ್ಕೆ ಅರುಹಿಸಿಕೊಂಬುದಕ್ಕೆ ಕುರುಹನರಿತಲ್ಲಿಯೆ
ಸದಾಶಿವಮೂರ್ತಿಲಿಂಗವೆಂಬ ರೂಪು ನಿಂದಿತ್ತು

೩೮೭

ಗಂಪಕ್ಕೆ ಸಿಕ್ಕೆ
ಬಲೆಗೊಳಗಾಗೆ
ಗೂಳಿಯ ಇರಿತದ ಡಾವರಕ್ಕೆ ನಿಲ್ಲೆ
ಸೆಳೆಗೋಲಿನ ಗಾಣದ ಕೀಟಕವನೊಲ್ಲೆ
ನಿನ್ನಾಟ ಅದೇತರ ಮಡುವಿನಾಟ ಹೇಳಾ
ಕದಕತನ ಬೇಡ
ಕದಂಬಲಿಂಗಾ

೩೮೮

ಗಗನವೇ ಗುಂಡಿಗೆ ಆಕಾಶವೇ ಅಗ್ಘವಣಿ
ಚಂದ್ರಸೂರ್ಯರಿಬ್ಬರೂ ಪುಷ್ಪ ನೋಡಾ
ಬ್ರಹ್ಮ ಧೂಪ ವಿಷ್ಣು ದೀಪ
ರುದ್ರನೋಗರಸಯಧಾನ ನೋಡ
ಗುಹೇಶ್ವಲಿಂಗಕ್ಕೆ ಪೂಜೆ ನೋಡಾ

೪೮೯
ಗರ ಹೊಡೆದಂತೆ ಬೆರತುಕೊಂಡಿಪ್ಪರು
ಮರನೇರಿ ಬಿದ್ದಂತೆ ಹಮ್ಮದಂಬೋದರು
ಉರಗನ ವಿಷವಾವರಿಸಿದಂತೆ ನಾಲಗೆ ಹೊರಳದು ಕಣ್ಣಾಗಣರು
ನಿಮ್ಮ ಕರುಣವೆ ಕರ ಚೆಲುವು
ಸಕಳೇಶ್ವರಯ್ಯಾ
ಸಿರಿ ಸೋಂಕಿದವನ ಪರಿ ಬೇರೆ ತಂದೆ

೪೯೦
ಗಾರುಡಿಗನ ವಿಷವಡರಬಲ್ಲುದೆ
ಸೂರ್ಯನ ಮಂಜು ಮುಸುಕಬಲ್ಲುದೆ
ಗಾಳಿಯ ಮೊಟ್ಟೆಯ ಕಟ್ಟಬಹುದೆ
ಅಗ್ನಿಯ ಕೈಯಿಂದ ಆಕಾಶ ಬೇಯಬಲ್ಲುದೆ
ನಿಮ್ಮನರಿದ ನಿಜಯೋಗಿಗೆ ಕರ್ಮಪಾಶವೆಲ್ಲಿಯದೊ
ರೇಕಣ್ಣಪ್ರಿಯ ನಾಗಿನಾಥಾ

೪೯೧
ಗಾಳಿಯ ಹಡೆದಲ್ಲಿ ತೂರಿಕೊಳ್ಳಯ್ಯಾ
ಗಾಳಿ ನಿನ್ನಾಧೀನವಲ್ಲಯ್ಯಾ
ನಾಳೆ ತೂರಿಹೆನೆಂದಡೆ ಇಲ್ಲಯ್ಯಾ
ಶಿವಶರಣೆಂಬುದೊಂದು ಗಾಳಿಯ ಹಡೆದಲ್ಲಿ
ಬೇಗ ತೂರೆಂದನಂಬಿಗ ಚವುಡಯ್ಯ

೪೯೨
ಗಾಳಿಯಲೆದ್ದ ಧೂಳು ತೃಣ ಎಲೆ
ಮೊದಲಾದ ಬಹುವ್ಯಾಪಾರ ಗಾಳಿಯ ಮುಟ್ಟದುದಿಲ್ಲ
ಶರಣನ ಸರ್ವೇಂದ್ರಿಯ ಗಾಳಿಯ ಧೂಳಿನ ಪರಿಯಂತೆ
ಪಳುಕದ ಭಾಂಡ ಬಹುವರ್ಣದಂತೆ
ಮುಟ್ಟಿಯೂ ಮುಟ್ಟದಿರ್ಪ ಮಹಾಶರಣಂಗೆ ನಮೋ ನಮೋ
ನಿಃಕಳಂಕ ಮಲ್ಲಿಕಾರ್ಜುನಾ

೪೯೩

ಗಿಡುವಿನ ಮೇಲಣ ತುಂಬಿ ಕೂಡೆ ವಿಕಸಿತವಾಯಿತ್ತು
ತುಂಬಿ
ನೋಡಾ
ಆತುಮ ತುಂಬಿ ತುಂಬಿ
ನೋಡಾ
ಪರಮಾತುಮ ತುಂಬಿ ತುಂಬಿ
ನೋಡಾ
ಗುಹೇಶ್ವರನೆಂಬ ಲಿಂಗಕ್ಕೆರಗಿ ನಿಬ್ಬೆರಗಾಯಿತ್ತು
ತುಂಬಿ ನೋಡಾ

೪೯೪

ಗಿಣಿಯಿಲ್ಲದ ಪಂಜರ ಹಲವು ಮಾತನಾಡಬಲ್ಲುದೆ
ದೇವರಿಲ್ಲದ ದೇಗುಲಕ್ಕೆ ಮಂತ್ರ ಅಭಿಷೇಕವುಂಟೆ
ಅರಿವು ನಷ್ಟವಾಗಿ ಕುರುಹಿನ ಹಾವಚೆಯ
ನಾನರಿಯೆನೆಂದನಂಬಿಗ ಚವುಡಯ್ಯ

೪೯೫

ಗಿರಿಯಲಲ್ಲದೆ ಹುಲ್ಲುಮೊರಡಿಯಲ್ಲಾಡುವುದೆ ನವಿಲು
ಕೊಳಕ್ಕಲ್ಲದೆ ಕಿರುವಳ್ಳಕ್ಕೆಳಸುವುದೆ ಹಂಸೆ
ಮಾಮರ ತಳಿತಲ್ಲದೆ ಸರಗೈವುದೆ ಕೋಗಿಲೆ
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೆ ಭ್ರಮರ
ಎನ್ನ ದೇವ ಚೆನ್ನಮಲ್ಲಿಕಾರ್ಜುನಂಗಲ್ಲದೆ
ಅನ್ಯಕ್ಕೆಳಸುವುದೆ ಎನ್ನ ಮನ
ಪೇಳಿರೆ ಕೆಳದಿಯರಿರಾ

೪೯೬

ಗಿಳಿಯ ಹಂಜರವಿಕ್ಕಿ
ಸೊಡರಿಂಗೆಣ್ಣೆಯನೆರೆದು ಬತ್ತಿಯನಿಕ್ಕಿ
ಬರವ ಹಾರುತ್ತಿದ್ದೆನೆಲೆಗವ್ವ
ತರುಗೆಲೆ ಗಿರುಕೆಂದಡೆ ಹೊರಗನಾಲಿಸುವೆ

ಅಗಲಿದೆನೆಂದೆನ್ನ ಮನ ಧಿಗೆಲೆಂದಿತ್ತೆಲೆಗವ್ವಾ
ಕೂಡಲಸಂಗನ ಶರಣರು ಬಂದು
ಬಾಗಿಲ ಮುಂದೆ ನಿಂದು
ಶಿವಾ ಎಂದಡೆ ಸಂತೋಷಬಟ್ಟೆನೆಲೆಗವ್ವಾ

೪೯೭
ಗಿಳಿಯೋದಿ ಫಲವೇನು
ಬೆಕ್ಕು ಬಹುದ ಹೇಳಲರಿಯದು
ಜಗವೆಲ್ಲವ ಕಾಬ ಕಣ್ಣು
ತನ್ನ ಕೊಂಬ ಕೊಲ್ಲೆಯ ಕಾಣಲರಿಯದು
ಇದಿರ ಗುಣವ ಬಲ್ಲೆವೆಂಬರು
ತಮ್ಮ ಗುಣವತಾವರಿಯರು
ಕೂಡಲಸಂಗಮದೇವಾ

೪೯೮
ಗುಣ ದೋಷ ಸಂಪಾದನೆಯ ಮಾಡುವನ್ನಕ್ಕ
ಕಾಮದ ಒಡಲು
ಕ್ರೋಧದ ಗೊತ್ತು
ಲೋಭದ ಇಕ್ಕೆ
ಮೋಹದ ಮಂದಿರ
ಮದದಾವರಣ
ಮತ್ಸರದ ಹೊದಕೆ
ಆ ಭಾವವರತಲ್ಲದೆ
ಚೆನ್ನಮಲ್ಲಿಕಾರ್ಜುನನ ಅರಿವುದಕ್ಕೆ ಇಂಬಿಲ್ಲ ಕಾಣಿರಣ್ಣಾ

೪೯೯
ಗುರಿಯನೆಚ್ಚಲ್ಲಿ ತಾಗಿದವೊಲು
ತಪ್ಪಿದ ಭೇದವ ನಿಶ್ಚೈಸಿ ಕೈ ಅರಿವಂತೆ
ಕಾಯ ಜೀವದ ಸಂದಣಿಯಲ್ಲಿ
ಅರಿವೆಂಬ ವಸ್ತು ತಿರುಗಾಡುತ್ತಿರಲಾಗಿ
ಆ ಗುಣವ ಕರಿಗೊಂಡು ಮನಸಂದಿತ್ತು
ಮಾರೇಶ್ವರಾ

೫೦೦

ಗುರು ವೈಭವಕ್ಕೆ ಸಿಕ್ಕಿದಾಗಲೆ ಶಿಷ್ಯಂಗೆ ನರಕ ಪ್ರಾಪ್ತಿ
ಲಿಂಗ ಭಜನೆಗೆ ಸಿಕ್ಕಿದಾಗಲೆ ಮರಣಕ್ಕೊಳಗು
ಜಂಗಮ ಜಂಗುಳಿಯಾಗಿ
ಕಂಡಕಂಡವರಂಗಕ್ಕೆ ಜಂಘೆಯನಿಕ್ಕಲಾಗಿ ನಿರಂಗಕ್ಕೆ ಹೊರಗು
ಇಂತೀ ಇವರು ನಿಂದುದಕ್ಕೆ ಬಂಧವಿಲ್ಲದಿರಬೇಕು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವನರಿವುದಕ್ಕೆ

೫೦೧

ಗುರುಪ್ರಸಾದವ ಕೊಂಬರೆ
ನಾಚುವದು ಮನ
ಲಿಂಗಪ್ರಸದಾವ ಕೊಂಬರೆ
ನಾಚುವದು ಮನ
ಜಂಗಮಪ್ರಸಾದವ ಕೊಂಬರೆ
ನಾಚುವದು ಮನ
ಸಮಯಪ್ರಸಾದವ ಕೊಂಬರೆ
ನಾಚುವದು ಮನ
ಸೂಳೆಯ ಭ್ಜೋಜಗನ ಎಂಜಲ ತಿಂಬರೆ
ನಾಚದು ಮನ
ಮಹಂತ ಸಕಳೇಶ್ವರಯ್ಯನು ಮೂಗ ಕೊಯ್ಯದೆ ಮಾಣನು

೫೦೨

ಗುರುವ ಕಂಡಲ್ಲಿ ನಿನ್ನನೇ ಕಾಬೆ
ಲಿಂಗವ ಕಂಡಲ್ಲಿ ನಿನ್ನನೇ ಕಾಬೆ
ಜಂಗಮವ ಕಂಡಲ್ಲಿ ನಿನ್ನನೇ ಕಾಬೆ
ನಿನ್ನಲ್ಲದ ಮತ್ತೊಂದ ತೋರದಿಹ ಅರಿವು ನೀನೇ ಬಲ್ಲೆ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೫೦೩

ಗುರುವಾದಡೂ ಕಾಯಕದಿಂದವೆ ಜೀವನ್ಮುಕ್ತಿ
ಲಿಂಗವಾದಡೂ ಕಾಯಕದಿಂದವೆ ವೇಷದ ಪಾಶ ಹರಿವುದು

ಗುರುವಾದಡೂ ಚರಸೇವೆಯ ಮಾಡಬೇಕು
ಲಿಂಗವಾದಡೂ ಚರಸೇವೆಯ ಮಾಡಬೇಕು
ಜಂಗಮವಾದಡೂ ಚರಸೇವೆಯ ಮಾಡಬೇಕು
ಚನ್ನಬಸವಣ್ಣಪ್ರಿಯ ಚಂದೇಶ್ವರಲಿಂಗದ ಅರಿವು

೫೦೪

ಗುರುವಿಂಗೆ ಗುರುವಿಲ್ಲ
ಲಿಂಗಕ್ಕೆ ಲಿಂಗವಿಲ್ಲ
ಜಂಗಮಕ್ಕೆ ಜಂಗಮವಿಲ್ಲ
ನನಗೆ ನಾನಿಲ್ಲ
ಕಣ್ದೆರೆದು ನೋಡುವಡೆ
ಆರಿಗೆ ಆರೂ ಇಲ್ಲ
ಕಪಿಲಸಿದ್ಧಮಲ್ಲಿಕಾರ್ಜುನ

೫೦೫

ಗುರುವಿನಡಿಗೆರಗೆನೆಂಬ ಭಾಷೆ ಎನಗೆ
ಲಿಂಗವ ಪೂಜಿಸಿ ವರವ ಬೇಡೆನೆಂಬ ಭಾಷೆ ಎನಗೆ
ಜಡೆಮುಡಿಯುಳ್ಳ ನಿಜಜಂಗಮವ ಕಂಡು
ಅಡಿಗೆರಗದ ಭಾಷೆ ಎನಗೆ
ಹಿಡಿದ ಛಲವ ಬಿಡದೆ ನಡೆಸಿ
ಮೃಡನ ಪಡೆದೆಹೆನೆಂಬ ಭಾಷೆ ಎನಗೆ
ಕಡುಗಲಿಯಾಗಿ ಆಚರಿಸಿ ಜಡಿದೆನು
ಅಜ್ಞಾನಿಗಳ ಬಾಯ ಕೆರಹಿನಲ್ಲಿ
ಮಾತಿನಲ್ಲಿ ವೇಷಧಾರಿಗಳು ಮೃಡನ ಅರಿದೆಹೆನೆಂದು ಗಳಹುತಿಪ್ಪರೆ
ಕೆರಹಿನಟ್ಟೆಯಲ್ಲಿ ಹೊಯ್ಯದೆ ಮಾಣ್ಬನೆ ಅರಿವುಳ್ಳ ಘನಮಹಿಮನು
ಅಮುಗೇಶ್ವರನೆಂಬ ಲಿಂಗವ ಅರಿದಿಪ್ಪ
ಮಹಾಘನಮಹಿಮನ ನಾನೇನೆಂಬೆನಯ್ಯಾ

೫೦೬

ಗುರುವೆಂಬ ತೆತ್ತಿಗನು ಲಿಂಗವೆಂಬಲಗನು
ಮನನಿಷ್ಠೆಯೆಂಬ ಕೈಯಲ್ಲಿ ಕೊಡಲು

ಕಾದಿದೆ ಗೆಲಿದೆ ಕಾಮನೆಂಬವನ
ಕ್ರೋಧಾದಿಗಳು ಕೆಟ್ಟು ವಿಷಯಂಗಳೋಡಿದವು
ಅಲಗು ಎನ್ನೊಳು ನಟ್ಟು ಆನಳಿದ ಕಾರಣ
ಚೆನ್ನಮಲ್ಲಿಕಾರ್ಜುನಲಿಂಗವ ಕರದಲ್ಲಿ ಹಿಡಿದೆ

೫೦೭

ಗುರುವೆಂಬ ಸೂತಕ ಅರಿವಿನಿಂದ ಹರಿಯಬೇಕು
ಲಿಂಗವೆಂಬ ಸೂತಕ ಅರಿವಿನಿಂದ ಹರಿಯಬೇಕು
ಅರಿವೆಂಬ ಸೂತಕಕ್ಕೆ ಮುಂದೆ ಒಂದ ಕಂಡೆಹೆನೆಂಬ
ಒಡಲಸೂತಕ ಹರಿಯಬೇಕು
ಸೂತಕ ನಿಹಿತವಾದಲ್ಲಿ
ಕಾಮಧೂಮ ಧೂಳೇಶ್ವರ ಎಂದೂ ಏನೂ ಎನಲಿಲ್ಲ

೫೦೮

ಗುರುವೆಂಬೆನೆ ಗುರುವು ನರನು
ಲಿಂಗವೆಂಬೆನೆ ಲಿಂಗವು ಕಲ್ಲು
ಜಂಗಮವೆಂಬೆನೆ ಜಂಗಮವು ಆತ್ಮನು
ಪಾದೋದಕವೆಂಬೆನೆ ಪಾದೋದಕ ನೀರು
ಪ್ರಸಾದವೆಂಬೆನೆ ಪ್ರಸಾದ ಓಗರ
ಇಂತೆಂದುದಾಗಿ
ಹೊನ್ನು ಹೆಣ್ಣು ಮಣ್ಣು ಈ ತ್ರಿವಿಧವ ಹಿಡಿದ ಕಾರಣ
ಗುರುವೆಂಬವನು ನರನು
ಅಷ್ಟವಿಧಾರ್ಚವೆ ಷೋಡಶೋಪಚಾರಕ್ಕೆ ಒಳಗಾದ ಕಾರಣ
ಲಿಂಗವೆಂಬುದು ಕಲ್ಲು
ಆಶೆಪಾಶೆಗೆ ಒಳಗಾದ ಕಾರಣ
ಜಂಗಮವೆಂಬುದು ಆತ್ಮನು
ಲಾಂಛನಿಗಳೆಂದು ಕಾಂಚನಕ್ಕೆ ಕೈಯಾನುವರಲ್ಲಿ
ಪಾದೋದಕ ಪ್ರಸಾದವೆಂದು ಕೊಂಡೆನಾದಡೆ
ಕೆಸರಿನೊಳಗೆ ಬಿದ್ದ ಪಶುವಿನಂತೆ ಆಯಿತ್ತು ಕಾಣಾ
ಅಮುಗೇಶ್ವರಾ

೫೦೯
ಗುರುವೆಂಬೆನೆ ಹಲಬರ ಮಗ
ಲಿಂಗವೆಂಬೆನೆ ಕಲುಕುಟಿಕನ ಮಗ
ಪ್ರಸಾದವೆಂಬೆನೆ ಒಕ್ಕಲಿಗನ ಮಗ
ಪಾದೋದಕವೆಂಬೆನೆ ದೇವೇಂದ್ರನ ಮಗ
ಈಸುವ ಹಿಡಿಯಲೂ ಇಲ್ಲ ಬಿಡಲೂ ಇಲ್ಲ
ತನ್ನೊಳಗ ನೋಡೆಂದನಂಬಿಗ ಚವುಡಯ್ಯ

೫೧೦
ಗುರುಶಿಷ್ಯ ಸಂಬಂಧವರಸಲೆಂದು ಹೋದರೆ
ತಾನೆ ಗುರುವಾದ
ತಾನೆ ಶಿಷ್ಯನಾದ
ತಾನೆ ಲಿಂಗವಾದ
ಗುಹೇಶ್ವರ
ನಿಮ್ಮ ಶರಣನ ಕಾಯದ ಕೈಯಲ್ಲಿ ಲಿಂಗವಕೊಟ್ಟರೆ
ಭಾವ ಬತ್ತಲೆಯಾಯಿತ್ತು

೫೧೧
ಘನತರ ಚಿತ್ರದ ರೂಹ ಬರೆಯ ಬಹುದಲ್ಲದೆ
ಪ್ರಾಣವ ಬರೆಯಬಹುದೇ
ಅಯ್ಯ ದಿವ್ಯಾಗಮಂಗಳು ಹೇಳಿದ ಕ್ರಿಯೆಯಲ್ಲಿ
ದೀಕ್ಷೆಯ ಮಾಡಬಹುದಲ್ಲದೆ ಭಕ್ತಿಯ ಮಾಡಬಹುದೆ
ಅಯ್ಯ ಪ್ರಾಣವಹ ಭಕ್ತಿಯ ತನ್ಮಯ ನೀನು
ಈ ಗುಣವುಳ್ಳಲ್ಲಿ ನೀನಿಹೆ ಇಲ್ಲದಲ್ಲಿ ನೀನಿಲ್ಲ
ಗುಹೇಶ್ವರ

೫೧೨
ಚಂದನವ ಕಡಿದು ಕೊರೆದು ತೇದಡೆ
ನೊಂದೆನೆಂದು ಕಂಪ ಬಿಟ್ಟಿತ್ತೆ
ತಂದು ಸುವರ್ಣವ ಕಡಿದೊರೆದಡೆ
ಬೆಂದು ಕಳಂಕ ಹಿಡಿಯಿತ್ತೆ

ಸಂದುಸಂದು ಕಡಿದ ಕಬ್ಬನು ತಂದು ಗಾಣದಲ್ಲಿಕ್ಕಿ ಅರೆದಡೆ
ಬೆಂದು ಪಾಕಗುಡದೆ ಸಕ್ಕರೆಯಾಗಿ ನೊಂದೆನೆಂದು ಸಿಹಿಯ ಬಿಟ್ಟಿತ್ತೆ
ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು
ನಿಮಗೇ ಹಾನಿ
ಎನ್ನ ತಂದೆ ಚೆನ್ನಮಲ್ಲಿಕಾರ್ಜುನಯ್ಯಾ
ನೀ ಕೊಂದಡೆಯೂ ಶರಣೆಂಬುದ ಮಾಣೆ

೫೧೩

ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯಾ
ಚಂದ್ರ ಕುಂದೆ ಕುಂದುವುದಯ್ಯಾ
ಚಂದ್ರಂಗೆ ರಾಹು ಅಡ್ಡ ಬಂದಲ್ಲಿ
ಅಂಬುಧಿ ಬೊಬ್ಬಿಟ್ಟಿತ್ತೆ ಅಯ್ಯಾ
ಅಂಬುಧಿಯ ಮುನಿ ಆಪೋಶನವ ಕೊಂಬಲ್ಲಿ
ಚಂದ್ರಮನಡ್ಡ ಬಂದನೆ ಅಯ್ಯಾ
ಆರಿಗಾರೂ ಇಲ್ಲ ಕೆಟ್ಟವಂಗೆ ಕೆಳೆಯಿಲ್ಲ
ಜಗದ ನಂಟ ನೀನೆ ಅಯ್ಯಾ
ಕೂಡಲಸಂಗಮದೇವಯ್ಯಾ

೫೧೪

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಭಾನುವಿನ ಉದಯದ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲಸಂಗನ ಶರಣರ ನೆನೆವುದೆ ಚಿಂತೆ

೫೧೫

ಚರಾಚರವೆಂಬುದೊಂದು ಕಿಂಚಿತ್
ಚತುರ್ಯುಗವೆಂಬುದೊಂದು ಕಿಂಚಿತ್
ಅಪ್ಪುದೆಂಬುದೊಂದು ಕಿಂಚಿತ್
ಆಗದೆಂಬುದೊಂದು ಕಿಂಚಿತ್
ತಾನು ಶುದ್ಧವಾದ ಶರಣಂಗೆ
ಗುಹೇಶ್ವರನೆಂಬುದೊಂದು ಕಿಂಚಿತ್

೫೧೬

ಚಿಂತೆಯೆಂಬ ಹೂವಿನ ಗಿಡುವನು ನೋಡಿರೆ
ಹೊಲಗೇರಿಯಲ್ಲಿ ಬಿತ್ತುವನೆ ನೋಡಿರೆ
ಜಲಶೇಖರನ ಉದಕವನೆರದಡೆ
ಆಸೆಯೆಂಬ ಹೂವ ಕೊಯ್ದು ಕಾಮಂಗೇರಿಸುವೆನು
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ

೫೧೭

ಚಿಕ್ಕಟು ಕಡಿದಡೇನು
ಮನಕ್ಕತಿಯರಿಯದು
ಹೊಕ್ಕು ಹರಿದಡೇನು
ಹೊಲನ ಮೇಯಲರಿಯದು
ಮಕ್ಕಳ ಹಡೆದಡೇನು
ಒಕ್ಕಲೂರಾಗದು
ಲೆಕ್ಕಕ್ಕೊಂದ್ಯೆನೂರಿದ್ದಡೇತಕೆ ಬಾತೆಯಯ್ಯಾ
ಮಿಕ್ಕ ಕುಕವಿಗಳ ಅರೆವಚನ
ಹೊಲದ ಕುಕ್ಕತೆನೆಯಾದಂತೆ
ಕಾಣಾ ಸಕಳೇಶ್ವರದೇವಾ

೫೧೮

ಚಿನ್ನ ಲೋಹಾದಿಗಳು ಕರಗಿ ಒಂದುಗೂಡುವುದಲ್ಲದೆ
ಮಣ್ಣು ಬೆಂದು ಹಿಂಗಿ ಓಡಾದುದು ಸರಿಯಿಂದ ಸಂದುಗೂಡುವುದೆ
ಅರಿಯದ ಮರವೆಯ ಒಡಗೂಡಬಹುದಲ್ಲದೆ
ಅರಿತು ಹೇಳಿ ಕೇಳಿ ಮತ್ತರಿಯೆನೆಂದು
ಅಹಂಕಾರದಲ್ಲಿ ನುಡಿವವನ ಒಡಗೂಡಬಹುದೆ
ಇಂತೀ ಗುಣವ ಅರಿದು ಒಪ್ಪಿದಡೆ ಪರಕ್ಕೆ ದೂರ
ಅಲ್ಲ ಅಹುದೆಂದಡೆ ಶರಣರ ಗೆಲ್ಲ ಸೋಲದ ಹೋರಾಟ
ಇಂತಿವರೆಲ್ಲರೂ ಕೂಡಿ ನೊಂದಡೆ ನೋಯಲಿ
ನಾ ಕೊಂಡ ವ್ರತದಲ್ಲಿಗೆ ತಪ್ಪೆನು
ಇದು ವ್ರತಾಚಾರವ ಬಲ್ಲವರ ಭಾಷೆ
ಏಲೇಶ್ವರಲಿಂಗವು ಕುಲ್ಲತನವಾದಡೂ ಒಲ್ಲೆನು

೫೧೯

ಚಿನ್ನ ವಿಶೇಷ ಮಣ್ಣು ಅಧಮವೆಂದಡೆ
ಅದು ನಿಂದು ಕರಗುವುದಕ್ಕೆ
ಮಣ್ಣಿನ ಕೋವೆಯೆ ಮನೆಯಾಯಿತ್ತು
ಇಷ್ಟವನರಿವ ವಸ್ತುವ ನೆಮ್ಮುವುದಕ್ಕೆ ಇದೇ ದೃಷ್ಟ
ಐಘಟದೂರ ರಾಮೇಶ್ವರಲಿಂಗವನರಿವುದಕ್ಕೆ

೫೨೦

ಚಿನ್ನಕ್ಕರಿಸಿನ ಚಿನ್ನಕ್ಕರಿಸಿನ
ಚಿನ್ನಕ್ಕರಿಸಿನವ ಕೊಳ್ಳಿರವ್ವಾ
ಎಮ್ಮ ನಲ್ಲನ ಮೈಯ ಹತ್ತುವ
ಅರಿಸಿನವ ಕೊಳ್ಳಿರವ್ವಾ
ಒಳಗುಂದದರಿಸಿನವ ಮಿಂದು
ಚೆನ್ನಮಲ್ಲಿಕಾರ್ಜುನನ ಅಪ್ಪಿರವ್ವಾ

೫೨೧

ಚಿಲಿಮಿಲಿ ಎಂದು ಓದುವ ಗಿಳಿಗಳಿರಾ
ನೀವು ಕಾಣಿರೆ ನೀವು ಕಾಣಿರೆ
ಸರವೆತ್ತಿ ಪಾಡುವ ಕೋಗಿಲೆಗಳಿರಾ
ನೀವು ಕಾಣಿರೆ ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ
ನೀವು ಕಾಣಿರೆ ನೀವು ಕಾಣಿರೆ
ಕೊಳನತಡಿಯೊಳಾಡುವ ಹಂಸೆಗಳಿರಾ
ನೀವು ಕಾಣಿರೆ ನೀವು ಕಾಣಿರೆ
ಗಿರಿ ಗಹ್ವರದೊಳಗಾಡುವ ನವಿಲುಗಳಿರಾ
ನೀವು ಕಾಣಿರೆ ನೀವು ಕಾಣಿರೆ
ಚೆನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂದು ಹೇಳಿರೆ

೫೨೨

ಚೆನ್ನಯ್ಯನ ಮನೆಯ ದಾಸನ ಮಗನು
ಕಕ್ಕಯ್ಯನ ಮನೆಯ ದಾಸಿಯ ಮಗಳು

ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ ಸಂಗವ ಮಾಡಿದರು
ಇವರಿಬ್ಬರಿಗೆ ಹುಟ್ಟಿದ ಮಗ ನಾನು
ಕೂಡಲಸಂಗಮದೇವ ಸಾಕ್ಷಿಯಾಗಿ

೫೨೩
ಚೇಳಿಂಗೆ ಬಸುರಾಯಿತ್ತೆ ಕಡೆ
ಬಾಳೆಗೆ ಫಲವಾಯಿತ್ತೆ ಕಡೆ
ರಣರಂಗದಲ್ಲಿ ಕಾದುವ ಓಲೆಕಾರಂಗೆ ಓಸರಿಸಿತ್ತೆ ಕಡೆ
ಮಾಡುವ ಭಕ್ತಂಗೆ ಮನಹೀನವಾದಡೆ ಅದೇ ಕಡೆ
ಕೂಡಲಸಂಗಮದೇವಾ

೫೨೪
ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗಜಂಗಮವನೊಂದೆಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ

೫೨೫
ಜಂಬೂದ್ವೀಪದ ವ್ಯವಹಾರಿ
ಖಂಡಭಂಡವ ತುಂಬಿ ಕುಂಭಿನಿಯುದರದ ಮೇಲೆ ಪಸರವನಿಕ್ಕಿದ
ಉಷ್ಣತೃಷೆ ಘನವಾಗಿ ಕಡಲೇಳು ಸಮುದ್ರವ ಕುಡಿದು
ನೀರಡಸಿದಾತ ಅರಲುಗೊಂಡು ಬೆರಗಾದ
ಶಿಶು ತಾಯ ಹೆಣನ ಹೊತ್ತುಕೊಂಡು ಹೆಸರ ಹೇಳುತ್ತೈದಾನೆ
ಗುಹೇಶ್ವರನೆಂಬ ನಿಲವ ವಸುಧೆಯಾಕೃತಿ ನುಂಗಿತ್ತು

೫೨೬
ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ

ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ
ಕೂಡಲಸಂಗಮದೇವಯ್ಯಾ
ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯಾ

### ೫೨೭

ಜಗದಗಲದ ಗಗನದ ಆನೆ ಕನಸಿನಲ್ಲಿ ಬಂದು ಮೆಟ್ಟಿತ್ತ ಕಂಡೆ
ಅದೇನೆಂಬೆ ಹೇಳಾ
ಮಹಾಘನವನದೆಂತೆಂಬೆ ಹೇಳಾ
ಗುಹೇಶ್ವರನೆಂಬ ಲಿಂಗವನರಿದು ಮರೆದಡೆ
ಲೋಯಿಸರದ ಮೇಲೆ ಭಂಡಿ ಹರಿದಂತೆ

### ೫೨೮

ಜಜ್ಜನೆ ಜರಿದೆನು ಜಜ್ಜನೆ ಜರಿದೆನು
ಜಜ್ಜನೆ ಜರಿದೆ ನೋಡಯ್ಯಾ
ಬಿಬ್ಬನೆ ಬಿರಿದೆನು ಬಿಬ್ಬನೆ ಬಿರಿದೆನು
ಬಿಬ್ಬನೆ ಬಿರಿದೆ ನೋಡಯ್ಯಾ
ನಾನೊಬ್ಬನೆ ಉಳಿದೆನು ನಾನೊಬ್ಬನೆ ಉಳಿದೆನು
ನಾನೊಬ್ಬನೆ ಉಳಿದೆ ನೋಡಯ್ಯಾ
ಕೂಡಲಸಂಗಮದೇವಾ
ನಿಮ್ಮ ಶರಣರನಗಲಿದ ಕಾರಣ

### ೫೨೯

ಜನಮೆಚ್ಚೆ ಶುದ್ಧನಲ್ಲದೆ
ಮನಮೆಚ್ಚೆ ಶುದ್ಧನಲ್ಲವಯ್ಯಾ
ನುಡಿಯಲ್ಲಿ ಜಾಣನಲ್ಲದೆ
ನಡೆಯಲ್ಲಿ ಜಾಣನಲ್ಲವಯ್ಯಾ
ವೇಷದಲ್ಲಿ ಅಧಿಕನಲ್ಲದೆ
ಭಾಷೆಯಲ್ಲಿ ಅಧಿಕನಲ್ಲವಯ್ಯಾ
ಧನ ದೊರಕದಿದಡೆ ನಿಸ್ಪೃಹನಲ್ಲದೆ
ಧನ ದೊರಕಿ ನಿಸ್ಪೃಹನಲ್ಲವಯ್ಯಾ
ಏಕಾಂತದ್ರೋಹಿ ಗುಪ್ತಪಾತಕ ಯುಕ್ತಿಶೂನ್ಯಂಗೆ
ಸಕಳೇಶ್ವರದೇವ ಒಲಿ ಒಲಿಯೆಂದಡೆ ಎಂತೊಲಿವನಯ್ಯಾ

೫೩೦
ಜನಿತಕ್ಕೆ ತಾಯಾಗಿ ಹೆತ್ತಳು
ಮಾಯೆ
ಮೋಹಕ್ಕೆ ಮಗಳಾಗಿ ಹುಟ್ಟಿದಳು
ಮಾಯೆ
ಕೂಟಕ್ಕೆ ಸ್ತ್ರೀಯಾಗಿ ಕೂಡಿದಳು
ಮಾಯೆ
ಇದಾವಾವ ಪರಿಯಲ್ಲಿ ಕಾಡಿತ್ತು
ಮಾಯೆ
ಈ ಮಾಯೆಯ ಕಳೆವಡೆ ಎನ್ನಳವಲ್ಲ
ನೀವೆ ಬಲ್ಲಿರಿ
ಕೂಡಲಸಂಗಮದೇವಾ

೫೩೧
ಜಲದ ಮಂಟಪದ ಮೇಲೆ
ಉರಿಯ ಚಪ್ಪರವನಿಕ್ಕಿ
ಆಲಿಕಲ್ಲ ಹಸೆಯ ಹಾಸಿ
ಬಾಸಿಗವ ಕಟ್ಟಿ
ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ
ಬಂದು ಮದುವೆಯಾದನು
ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ
ಮದುವೆಯ ಮಾಡಿದರೆಲೆ ಅವ್ವಾ

೫೩೨
ಜವನಿದ್ದಾನೆ ಜವನ ಪಟ್ಟಣವಿದೆ
ಮಾಮರನಿದೆ ಹೂಮರನಿದೆ ತೋಮರನಿದೆ
ನೋಡಯ್ಯಾ
ಆವ ಕಾರ್ಯವಾದಡೂ ಮಾಡು
ದೇವ ಕಾರ್ಯವ ಮಾಡು
ಸಾವ ಕಾರ್ಯ ತಪ್ಪದು

ನೀ ಕೆಡಬೇಡ ಕಂಡಾ
ಬೇಗಬೇಗ ನಂಬಿ ಪೂಜಿಸು ದೇವ ಸೊಡ್ಡಳನ ಮರುಳೆ

೫೩೩

ಜಾಗ್ರದಲ್ಲಿ ಹೋಹಡೆ
ಎನ್ನ ವ್ರತಕ್ಕೆ ಅರ್ಹರಾಗಿದ್ದವರಲ್ಲಿಗಲ್ಲದೆ ಹೋಗೆನು
ಸ್ವಪ್ನದಲ್ಲಿ ಕಾಂಬಲ್ಲಿ
ಎನ್ನ ಸಮಶೀಲವಂತರನಲ್ಲದೆ ಕಾಣೆನು
ಸುಷುಪ್ತಿಯಲ್ಲಿ ತೊಳಗಿ ಬೆಳಗಿ ಆಡುವಾಗ
ಎನ್ನ ನೇಮದಲ್ಲಿಯೆ ಅಡಗುವೆ
ಈ ಸೀಮೆಯಲ್ಲಿ ತಪ್ಪಿದೆನಾದಡೆ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ ತಪ್ಪುಕನಹೆನು

೫೩೪

ಜಾತಿ ಜಾತಿಯ ಕೂಡಿದಲ್ಲದೆ ನಿಹಿತ ಸುಖವಿಲ್ಲ
ಬಲ್ಲವ ಬಲ್ಲವನಲ್ಲಿಯಲ್ಲದೆ ಒಳ್ಳೆಯ ಗುಣವಿಲ್ಲ
ಭಟ ಮುಗ್ಗಿದಡೆ ತಿಳಿದ ಭಟ ಕೈ ಹಿಡಿದೆತ್ತಿ
ಇದಿರಾಗೆಂದಡೆ ಊಣೆಯವೆಲ್ಲಿ ಅಡಗಿತ್ತು
ಕೇಳುವ ಬನ್ನಿ ಅರ್ಕೇಶ್ವರಲಿಂಗವ

೫೩೫

ಜಾತಿ ಜಾತಿಯ ಕೊಂದು
ನಿಹಿತ ಅನಿಹಿತವ ಕೆಡಿಸಿ
ಜಾತ ಅಜಾತನ ಕಂಡು ನಿಹಿತವಾಗಿರಿ
ಅರ್ಕೇಶ್ವರಲಿಂಗವನರಿವುದಕ್ಕೆ

೫೩೬

ಜೀವನೆಂಬ ಅಳತದ ಕೋಲಿನಲ್ಲಿ
ಭಾವಜ್ಞ ನಾನಾದೆನೆಂಬವರೆಲ್ಲರೂ
ಅಳತಕ್ಕೆ ಸಂದು ಹೊರಳಿ ಮರಳುತ್ತೈದಾರೆ
ಸರ್ವಸಂಗ ಪರಿತ್ಯಾಗವ ಮಾಡಿದೆನೆಂಬ ಅರುಹಿರಿಯರೆಲ್ಲರೂ

ತಥ್ಯಮಿಥ್ಯವೆಂಬ ಕೋಲಿನಲ್ಲಿ ಅಳತೆಗೊಳಗಾಗುತ್ತೈದಾರೆ
ಹಿಂದಕೊಂದು ಕುರುಹಿಲ್ಲ ಮುಂದಕೊಂದು ಲಕ್ಷ್ಯವಿಲ್ಲಾ
ಎಂದು ಹಿಂಗಿ ನುಡಿದು
ನಾವು ನಿರಂಗಿಗಳೆಂದು ಅಂಗವ ಹೊತ್ತು ತಿರುಗಾಡುವರೆಲ್ಲರು
ಬಂಧ ಮೋಕ್ಷ ಕರ್ಮಂಗಳಿಂದ
ಅಂಗಳ ಬಾಗಿಲ ವಾಸಂಗಳಲ್ಲಿ
ಬಾ ಹೋಗೆನಿಸಿಕೊಂಬ ನಿಂದೆಯ ಕೋಲಿನಲ್ಲಿ
ಅಳತಕ್ಕೊಳಗಾಹರೆಲ್ಲರು ಸರ್ವಾಂಗಲಿಂಗಿಗಳಪ್ಪರೆ
ಇದರಂದವ ತಿಳಿದು ಆರಾರ ಇರವು ಅವರಿರವಿನಂತೆ
ತಾವಾಗಿ ಅರಿದವರಲ್ಲಿ ಅರುಹಿಸಿಕೊಂಬನ್ನಕ್ಕ
ಅವರೊಡಗೂಡಿ ಅವರು ತನ್ನನರಿದ ಮತ್ತೆ
ಆ ಅರಿಕೆಯ ತೆರ ತಾನೆಂಬುದನೆ ಪ್ರಮಾಣಿಸಿ
ಪಕ್ವವಾಹನ್ನಕ್ಕ ತೊಟ್ಟಿನೊಳಗಿಪ್ಪ ಫಲದ ತೆರನಂತೆ
ಈ ದೃಷ್ಟ ತನ್ನಷ್ಟವಹನ್ನಕ್ಕ
ತನ್ನ ಕಣ್ಣಿನಿಂದ ಕನ್ನಡಿಯ ನೋಡಿ
ತನ್ನ ತಾನೆ ಅರಿವುದು ಕಣ್ಣೋ ಕನ್ನಡಿಯೋ
ಕನ್ನಡಿಯೆಂದಡೆ ಅಂಧಕಂಗೆ ಪ್ರತಿರೂಪಿಲ್ಲ
ಇದು ಕಾರಣದಲ್ಲಿ ಅವರರಿವ ತಾನರಿದು ತನ್ನರಿವ ಅವರರಿದು
ಉಭಯದರಿವು ಒಡಗೂಡುವನ್ನಕ್ಕ ಹಿಂದಣ ಕುರುಹು
ಮುಂದಣ ಲಕ್ಷ್ಯವ ವಿಚಾರಿಸಿ ಮರೆಯಬೇಕು
ಧಾರೇಶ್ವರಲಿಂಗನ ಕೂಡಬಲ್ಲಡೆ

೫೩೭

ಜೀವವಿಲ್ಲದ ಹೆಣನ ಹಿಡಿದಾಡುವರಯ್ಯ
ಪ್ರತಿಯಿಲ್ಲದ ಪ್ರತಿಗೆ ಪ್ರತಿಯ ಮಾಡುವರಯ್ಯ
ಶಿರವಿಲ್ಲದ ಮುಂಡಕ್ಕೆ ಸೇಸೆಯನಿಕ್ಕುವರು
ಗುಹೇಶ್ವರ

೫೩೮

ಜೀವವುಳ್ಳನ್ನಕ್ಕರ ಕ್ರೋಧದ ಮೂಲ
ಕಾಯವುಳ್ಳನ್ನಕ್ಕರ ಕಾಮದ ಮೂಲ

ಸಂಸಾರವ್ಯಾಪ್ತಿಯುಳ್ಳನ್ನಕ್ಕರ ಆಸೆಯ ಮೂಲ
ಇಂತಪ್ಪಾಸೆಯ ಕೆಡಿಸಿ ಶಿವಯೋಗದ ಲೇಸ ತೋರು
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ

೫೩೯

ಜೇನುತುಪ್ಪವ ಹೊತ್ತು ಮಾರುವವಳ ಮಡಕೆಯ ಮೇಲೆ
ಮೂರು ತುಂಬಿ ಕುಳಿತೈಧಾವೆ
ಒಂದು ತುಂಬಿ ಇದ್ದಿತ್ತು
ಒಂದು ತುಂಬಿ ಹಾರಿತ್ತು
ಒಂದು ತುಂಬಿ ಸತ್ತಿತ್ತು
ಮೂರು ತುಂಬಿ ಅಂದವ ಕಂಡುದಿಲ್ಲ
ಮಡಕೆ ಒಡೆಯಿತ್ತು
ತುಪ್ಪವೊಕ್ಕಿತ್ತು
ಹೊತ್ತವಳು ಸತ್ತಳು
ಇದೇನು ಕೃತ್ರಿಮವೆಂದು
ಕೇಳುವ ಬನ್ನಿ ಸದಾಶಿವಮೂರ್ತಿಲಿಂಗವ

೫೪೦

ಜ್ಞಾನ ಬಾ
ಮಾಯೆ ಹೋಗೆಂದು ಕಳುಹುತ್ತಿದ್ದೇನೆ
ಅರಿವು ಬಾ
ಅಜ್ಞಾನ ಹೋಗೆಂದು ಕಳುಹುತ್ತಿದ್ದೇನೆ
ನಿಃಕಲ ಬಾ
ಸಕಲ ಹೋಗೆಂದು ಕಳುಹುತ್ತಿದ್ದೇನೆ
ನಿಃಪ್ರಪಂಚ ಬಾ
ಪ್ರಪಂಚ ಹೋಗೆಂದು ಕಳುಹುತ್ತಿದ್ದೇನೆ
ಕೂಡಲಸಂಗಮದೇವರಲ್ಲಿ ಬಸವಣ್ಣನ ಬಲ್ಲವರನೊಳಗೆ ಕೂಡಿ
ಅರಿಯದವರ ಹೊರಗೆ ತಡೆವುತ್ತಿದ್ದೇನೆ

೫೪೧

ಜ್ಞಾನದ ಬಲದಿಂದ ಅಜ್ಞಾನದ ಕೇಡು
ನೋಡಯ್ಯಾ

ಜ್ಯೋತಿಯ ಬಲದಿಂದ ತಮಂಧದ ಕೇಡು
ನೋಡಯ್ಯಾ
ಸತ್ಯದ ಬಲದಿಂದ ಅಸತ್ಯದ ಕೇಡು
ನೋಡಯ್ಯಾ
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯಾ
ಕೂಡಲಸಂಗನ ಶರಣರ ಅನುಭಾವದ ಬಲದಿಂದ
ಎನ್ನ ಭವದ ಕೇಡು
ನೋಡಯ್ಯಾ

**೫೪೨**
ತಂದೆ ನೀನು ತಾಯಿ ನೀನು
ಬಂಧು ನೀನು ಬಳಗ ನೀನು
ನೀನಲ್ಲದೆ ಮತ್ತಾರೂ ಇಲ್ಲಯ್ಯಾ
ಕೂಡಲಸಂಗಮದೇವಾ
ಹಾಲಲದ್ದು ನೀರಲದ್ದು

**೫೪೩**
ತತ್ವಾರ್ಥವ ಬಲ್ಲವಂಗೆ
ಆ ತತ್ವಾರ್ಥವೆ ಕತ್ತಲೆಯ ಮಾಯೆ
ಆಧ್ಯಾತ್ಮವ ಬಲ್ಲವಂಗೆ
ಆ ಪವನನೆ ತನ್ನ ಸುತ್ತಿದ ಮಾಯೆ
ಕ್ರೀಭಾವವಂತರಿಗೆ
ಸಂದೇಹವೆ ತನ್ನ ಸುತ್ತಿದ ಮಾಯೆ
ಇಂತಿವನಹುದಲ್ಲಾ ಎಂಬುದು ತಾ ಮಾಯೆ
ಬಂಕೇಶ್ವರಲಿಂಗವ ಕೇಳಿಕೊಂಬ

**೫೪೪**
ತನಗೆ ಮುನಿವರಿಗೆ ತಾ ಮುನಿಯಲೇಕಯ್ಯಾ
ತನಗಾದ ಆಗೇನು ಅವರಿಗಾದ ಚೇಗೆಯೇನು
ತನುವಿನ ಕೋಪ ತನ್ನ ಹಿರಿಯತನದ ಕೇಡು
ಮನದ ಕೋಪ ತನ್ನ ಅರಿವಿನ ಕೇಡು

ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರಮನೆಯ ಸುಡುವುದೆ ಕೂಡಲಸಂಗಮದೇವಾ

೫೪೫
ತನು ಒಂದು ದ್ವೀಪ
ಮನ ಒಂದು ದ್ವೀಪ
ಆಪ್ಯಾಯನ ಒಂದು ದ್ವೀಪ
ವಚನ ಒಂದು ದ್ವೀಪ
ಇಂತೀ ನಾಲ್ಕು ದ್ವೀಪದೆಡೆಯ ಬೆಸಗೊಂಬಡೆ
ಗುಹೇಶ್ವರ ನಿಮ್ಮ ಸ್ಥಾನಂಗಳು

೫೪೬
ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು
ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು
ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು
ಅರಿವು ಕಣ್ದೆರೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು
ಭಾವಶುದ್ಧವಿಲ್ಲದವರಲ್ಲಿ ಧೂಪವನೊಲ್ಲೆಯಯ್ಯಾ ನೀನು
ಪರಿಣಾಮಿಗಳಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯಾ ನೀನು
ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲೆಯಯ್ಯಾ ನೀನು
ಹೃದಯಕಮಲ ಅರಳದವರಲ್ಲಿ ಇರಲೊಲ್ಲೆಯಯ್ಯಾ ನೀನು
ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ ಹೇಳಾ
ಚೆನ್ನಮಲ್ಲಿಕಾರ್ಜುನಯ್ಯಾ

೫೪೭
ತನು ಕರಗಿತ್ತು
ಮನ ನಿಂದಿತ್ತು
ಉಲುಹು ಅಡಗಿತ್ತು
ನೆಲೆ ನಿಂದಿತ್ತು
ಮನ ಪವನ ಬಿಂದು ಒಡಗೂಡಿತ್ತು
ಉರಿ ಎದ್ದಿತ್ತು ಊರ್ಧ್ವಕ್ಕೇರಿತ್ತು ಶರಧಿ ಬತ್ತಿತ್ತು
ನೊರೆ ತೆರೆ ಅಡಗಿತ್ತು ಅಷ್ಟಮದವೆಲ್ಲ ಹಿಟ್ಟುಗುಟ್ಟಿತ್ತು

ಕರಣಂಗಳೆಲ್ಲ ಹುರಿದು ಹೋದವು
ಸಪ್ತಧಾತು ಕೆಟ್ಟಿತ್ತು ರಸವರತಿತ್ತು ಅಪ್ಪು ಬರತಿತ್ತು
ಕೆಟ್ಟುಹೋದ ಬಿದಿರಿನಂತೆ ತೊಟ್ಟು ಬಿಟ್ಟು ಬಯಲೊಳಗೆ ಬಿದ್ದು
ನಾನೆತ್ತ ಹೋದೆನೆಂದರಿಯೆನಯ್ಯಾ ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ

೫೪೮

ತನು ತರತರಂಬೋಗಿ
ಮನವು ನಿಮ್ಮಲ್ಲಿ ಸಿಲುಕಿತ್ತಯ್ಯ
ನೋಟವೆ ಪ್ರಾಣವಾಗಿ
ಆಪ್ಯಾಯನ ನಿಮ್ಮಲ್ಲಿ ಅರತುದಯ್ಯ
ಸಿಲುಕಿತ್ತು ಶೂನ್ಯದೊಳಗೆ
ಗುಹೇಶ್ವರ ನಿರಾಳವಯ್ಯ

೫೪೯

ತನು ನಷ್ಟವಾದಡೇನಯ್ಯಾ
ಮನನಷ್ಟವಾಗದನ್ನಕ್ಕ
ವಾಕ್ಕು ನಷ್ಟವಾದಡೇನಯ್ಯಾ
ಬೇಕುಬೇಡೆಂಬುದಳಿಯದನ್ನಕ್ಕ
ಅಂಗಸುಖ ನಷ್ಟವಾದಡೇನಯ್ಯಾ
ಕಂಗಳಪಟಲಹರಿಯದನ್ನಕ್ಕ
ಮನ ಮುಗ್ಧವಾದಡೇನಯ್ಯಾ
ಅಹಂ ಎಂಬುದ ಬಿಡದನ್ನಕ್ಕ
ಇವೆಲ್ಲರೊಳಗಿದ್ದು ವಲ್ಲಭನೆನಿಸಿಕೊಂಬವರ ನುಡಿಯ ಒಲ್ಲರು
ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ

೫೫೦

ತನು ನಷ್ಟವಾದಲ್ಲಿ ಉಸುರಿಗೆ ಒಡಲಿಲ್ಲ
ಮನ ನಷ್ಟವಾದಲ್ಲಿ ಅರಿವಿಂಗೆ ತೆರಪಿಲ್ಲ
ಅರಿವು ನಷ್ಟವಾದಲ್ಲಿ ಉಭಯವ ಭೇದಿಸುವದಕ್ಕೆ ಅಪ್ರಮಾಣು
ರೂಪು ರುಚಿ ದೃಷ್ಟವಾಗಬೇಕು
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ

೫೫೧

ತನು ನಿಮ್ಮ ರೂಪಾದ ಬಳಿಕ
ಆರಿಗೆ ಮಾಡುವೆ
ಮನ ನಿಮ್ಮ ರೂಪಾದ ಬಳಿಕ
ಆರ ನೆನೆವೆ
ಪ್ರಾಣ ನಿಮ್ಮ ರೂಪಾದ ಬಳಿಕ
ಆರನಾರಾಧಿಸುವೆ
ಅರಿವು ನಿಮ್ಮಲ್ಲಿ ಸ್ವಯವಾದ ಬಳಿಕ
ಆರನರಿವೆ
ಚೆನ್ನಮಲ್ಲಿಕಾರ್ಜುನಯ್ಯಾ
ನಿಮ್ಮಿಂದ ನೀವೆಯಾದಿರಾಗಿ
ನಿಮ್ಮನೆ ಅರಿವುತ್ತಿರ್ದೆನು

೫೫೨

ತನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ಬೆಲೆವೆಣ್ಣಿನಂತೆ
ಸೂಳೆ ತನುಮುಟ್ಟಿ ಅಪ್ಪುವಳಲ್ಲದೆ ಮನಮುಟ್ಟಿ ಅಪ್ಪಳಾಗಿ
ಆಚಾರವನರಿಯದ ಅರೆಮರುಳುಗಳು ಶಿವಸುಖವನೆತ್ತ ಬಲ್ಲರು
ಕೂಡಲಚೆನ್ನಸಂಗಮದೇವಾ

೫೫೩

ತನುವ ಪಡದು ಧನವ ಗಳಿಸಬೇಕೆಂದು
ಮನುಜರ ಮನೆಯ ಬಾಗಿಲಿಗೆ ಹೋಗಿ
ಮನಬಂದ ಪರಿಯಲ್ಲಿ ನುಡಿಸಿಕೊಂಡು
ಮನನೊಂದು ಬೆಂದು ಮರುಗುತ್ತಿರಲಾರೆ
ಸಕಳೇಶ್ವರದೇವಾ
ನೀ ಕರುಣಿಸಿ ಇದ ಠಾವಿನಲ್ಲಿ ಇಹಂಥಾ
ಪರಮಸುಖ ಎಂದು ದೊರಕೊಂಬುದೊ

೫೫೪

ತನುವ ಬೇಡಿದಡೀವೆ
ಮನವ ಬೇಡಿದಡೀವೆ

ಧನವ ಬೇಡಿದಡೀವೆ
ಬೇಡು ಬೇಡೆಲೆ ಹಂದೆ
ಕಣ್ಣ ಬೇಡಿದಡೀವೆ
ತಲೆಯ ಬೇಡಿದಡೀವೆ
ಕೂಡಲಸಂಗಮದೇವಾ
ನಿಮಗಿತ್ತು ಶುದ್ಧನಾಗಿಪ್ಪೆ
ನಿಮ್ಮ ಪುರಾತರ ಮನೆಯಲ್ಲಿ

೩೩೩
ತನುವಿಂಗೆ ತನುವಾಗಿ ಮನಕ್ಕೆ ಮನವಾಗಿ
ಜೀವಕ್ಕೆ ಜೀವವಾಗಿ ಇದ್ದುದನಾರು ಬಲ್ಲರೋ
ಅದು ದೂರವೆಂದು ಸಮೀಪವೆಂದು
ಮಹಂತ ಗುಹೇಶ್ವರನೊಳಗೆಂದು ಹೊರಗೆಂದು
ಬರುಸೂರೆವೋದರು

೩೩೬
ತನುವಿನ ಕೊರತೆಗೆ ಸುಳಿಸುಳಿದು
ಮನದ ಕೊರತೆಗೆ ನೆನೆನೆನೆದು
ಭಾವದ ಕೊರತೆಗೆ ತಿಳಿತಿಳಿದು
ಶಬ್ದದ ಕೊರತೆಗೆ ಉಲಿಉಲಿದು
ಗುಹೇಶ್ವರನೆಂಬ ಲಿಂಗ ಮನದಲ್ಲಿ ನೆಲೆಗೊಳ್ಳದಾಗಿ

೩೩೭
ತನುವಿನೊಳಗೆ ತನುವಾಗಿ
ಮನದೊಳಗೆ ಮನವಾಗಿ
ಪ್ರಾಣದೊಳಗೆ ಪ್ರಾಣವಾಗಿಪ್ಪುದೆಂದಡೆ
ಕೆಲಬರಿಗೆ ಅರಿಯಬಪ್ಪುದೆ
ಅಂತರಂಗದೊಳಗೆ ಅದೆ ಎಂದಡೇನು
ಮನ ಮುಟ್ಟುವನ್ನಕ್ಕರ ಕಾಣಬಾರದು
ಬಹಿರಂಗದಲ್ಲಿ ಅದೆ ಎಂದಡೇನು
ಪೂಜಿಸುವನ್ನಕ್ಕರ ಕಾಣಬಾರದು

ಸಾಕಾರವಲ್ಲದ ನಿರಾಕಾರ ಲಿಂಗವು
ವ್ಯಾಕುಲವುಳ್ಳನ್ನಕ್ಕರ ಸಾಧ್ಯವಾಗದು
ಎನ್ನ ಮನದೊಳಗೆ ಘನವನನುಗೊಳಿಸಿ ತೋರುವರಿಲ್ಲದ ಕಾರಣ
ಎನ್ನ ಅಜಗಣ್ಣನಿಕ್ಕಿದ ದಸರಿದೊಡಕಿಂಗೆ
ಬೆರಗಾದೆ ಕಾಣಾ [ಪ್ರಭುವೆ]

**೫೫೮**

ತನುವೀವಡೆ ತನುವೆನಗಿಲ್ಲ
ಮನವೀವಡೆ ಮನವೆನಗಿಲ್ಲ
ಇಂತೀ ತನುಮನಧನ ಸಕಲಸಂಪತ್ತುಳ್ಳ
ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು
ಎನ್ನೊಡಲ ಹೊರೆವೆನಲ್ಲದೆ
ಅಮರೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ
[ಸಂಗನಬಸವಣ್ಣಾ]

**೫೫೯**

ತನುವೆಂಬ ಹುತ್ತಕ್ಕೆ ಮನವೆಂಬ ಸರ್ಪ ಆವರಿಸಿ
ಹೆಡೆಯೆತ್ತಿ ಆಡುತ್ತಿರಲು
ಆ ಸರ್ಪನ ಕಂಡು ನಾ ಹೆದರಿಕೊಂಡು
ಗುರುಕರುಣವೆಂಬ ಪರುಷವ ತಂದು ಮುಟ್ಟಿಸಲು
ನೋಟ ನಿಂದಿತ್ತು
ಹೆಡೆ ಅಡಗಿತ್ತು
ಹಾವು ಬಯಲಾಯಿತ್ತು
ಆ ಗುರುಕರುಣವೆಂಬ ಪರುಷವೆ ನಿಂದಿತ್ತು
ನಿಂದ ಪರುಷವನೆ ಕೊಂಡು ನಿಜದಲ್ಲಿ ನಿರ್ವಯಲಾಗುವ
ಶರಣರ ಪಾದವ ನಂಬಿ ಕೆಟ್ಟು ಬಟ್ಟಬಯಲಾದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ

**೫೬೦**

ತನ್ನ ತಾನರಿದಡೆ ತನ್ನರಿವೆ ಗುರು
ತಾನೆ ಲಿಂಗ ತನ್ನ ನಿಷ್ಠೆಯೇ ಜಂಗಮ

ಇಂತೀ ತ್ರಿವಿಧವು ಒಂದಾದಡೆ
ಐಘಟದೂರ ರಾಮೇಶ್ವರಲಿಂಗವು ತಾನೆ

೫೬೧
ತನ್ನ ದೇಹ ತನಗೆ ಹೊರೆಯಾದ ಮತ್ತೆ ತಾ ಹೊರುವುದೇನು
ತಾ ಹೇಳುವ ಅರಿವು ತನಗೆ ಮರವೆಯಾದ ಮತ್ತೆ
ತಾನರಿವುದೇನು
ಇದು ಕಾರಣ ತ್ರಿಪುರಾಂತಕ ಲಿಂಗದಲ್ಲಿ
ಗಾವುದಿ ಮಾಚಯ್ಯ ಹೇಳಿದುದ ದಿಟವೆನ್ನಿರಣ್ಣಾ

೫೬೨
ತನ್ನದಾದಡೇನೋ ಕನ್ನಡಿ
ಅನ್ಯರದಾದಡೇನೋ ಕನ್ನಡಿ
ತನ್ನ ರೂಪ ಕಂಡಡೆ ಸಾಲದೆ
ಸದ್ಗುರು ಆವನಾದಡೇನೋ
ತನ್ನನರುಹಿಸಿದಡೆ ಸಾಲದೆ
ಸಿಮ್ಮಲಿಗೆಯ ಚೆನ್ನರಾಮಾ

೫೬೩
ತನ್ನಾಶ್ರಯದ ರತಿಸುಖವನು ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ
ತನ್ನ ಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ
ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ

೫೬೪
ತಪವೆಂಬುದು ತಗಹು
ನೇಮವೆಂಬುದು ಬಂಧನ
ಶೀಲವೆಂಬುದು ಸೂತಕ

ಭಾಷೆಯೆಂಬುದು ಪ್ರಾಣಘಾತಕ
ಇಂತೀ ಚತುರ್ವಿಧದೊಳಗಿಲ್ಲ
ಗುಹೇಶ್ವರ
ನಿಮ್ಮ ಶರಣರಗ್ರಗಣ್ಯರು

೫೬೫
ತಮತಮಗೆ ಸಮತೆಯನು ಹೇಳಬಹುದಲ್ಲದೆ
ತಮತಮಗೆ ಸಮತೆಯನು ಆಡಬಹುದಲ್ಲದೆ
ಕನಲಿಕೆಯ ಕಳೆದಿಪ್ಪವರಾರು ಹೇಳಾ
ಒಬ್ಬರೊಬ್ಬರ ಹಳಿಯದಿಯಪ್ಪವರಾರು ಹೇಳಾ
ಮುನಿಸ ಮುಂದಿಟ್ಟಿಪ್ಪರು
ಇದು ಯೋಗಿ ಮಹಾಯೋಗಿಗಳಿಗರಿದಪ್ಪುದು
ನೋಡಾ
ಸಕಳೇಶ್ವರದೇವಾ
ನೀನು ಕರುಣಿಸಿದವರಿಗಲ್ಲದೆಯಿಲ್ಲಾ

೫೬೬
ತಮ್ಮ ತಮ್ಮ ಗಂಡರು ಚೆಲುವರೆಂದು
ಕೊಂಡಾಡುವ ಹೆಣ್ಣುಗಳು ಪುಣ್ಯಜೀವಿಗಳವ್ವಾ
ನಾನೆನ್ನ ನಲ್ಲನೆಂಥಾವನೆಂದರಿಯೆನವ್ವಾ
ಮಹಾಲಿಂಗ ಗಜೇಶ್ವರದೇವನು ನಿರಿಯ ಸೆರಗ ಸಡಿಲಿಸಲೊಡನೆ
ಆನೇನೆಂದರಿಯೆನವ್ವಾ

೫೬೭
ತಲೆಯಲ್ಲಿ ನಿರಿ ಟೊಂಕದಲ್ಲಿ ಮುಡಿ
ಮೊಳಕಾಲಲ್ಲಿ ಕಿವಿಯೋಲೆಯ ಕಂಡೆ
ಹರವಸದ ಉಡಿಗೆ
ಏಕಾಂತದಲ್ಲಿ ಮುಖವ ಕಂಡು ಕಾಣದೆ
ಚೆನ್ನಮಲ್ಲಿಕಾರ್ಜುನನ ನೆರೆವ ಪರಿಕರ ಹೊಸತು

೫೬೮
ತವನಿಧಿಯ ಬೆಳೆವಂಗೆ ಕಣಜದ ಹಂಗುಂಟೆ
ವಿರಕ್ತಂಗೆ ಆರೈಕೆಗೊಂಬವರುಂಟೆ
ಕಾಯಕವ ಮಾಡುವ ಭಕ್ತಂಗೆ ಇನ್ನಾರುವ ಕಾಡಲೇತಕ್ಕೆ
ಆ ಗುಣ ಅಮರೇಶ್ವರಲಿಂಗಕ್ಕೆ ದೂರ

೫೬೯
ತಾ ನಡೆವಡೆ
ನಡೆಗೆಟ್ಟ ನಡೆಯ ನಡೆಯ ಬೇಕು
ತಾ ನುಡಿವಡೆ ನುಡಿಗೆಟ್ಟ
ನುಡಿಯ ನುಡಿಯ ಬೇಕು
ರೂಹಿಲ್ಲದ ಸಂಗವ ಮಾಡಬೇಕು
ಭವವಿಲ್ಲದ ಭಕ್ತಿಯ ಮಾಡಬೇಕು
ತಾನಾವನೆಂದರಿಯದಂತಿಹುದು
ಗುಹೇಶ್ವರ

೫೭೦
ತಾ ಮಾಡಿದ ಹೆಣ್ಣು
ತನ್ನ ತಲೆಯನೇರಿತ್ತು
ತಾ ಮಾಡಿದ ಹೆಣ್ಣು
ತನ್ನ ತೊಡೆಯನೇರಿತ್ತು
ತಾ ಮಾಡಿದ ಹೆಣ್ಣು
ಬ್ರಹ್ಮನ ನಾಲಿಗೆಯನೇರಿತ್ತು
ತಾ ಮಾಡಿದ ಹೆಣ್ಣು
ನಾರಾಯಣನ ಎದೆಯನೇರಿತ್ತು
ಅದು ಕಾರಣ ಹೆಣ್ಣು ಹೆಣ್ಣಲ್ಲ
ಹೆಣ್ಣು ರಾಕ್ಷಸಿಯಲ್ಲ
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ
ನೋಡಾ

೫೭೧

ತಾ ಮಿಥ್ಯನಾದ ಮತ್ತೆ ಜಗವೆಲ್ಲವೂ ತನಗೆ ಮಿಥ್ಯ
ತಾ ತಥ್ಯನಾದ ಮತ್ತೆ ಜಗವೆಲ್ಲವೂ ತನಗೆ ತಥ್ಯ
ಅಂಗೈಯಲ್ಲಿ ಹಿಡಿದು ಕೈದ ನೋಡದೆ
ಅಲಗು ಕೆಟ್ಟಿತ್ತೆಂದು ಹಲಬುವನಂತಾಗದೆ
ತನ್ನ ತಾ ಮರದು ಅನ್ಯರ ದೆಸೆಯಿಂದ ತನ್ನ ಕೇಳುವನಂತಾಗದೆ
ಅರಿ ನಿಜದರಿವ ಮರೆಯದಂತೆ
ಕಾಲಕರ್ಮವಿರಹಿತ ತ್ರಿಪುರಾಂತಕಲಿಂಗದೊಳಗಾದವನ ಇರವು

೫೭೨

ತಾ ವ್ರತಿಯಾಗಿ ಮಕ್ಕಳೆಂದು ಮಾಡದಿರ್ದಡೆ
ಆ ವ್ರತಕ್ಕೆ ತಾನೆ ಹೊರಗು
ತನ್ನಂಗ ಮನ ಭಾವ ಕರಣಂಗಳಲ್ಲಿ ಸಂಗದಲ್ಲಿ ಇದ್ದವರಿಗೆಲ್ಲಕ್ಕೂ
ತನ್ನಂಗದ ವ್ರತವ ಮಾಡಬೇಕು
ಇದು ಸೀಮೆವಂತರ ಯುಕ್ತಿ
ಆಚಾರವೆ ಪ್ರಾಣವಾದ ರಮೇಶ್ವರಲಿಂಗದಾಚಾರದ ಸೊತ್ತು

೫೭೩

ತಾ ಸುಖಿಯಾದಡೆ
ನಡೆಯಲು ಬೇಡ
ತಾ ಸುಖಿಯಾದಡೆ
ನುಡಿಯಲು ಬೇಡ
ತಾನು ಸುಖಿಯಾದಡೆ
ಪೂಜಿಸಲು ಬೇಡ
ಉಣಬೇಡ
ಗುಹೇಶ್ವರ

೫೭೪

ತಾನು ದಂಡುಮಂಡಲಕ್ಕೆ ಹೋದಹೆನೆಂದಡೆ
ನಾನು ಸುಮ್ಮನಿಹೆನಲ್ಲದೆ
ತಾನೆನ್ನ ಕೈಯೊಳಗಿದ್ದು

ತಾನೆನ್ನ ಮನದೊಳಗಿದ್ದು
ಎನ್ನ ಕೂಡದಿದ್ದಡೆ ನಾನೆಂತು ಸೈರಿಸುವೆನವ್ವಾ
ನೆನಹೆಂಬ ಕುಂಟಣಿ ಚೆನ್ನಮಲ್ಲಿಕಾರ್ಜುನನ
ನೆರಹದಿದ್ದಡೆ ನಾನೇವೆ ಸಖಿಯೆ

## ೫೭೫

ತಾಯ ಗರ್ಭದ ಶಿಶು ತಾಯ ಕುರುಹನರಿಯದು
ಆ ತಾಯಿ ಶಿಶುವಿನ ಕುರುಹನೆಂದೂ ಅರಿಯಳು
ಮಾಯಾಮೋಹದಲ್ಲಿಪ್ಪ ಭಕ್ತರು ದೇವರನರಿಯರು
ಆ ದೇವರು ಆ ಭಕ್ತರನೆಂದೂ ಅರಿಯನು
ಕಾಣಾ ರಾಮನಾಥ

## ೫೭೬

ತಾಯ ತೊರೆದು ನಾನೇನು ಮಾಡುವೆ
ತಂದೆಯ ತೊರೆದು ನಾನೇನು ಮಾಡುವೆ
ಎತ್ತ ಮುಂತಾಗಿ ನಡೆದು ನಾನೇನ ಮಾಡುವೆ
ಚನ್ನಮಲ್ಲಿಕಾರ್ಜುನ ನೀನೊಲಿಯದನ್ನಕ್ಕರ

## ೫೭೭

ತಾಯಿ ಬಂಜೆಯಾದಲ್ಲದೆ ಶಿಶು ಗತವಾಗದು
ಬೀಜ ನಷ್ಟವಾದಲ್ಲದೆ ಸಸಿ ಗತವಾಗದು
ನಾಮ ನಷ್ಟವಾದಲ್ಲದೆ ನೇಮ ನಷ್ಟವಾಗದು
ಮೊದಲು ಕೆಟ್ಟಲ್ಲದೆ ಲಾಭದಾಸೆ ಬಿಡದು
ಗುಹೇಶ್ವರಲಿಂಗದ ನಿಜವನೆಯ್ದುವಡೆ
ಪೂಜೆಯ ಫಲ ಮಾದಲ್ಲದೆ ಭವಂ ನಾಸ್ತಿಯಾಗದು

## ೫೭೮

ತಾಳಮರದ ಕೆಳಗೆ ಒಂದು ಹಾಲ ಹರವಿಯಿದ್ದಡೆ
ಅದ ಹಾಲಹರವಿಯೆನ್ನರು
ಸುರೆಯ ಹರವಿಯೆಂಬರು
ಈ ಭಾವನಿಂದೆಯ ಮಾಣಿಸಾ
ಕೂಡಲಸಂಗಮದೇವಾ

೫೭೯
ತಾಳಮಾನ ಸರಿಸವನರಿಯೆ
ಓಜೆ ಬಜಾವಣೆಯ ಲೆಕ್ಕವನರಿಯೆ
ಅಮೃತಗಣ ದೇವಗಣವನರಿಯೆ
ಕೂಡಲಸಂಗಮದೇವಾ
ನಿನಗೆ ಕೇಡಿಲ್ಲವಾಗಿ
ಆನು ಒಲಿದಂತೆ ಹಾಡುವೆ

೫೮೦
ತೀವಿ ಕುಳ್ಳಿರ್ದ ಸಭೆ ಈಯ ಬಲ್ಲುದೆ ದಾನವ
ಸಾವರೆ ಸಂಗ್ರಾಮಕ್ಕೆ ಹೋದವರೆಲ್ಲ
ಇರಿಯಬಲ್ಲರೆ ನೂರಕ್ಕೊಬ್ಬ ಸಹಸ್ರಕ್ಕೊಬ್ಬ
ಹುಣಿಸೆಯ ಹೂವೆಲ್ಲ ಕಾಯಾಗಬಲ್ಲುದೆ
ರಾಮನಾಥ

೫೮೧
ತುಂಬಿ ಬಂದಡೆ ಪರಿಮಳ ಓಡಿತ್ತ ಕಂಡೆ
ಏನು ಸೋಜಿಗ ಹೇಳಾ
ಮನ ಬಂದಡೆ ಬುದ್ಧಿ ಓಡಿತ್ತ ಕಂಡೆ
ದೇವ ಬಂದಡೆ ದೇಗುಲ ಓಡಿತ್ತ ಕಂಡೆ
ಗುಹೇಶ್ವರ

೫೮೨
ತುಂಬಿದುದು ತುಳುಕದು
ನೋಡಾ
ನಂಬಿದುದು ಸಂದೇಹಿಸದು
ನೋಡಾ
ಒಲಿದುದು ಓಸರಿಸದು
ನೋಡಾ
ನೆರೆಯರಿದುದು ಮರೆಯದು
ನೋಡಾ

ಚೆನ್ನಮಲ್ಲಿಕಾರ್ಜುನಯ್ಯಾ
ನೀನೊಲಿದ ಶರಣಂಗೆ ನಿಸ್ಸೀಮಸುಖವಯ್ಯಾ

**೫೮೩**

ತುರುಬು ಜಡೆ ಬೋಳು ಬಿಡುಗುರುಳು
ಇವೆಲ್ಲವೂ ರುದ್ರನ ಅಡಿವೆಜ್ಜೆಯ ಕುರುಹು
ಇಂತೀ ಕುರುಹಿನ ಮುದ್ರೆಗಳಲ್ಲಿ ಬಂದು
ತಮ್ಮಡಿಯ ಇರವನರಿಯದೆ
ಬರಿಯ ಬೊಮ್ಮವನಾಡಿ ನುಡಿವರ
ಸರ್ವಾಂಗದ ತೊಡಿಗೆಯ ಬಂಡೆ ಸಿಡಿಹಿಂಗೆ
ಕತ್ತರಿ ತರುಬಿಂಗೆ ಬೆಳೆದುದಕ್ಕೆ ತೊರೆಗೂರ
ಮತ್ತೆ
ಹರಿವ ನಖಕ್ಕೆ ಕಡಿಚಣ
ಮತ್ತೆ
ಉಸುರಿನ ದೆಸೆಯ ನಾಸಿಕಕ್ಕೆ ಕಸನ ತೆಗೆಯುವುದಕ್ಕೆ ಅಂಗುಲ ಸಂಗಿ
ಇಂತೀ ಕಾಯಕದ ಬೆಂಬಳಿಯಲ್ಲಿ ತಂದನೆನ್ನ ಬಸವಣ್ಣ
ಆತನಂಗದ ದೆಸೆಯಿಂದ ಬಂದೆ ಕನ್ನಡಿವಿಡಿದು
ಆ ಕನ್ನಡಿಯ ದೆಸೆಯಿಂದ ನಿಮ್ಮ ಕಂಗಳಲ್ಲಿ ನೋಡಿ
ನಿಮ್ಮ ಮಲವ ನೀವೇ ಪರಿಹರಿಸಿಕೊಳ್ಳಿ ಎನಗನ್ಯ ಭಿನ್ನವಿಲ್ಲ
ಕಮಳೇಶ್ವರ ಲಿಂಗವು ಕಳುಹಿದ ಮಣಿಹ

**೫೮೪**

ತೆಂಗಿನೊಳಗಣ ತಿರುಳು ಸೇವಿಸಬರ್ಪುದಲ್ಲದೆ
ಹೊರಗಣ ಪರಟೆ ಸೇವಿಸಲು ಬಾರದು
ಚಾಂಡಾಲಂಗೆ ಜ್ಞಾನವಂಕುರಿಸಿದಡೆ
ಆತನ ಅಂತರಂಗದ ವೃತ್ತಿಗೆ ಪೂಜ್ಯತೆಯಲ್ಲದೆ
ಬಹಿರಂಗದ ತನುವಿಗೆ ಪೂಜ್ಯತೆಯಾಗದು
ಒಳಹೊರಗೆಂಬ ಭೇದವಿಲ್ಲದೆ ಸೇವಿಸಲುಚಿತವಪ್ಪಂತೆ
ಶಿವಕುಲಪ್ರಸೂತಂಗೆ ಶಿವಜ್ಞಾನವಾಗಲು
ಆತನ ತನುವೃತ್ತಿಗಳೆರಡೂ ಸೇವ್ಯವಾಗಿರ್ಪವು
ಇಂತಿದು ಸಾಧಕರ ಸ್ಥಿತಿಯಯ್ಯಾ
ಕೂಡಲಚೆನ್ನಸಂಗಮದೇವಾ

೫೮೫

ತೆಪ್ಪದ ಮೇಲೆ ನಿಂದು
ಒತ್ತುವ ಕ್ರೀಯೇ ಲಿಂಗವಾಗಿ
ಹಿಡಿವ ಕಣೆಯೇ ಅರಿವ ಮುಖವಾಗಿ
ವ್ಯಾಪಕವೆಂಬ ಹೊಳೆ ದಾಂಟುವುದಕ್ಕೆ ಇದೆ ಪಥ
ಸದಾಶಿವಮೂರ್ತಿಲಿಂಗವನರಿವುದಕ್ಕೆ

೫೮೬

ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯ ಮಾಡಿ
ತನ್ನ ನೂಲು ತನ್ನನೆ ಸುತ್ತಿ ಸಾವಂತೆ
ಮನಬಂದುದನು ಬಯಸಿ ಬೇವುತ್ತಿದ್ದೇನಯ್ಯಾ
ಎನ್ನ ಮನದ ದುರಾಶೆಯ ಮಾಣಿಸಿ
ನಿಮ್ಮತ್ತ ತೋರಾ
ಚೆನ್ನಮಲ್ಲಿಕಾರ್ಜುನಾ

೫೮೭

ತೆರೆಯ ಮರೆಯ ಬಹು ರೂಪದಂತೆ
ಸೀರೆಯ ಮರೆಯ ಉಪಸ್ಥಳದಂತೆ
ಆ ಪೂರ್ವ ಕಟ್ಟಿದ ಮರೆಯ ಬಿಡುವನ್ನಕ್ಕ
ಸೈರಿಸಲಾರದವನಂತೆ ಎನ್ನ ತಲ್ಲಣ
ನಿನ್ನಯ ಕಲ್ಲಿನ ಮರೆಯ ನನ್ನಿಯ ರೂಪ ತೋರು
ಎನ್ನಯ ಕಲ್ಲೆದೆಯ ಬಿಡಿಸು ಮನೋವಲ್ಲಭ
ಅಲೇಖನಾದ ಶೂನ್ಯ
ಉರಿಗಲ್ಲಿನ ಖುಲ್ಲತನವ ಬಿಡು
ಬೇಡಿಕೊಂಬೆ ನಿನ್ನನು

೫೮೮

ತೊಗಲ ಸೀರೆಯ ತೆರೆಯ ಹಿಡಿದು
ಬಲು ಎಲುವಿನ ಗಳುವಿನಲ್ಲಿ
ನರವಿನ ಭೀಮಗಟ್ಟಂ ಕಟ್ಟಿ
ತೆರೆ ನಿಂದಿತ್ತು ಜವನಿಕೆಯ ಮರೆಯಲ್ಲಿ

ಬಂದು ನಿಂದು ಜಜ್ಜರೆ ಪುರೆ[ಹರೆ]ಯಾಯಿತ್ತು
ಹೋಯಿತ್ತು ಎಂಬ ಬಹುರೂಪಮಂ ತೊಟ್ಟು
ರೇಕಣ್ಣಪ್ರಿಯ ನಾಗಿನಾಥಾ
ಭಲರೆ ಧರುರೆ ಎನುತಿರ್ದೆನು

೫೮೯
ತೊರೆಯ ಮೀವ ಅಣ್ಣಗಳಿರಾ
ತೊರೆಯ ಮೀವ ಸ್ವಾಮಿಗಳಿರಾ
ತೊರೆಯಿಂ ಭೋ ತೊರೆಯಿಂ ಭೋ
ಪರನಾರಿಯರ ಸಂಗವ ತೊರೆಯಿಂ ಭೋ
ಪರಧನದಾಮಿಷವ ತೊರೆಯಿಂ ಭೋ
ಇವ ತೊರೆಯದೆ ಹೋಗಿ ತೊರೆಯ ಮಿಂದಡೆ
ಬರುದೊರೆ ಹೋಹುದು
ಕೂಡಲಸಂಗಮದೇವಾ

೫೯೦
ತೊರೆಯ ಹಾವನ್ನಕ್ಕ ಒಂದು ಹರುಗೋಲ ಬೇಕು
ಹರುಗೋಲದೊಳಗಿಹನ್ನಕ್ಕ ಒಂದು ಅಡಿಗಟ್ಟಿಗೆ ಬೇಕು
ತೊರೆ ಬತ್ತಿ ಹರುಗೋಲ ಹಾಕಿ ಅಡಿಗಟ್ಟಿಗೆ ಮುರಿದಲ್ಲಿ
ತ್ರಿವಿಧವಲ್ಲಿ ನಾನಿಲ್ಲಿ ನೀನೆಲ್ಲಿ
ಮನಸಂದಿತ್ತು ಮಾರೇಶ್ವರಾ

೫೯೧
ತೊಳಸಿಯ ಗಿಡುವ ಮೆಲಲಾರದೆ ಕಿವಿಯೊಳಗಿಕ್ಕಿದೆ
ಕಲಸಿದ ನಾಮಕ್ಕೆ ಹಣೆಯ ಕಾಣದೆ ಎದೆಯೊಳಗಿಕ್ಕಿದೆ
ತಾವರೆಯ ಮಣಿಯ ತಾವಡಿಸೂದಕ್ಕೆ
ಠಾವ ಕಾಣದೆ ಡಾವರಿಸುತ್ತಿದ್ದೆ
ಇದಕಿನ್ನಾವುದು ಹದನಯ್ಯಾ
ಎನ್ನ ನಿಮ್ಮ ದಾಸೋಹದ ದಾಸನ ಮಾಡಿಸಯ್ಯಾ
ನಾರಾಯಣಪ್ರಿಯ ರಾಮನಾಥಾ

೫೯೨
ದಯವಿಲ್ಲದ ಧರ್ಮವದೇವುದಯ್ಯಾ
ದಯವೇ ಬೇಕು ಸಕಲಪ್ರಾಣಿಗಳೆಲ್ಲರಲ್ಲಿಯು
ದಯವೇ ಧರ್ಮದ ಮೂಲವಯ್ಯಾ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯಾ

೫೯೩
ದರಿದ್ರ ಧನಾಢ್ಯಂಗಂಜುವನಲ್ಲದೆ
ದರಿದ್ರಂಗಂಜುವನೆ
ದೊರೆ ಮಹಾದೊರೆಗಂಜುವನಲ್ಲದೆ
ದೊರೆತನಕ್ಕಂಜುವನೆ
ಪರಶಿವಯೋಗಿ ಅಂತರ್ಯಾಮಿಗಂಜುವನಲ್ಲದೆ
ಲೋಕದ ಗುಂಗಿಗಳಿಗಂಜುವನೆ
ಕಪಿಲಸಿದ್ಧಮಲ್ಲಿಕಾರ್ಜುನ

೫೯೪
ದರ್ಪಣದೊಳಗಣ ರೂಹಿಂಗೆ ಆ ದರ್ಪಣವೆ ಉತ್ಪತ್ತಿಸ್ಥಿತಿಲಯವಲ್ಲದೆ
ಮರ್ತ್ಯಲೋಕದೊಳಗಣಾಕೃತಿಯಲ್ಲಿಲ್ಲವೇಕಯ್ಯ
ಆ ಲೋಕದೊಳಗೆ ಉತ್ಪತಿಸ್ಥಿತಿಲಯವಿದೇನಯ್ಯ ಕರ್ಮಬದ್ಧರು
ಒಂದರ ಪರಿ ಒಂದಕ್ಕಿಲ್ಲ ಕಂಡಿರೆ
ದೃಷ್ಟವಹ ಗುರುಹಸ್ತದೊಳಗಣ ಸದ್ಭಕ್ತಂಗೆ
ಅಲ್ಲಿಯೆ ಉತ್ಪತಿಸ್ಥಿತಿಲಯ
ಇದೆಂತಹ ಕರ್ಮದ ಪರಿಯೋ
ಮತ್ತಾವ ಪರಿಯೂ ಅಲ್ಲ
ಲಿಂಗದ ಪರಿಯ ಮಾಡಿದ ಗುಹೇಶ್ವರ

೫೯೫
ದಳ್ಳುರಿಯಲ್ಲಿಗೆ ಹೋದಡೆ
ಮೆಲ್ಲನೆ ಮುಟ್ಟುವುದೆ ಅಯ್ಯಾ
ಬಲ್ಲವ ಗೆಲ್ಲ ಸೋಲಕ್ಕೆ ಹೋರಿದಡೆ
ಕಲ್ಲುಹೃದಯಿ ಬಲ್ಲನೆ ಬಲ್ಲವನಿರವ

ಇದೆಲ್ಲಕ್ಕೂ ಸಾಧ್ಯವಲ್ಲ
ನಿಃಕಳಂಕ ಮಲ್ಲಿಕಾರ್ಜುನಾ

೫೯೬
ದಿನ ಒಂದರಲ್ಲಿ ವಾರ ಏಳು
ನೋಡಾ
ಆ ಏಳು ವಾರಗಳೆಂಬುವುದು ಕಲ್ಪಿತವಲ್ಲದೆ
ದೃಷ್ಟಿಯನ್ನಿಟ್ಟು ನೋಡಬಾರದು
ನೋಡಾ
ದೇವರೆಂಬುವುದೊಂದು
ನೋಡಾ
ಆ ದೇವರೆಂಬುವುದೊಂದರಲ್ಲಿ
ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ವಿರಾಟ್ಪುರುಷರೆಂಬುವುದು
ನೋಡಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ

೫೯೭
ದಿನಚರಿಯೆಂಬ ಪಟ್ಟಣದಲ್ಲಿ
ಕನಕರತಿಯೆಂಬರಸು
ಮನಸಿಜನೆಂಬ ಪ್ರಧಾನ
ಕನಸಕಂಡಡೆ ಅರಿವ ತಮಸೂನು ತಳವಾರ
ಇವರೆಲ್ಲರ ವಂಚಿಸಿ, ಅರಸಿನ ಹೆಂಡತಿ
ಹೆಂಡವ ಕುಡಿವವನ ಅಂಗದಲ್ಲಿ ಸಿಕ್ಕಿದಳು
ಪ್ರಧಾನ ಕಂಡ
ಅರಸು ತಳವಾರ ಕಂಡುದಿಲ್ಲ
ಮನಸಿಜ ಕಂಡು ಬದುಕಿದೆ ಹೋಗೆಂದ
ಅರಸಿಗೆ ಕೂಪನಾದ
ಮಾನಹಾನಿಗೆ ಕೇಡಿಲ್ಲದಂತೆ
ಇಂತೀ ಭೇದವನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ

೫೯೮

ದೀಪದ ಕೊನೆಯ ಮೊನೆಯ ಮೇಲಿದ್ದುದು
ತಮವೋ ಬೆಳಗೋ
ಮನದ ಕೊನೆಯ ಮೇಲಿದ್ದುದು
ಅರಿವೊ ಮರವೆಯೋ
ಬೀಜದ ಕೊನೆಯ ಮೊನೆಯ ಮೇಲಿದ್ದುದು
ಮುಂದಕ್ಕದು ಬೀಜವೋ ಸಂದೇಹವೋ
ಅರಿವುದಕ್ಕೆ ತೆರಹಿಲ್ಲ
ಮರೆವುದಕ್ಕೆ ಒಡಲಿಲ್ಲ
ಅದರ ಹೂ ಮುಡಿಯಲ್ಲಿದ್ದು ಬಿಡುಗಡೆಯಾದೆ
ನಿಃಕಳಂಕ ಮಲ್ಲಿಕಾರ್ಜುನಾ

೫೯೯

ದೀಪದಂತಿಹ ಜನ್ಮ
ಬಂದುದು ತಿಳಿಯಬಾರದು
ಹೋಹುದು ತಿಳಿಯಬಾರದು
ಮೇಘದಂತಿಹ ಜನ್ಮ
ಬಂದುದು ತಿಳಿಯಬಾರದು
ಹೋಹುದು ತಿಳಿಯಬಾರದು
ಶಿಶುವಿನಂತಹ ಜನ್ಮ
ಬದುಕುವುದು ತಿಳಿಯದು
ಬದುಕಿ ಬಾಳೀತೆಂಬುದು ತಿಳಿಯಬಾರದು
ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ

೬೦೦

ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದಡೆ ಕಿವಿಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬವರನೇನೆಂಬೆ
ಕೂಡಲಸಂಗಮದೇವಾ

೬೦೧
ದೇವರೆದ್ದರಾವು ಏಳುವೆವಯ್ಯಾ
ದೇವ ಬಿದ್ದರಾವು ಬೀಳುವೆವಯ್ಯಾ
ದೇವ ಸತ್ತರಾವು ಸಾವೆವಯ್ಯಾ
ದೇವ ಬದುಕಿದರಾವು ಬದುಕುವೆವಯ್ಯಾ
ನಾ ಸತ್ತು ದೇವ ಹಿಂದುಳಿದಡೆ
ಎನ್ನಿಂದ ಬಿಟ್ಟು ವ್ರತಗೇಡಿಗಳಾರು
ಹೇಳಾ ಸಕಳೇಶ್ವರದೇವಾ

೬೦೨
ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೆ
ಇಹ ಲೋಕದೊಳಗೆ ಮತ್ತೆ ಅನಂತಲೋಕ
ಶಿವಲೋಕ ಶಿವಾಚಾರವಯ್ಯಾ
ಶಿವಭಕ್ತನಿದ್ದ ಠಾವೆ ದೇವಲೋಕ
ಭಕ್ತನಂಗಳವೆ ವಾರಣಾಸಿ
ಕಾಯವೆ ಕೈಲಾಸ
ಇದು ಸತ್ಯ
ಕೂಡಲಸಂಗಮದೇವಾ

೬೦೩
ದೇಶ ಗುರಿಯಾಗಿ
ಲಯವಾಗಿ ಹೋದವರ ಕಂಡೆ
ತಮಂಧ ಗುರಿಯಾಗಿ
ಲಯವಾಗಿ ಹೋದವರ ಕಂಡೆ
ಕಾಮ ಗುರಿಯಾಗಿ
ಬೆಂದು ಹೋದವರ ಕಂಡೆ
ನೀ ಗುರಿಯಾಗಿ ಹೋದವರನಾರನೂ ಕಾಣೆ
ಗುಹೇಶ್ವರ

೬೦೪
ದೇಶ ದೇಶಾಂತರವ ತಿರುಗಿ ತೊಳಲಿ ಬಳಲಿ
ಕೆಲರ ಹಳಿದು ಕೆಲರ ಹೊಗಳಿ

ವೃಥಾ ಹೋಯಿತ್ತೆನ್ನ ಸಂಸಾರ
ಗಿರಿಯ ಶಿಖರದ ಮೇಲೆ ಲಿಂಗಧ್ಯಾನದಲ್ಲಿ
ಮೌನಿಯಾಗಿರಿಸೆನ್ನ ಸಕಳೇಶ್ವರಯ್ಯಾ

**೬೦೫**

ದೇಹದೊಳಗೆ ದೇವಾಲಯವಿದ್ದು
ಮತ್ತೆ ಬೇರೆ ದೇವಾಲಯವೇಕೆ
ಎರಡಕ್ಕೆ ಹೇಳಲಿಲ್ಲಯ್ಯ
ಗುಹೇಶ್ವರ
ನೀನು ಕಲ್ಲಾದರೆ ನಾನೇನಪ್ಪೆನು

**೬೦೬**

ದೊಡ್ಡ ದೊಡ್ಡ ಶೆಟ್ಟಿಗಳ ಕಂಡು
ಅಡ್ಡಗಟ್ಟಿ ಹೋಗಿ ಶರಣಾರ್ಥಿ ಎಂಬ
ಎಡ್ಡುಗಳ್ಳತನಕ್ಕೆ ತಮ್ಮ ಮಠಕ್ಕೆ ಬನ್ನಿ ಹಿರಿಯರೇ ಎಂಬರು
ಹೋಗಿ ಶರಣಾರ್ಥಿ ಭಕ್ತನೆಂದೊಡೆ ಕೇಳದ ಹಾಗೆ
ಅಡ್ಡ ಮೋರೆಯನಿಕ್ಕಿಕೊಂಡು ಸುಮ್ಮನೆ ಹೋಗುವ
ಹೆಡ್ಡ ಮೂಳರಿಗೆ ದುಡ್ಡೇ ಪ್ರಾಣವಾಯಿತ್ತು
ದುಡ್ಡಿಸ್ತರ ಕುರುಹನರಿಯದೆ ಮೊಳಪಾದದ ಮೇಲೆ
ಹೊಡಹೊಡಕೊಂಡು ನಗುತಿರ್ದಾತ
ನಮ್ಮ ಅಂಬಿಗರ ಚವುಡಯ್ಯ

**೬೦೭**

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ
ನಮ್ಮ ಮಹಾದೇವಸೆಟ್ಟಿ
ಒಮ್ಮನವಾದಡೆ ಒಡನೆ ನುಡಿವನು
ಇಮ್ಮನವಾದಡೆ ನುಡಿಯನು
ಕಾಣಿಯ ಸೋಲ
ಅರ್ಧಗಾಣಿಯ ಗೆಲ್ಲ
ಜಾಣ ನೋಡವ್ವಾ
ನಮ್ಮ ಕೂಡಲಸಂಗಮದೇವ

೬೦೮
ಧರೆ ಇಲ್ಲದೆ ಬೆಳೆಯಬಹುದೆ ಧಾನ್ಯವ
ಮಳೆ ಇಲ್ಲದೆ ನೋಡಬಹುದೆ ಬೆಳೆಗಳ
ಒಂದು ವಸ್ತುವಿಗಾದಡೂ ದ್ವಂದ್ವವೆ ಬೇಕು
ನಮ್ಮ ಕಪಿಲಸಿದ್ಧಮಲ್ಲನ ನೋಡುವಡೆ
ಲಿಂಗಪ್ರಜೆ ಜಂಗಮದಾಸೋಹವೆ ಬೇಕು

೬೦೯
ಧರೆಗೆ ಸೂತಕವುಂಟೆ
ವಾರಿಧಿಗೆ ಹೊಲೆಯುಂಟೆ
ಉರಿವ ಅನಲಂಗೆ ಜಾತಿಭೇದವುಂಟೆ
ಹರಿದು ಚರಿಸುವ ಅನಿಲಂಗೆ ಸೀಮೆಯುಂಟೆ
ಆಕಾಶಕ್ಕೆ ದಾರಿ ಮೇರೆಯುಂಟೆ
ಇನಿತರಿಂದೊದಗಿದ ಘಟವನು ಆರು ಹೊಲ್ಲೆಂಬರು
ಸಾರವು ಕರ್ಮ ಕೂಡಲಚೆನ್ನಸಂಗಮದೇವಾ
ನಿಮ್ಮ ಶರಣಂಗೆ

೬೧೦
ಧರೆಯ ಮೇಗಣ ಹುಲ್ಲೆ
ಚಂದ್ರಮನೊಳಗಣ ಎರಳೆ
ಕೂರ್ತಡೆ ಫಲವೇನೋ ಕೂಟವಿಲ್ಲದನ್ನಕ್ಕ
ಇಂಬನರಿಯದ ಠಾವಿನಲ್ಲಿ ಕಣ್ಬೇಟವ ಮಾಡಿದಡೆ
ತುಂಬಿದ ತೊರೆಯ ನಡುವೆ ಮಾಮರಕಾತಂತೆ
ಚನ್ನಮಲ್ಲಿಕಾರ್ಜುನದೇವಾ
ದೂರದ ಸ್ನೇಹವ ಮಾಡಲು
ಬಾರದ ಭವಕ್ಕೆ ಬಂದೆ

೬೧೧
ಧರೆಯ ಮೇಲೆ ಬಿದ್ದ ಬೀಜ
ಧರೆಯಲ್ಲಿಯೆ ಅಳಿದು ಆಕಾಶದಲ್ಲಿ ಫಲವಾಯಿತ್ತು
ಆ ಫಲವ ಬಯಲ ಕಣದಲ್ಲಿ ಒಕ್ಕಿ

ಮನದ ಹಗಹದಲ್ಲಿ ತುಂಬಿ
ಬಾಯ ಹಗಹದಲ್ಲಿ ತೆಗೆದು
ಕಣ್ಣಿನ ಕೊಳಗದಲ್ಲಿ ಅಳೆವುತ್ತಿರಲಾಗಿ
ಖಂಡುಗವೆಂಬುದಕ್ಕೆ ಮೊದಲೆ ಕೊರಳಡಗಿತ್ತು
ಕುಂಭೇಶ್ವರಲಿಂಗದಲ್ಲಿದ್ದ ಜಗನ್ನಾಥನರಿಕೆಯಾಗಿ

೬೧೨

ಧರೆಯ ಮೇಲೊಂದು ಪಿರಿದಪ್ಪ ಸಂತೆಯ ನೆರವಿಗೆ ಬಂದವರನೇನೆಂಬೆನು
ಪರಿಪರಿಯ ಭಂಡದ ವ್ಯವಹಾರದೊಳಗೆ
ಕೊಡಲಿಲ್ಲ ಕೊಳಲಿಲ್ಲ
ವೃಥಾ ವಿಳಾಸವಿದೇನೋ
ಅರೆಮರುಳೆಂಬ ಶಿವನು
ನೆರೆಮರುಳೆಂಬ ಜಗವ ಹುಟ್ಟಿಸಿದ ಪರಿಯ ಕಂಡು ಬೆರಗಾದೆ
ಗೊಹೇಶ್ವರ

೬೧೩

ಧರೆಯಗಲದ ಹುಲ್ಲೆ ಹರಿದು ಮೇಯಿತ್ತು ಕಂಡೆ
ಬಲೆಯ ಬೀಸುವ ಗಂಡರಾರೂ ಇಲ್ಲ
ಹರಿದು ಹಿಡಿದಹೆನೆಂದರೆ ತಲೆ ಕಾಣ ಬರುತ್ತದೆ
ಶಿರವ ಹಿಡಿದಹೆನೆಂಬವರಿನ್ನಾರೂ ಇಲ್ಲ
ಹರಿದಾಡುವ ಹುಲ್ಲೆಯ ಕಂಡು ಹಲವು ಬೆಳ್ಳಾರವ ಬಿಟ್ಟು
ಬೇಂಟೆಕಾರ ಬಲೆಯ ಬೀಸಿದಡೆ ಹುಲ್ಲೆಯಂಜಿ ಹೋಯಿತ್ತು
ಮರುಳುದಲೆಯಲ್ಲಿ ಹುಲ್ಲೆಯನೆಸೆಯಬೇಕೆಂದು
ಸರಳ ಬಿಟ್ಟು ಬಾಣವನೊಂದು ಕೈಯಲ್ಲಿ ಹಿಡಿದು
ಹಳ್ಳಕೊಳ್ಳವ ದಾಂಟಿ ಘಟ್ಟ ಬೆಟ್ಟವ ಕಳಿದು
ಅತ್ತ ಬಯಲ ಮರನ ತಾ ಮರೆಗೊಂಡಿತ್ತು
ಹತ್ತೆ ಸಾರಿದ ಮೃಗವ ತಾನೆಚ್ಚಡೆ ನಾರಿಹರಿದು
ಬಿಲ್ಲು ಮುರಿದು ಹುಲ್ಲೆ ಸತ್ತಿತ್ತು
ಅದ ಕಿಚ್ಚಿಲ್ಲದ ನಾಡಿಗೊಯ್ದು ಸುಟ್ಟು ಬಾಣಸವ ಮಾಡಲು
ಸತ್ತ ಹುಲ್ಲೆ ಕರಗಿ ಸಬ ಉಳಿಯಿತ್ತು ನಿಶ್ಚಿಂತವಾಯಿತ್ತು
ಗುಹೇಶ್ವರ ನಿಮ್ಮ ಶರಣ ಕಟ್ಟಿದಿರ ಬಾಣಸದ ಮನೆಗೆ ಬಂದನು

೬೧೪

ಧೃತಿಗೆಟ್ಟು ಅನ್ಯರ ಬೇಡದಂತೆ
ಮತಿಗೆಟ್ಟು ಪರರುವ ಹೊಗಳದಂತೆ
ಪರಸತಿಯರ ರತಿಗೆ ಮನ ಹಾರದಂತೆ
ಶಿವಪಥವೊಲ್ಲದವರೊಡನಾಡದಂತೆ
ಅನ್ಯಜಾತಿಯ ಸಂಗವ ಮಾಡದಂತೆ
ಎನ್ನ ಪ್ರತಿಪಾಲಿಸು ಕೂಡಲಸಂಗಮದೇವಾ

೬೧೫

ನಚ್ಚುಗೆ ಮನ ನಿಮ್ಮಲ್ಲಿ
ಮಚ್ಚುಗೆ ಮನ ನಿಮ್ಮಲ್ಲಿ
ಸಲುಗುಗೆ ಮನ ನಿಮ್ಮಲ್ಲಿ
ಸೋಲುಗೆ ಮನ ನಿಮ್ಮಲ್ಲಿ
ಅಳಲುಗೆ ಮನ ನಿಮ್ಮಲ್ಲಿ
ಬಳಲುಗೆ ಮನ ನಿಮ್ಮಲ್ಲಿ
ಕರಗುಗೆ ಮನ ನಿಮ್ಮಲ್ಲಿ
ಕೊರಗುಗೆ ಮನ ನಿಮ್ಮಲ್ಲಿ
ಎನ್ನ ಪಂಚೇಂದ್ರಿಯಂಗಳು
ಕಬ್ಬುನ ಉಂಡ ನೀರಿನಂತೆ ನಿಮ್ಮಲ್ಲಿ
ಬೆರಸುಗೆ ಚೆನ್ನಮಲ್ಲಿಕಾರ್ಜುನಯ್ಯಾ

೬೧೬

ನಡೆ ನೋಟ ಸೊಲ್ಲೆಡೆಯಲ್ಲಿ ಒಂದು ಕಿಚ್ಚು
ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು
ತಡದುಂಬೆಡೆಯಲ್ಲಿ ಒಂದು ಕಿಚ್ಚು
ಪಡೆದರ್ಥ ಕೆಟ್ಟೆಡೆಯಲ್ಲಿ ಒಂದು ಕಿಚ್ಚು
ಕೂಡಿದ ವ್ಯಾಮೋಹದೆಡೆಯಲ್ಲಿ ಒಂದು ಕಿಚ್ಚು
ಇಂತೀ ಐದು ಕಿಚ್ಚನಿಕ್ಕಿ
ಬಾಯಲ್ಲಿ ಮಣ್ಣಹೊಯಿದು ಕೆಡಿಸಿದೆ ರಾಮನಾಥ

೬೧೭

ನಡೆವಡೆ
ನಡೆಗೆಟ್ಟ ನಡೆಯ ನಡೆವುದಯ್ಯ
ನುಡಿದಡೆ
ನುಡಿಗೆಟ್ಟ ನುಡಿಯ ನುಡಿವುದಯ್ಯ
ಒಡಲ ಹಿಡಿದಡೆ
ಹಿಡಿಯದೆ ಹಿಡಿವುದಯ್ಯ
ಕೂಡುವಡೆ
ಕೇಡಿಲ್ಲದೆ ಕೂಟವ ಕೂಡುವುದಯ್ಯ
ಗೊಹೇಶ್ವರ ನಿಮ್ಮಲ್ಲಿ ನಿಲುವುದಯ್ಯ

೬೧೮

ನಡೆದು ನಡೆದು ಕಡೆಯ ಕಂಡವರು
ನುಡಿದು ನುಡಿದು ಹೇಳುತ್ತಿಹರೆ
ನುಡಿದು ನುಡಿದು ಹೇಳುವನ್ನಕ್ಕರ
ನಡೆದುದೆಲ್ಲಾ ಹುಸಿಯೆಂಬೆನು
ಮಾತಿನ ಮಥನದಿಂದಾದ ಅರಿವು
ಕರಣಮಥನದಿಂದಾದುದಲ್ಲದೆ
ಅನುಪಮ ಸ್ವರಭೇದವಾದ ಪರಿ ಎಂತು
ಹೇಳಾ
ಇದಿರ ಗೆಲಬೇಕೆಂದು ನುಡಿದುಕೊಂಡಡೇನು
ಮನಕ್ಕೆ ಮನವೆ ಸಾಕ್ಷಿಯಾಗಿ ನಿಃಪತಿಯಲ್ಲ
ನೋಡಾ
ಎನ್ನ ಅಜಗಣ್ಣತಂದೆ ಶಬುದಕ್ಕೆ ಹೇಸಿ ಮುಗುದನಾದನು

೬೧೯

ನದಿಯ ನೀರು ಹೋದುವಯ್ಯಾ ಸಮುದ್ರಕ್ಕೆ
ಸಮುದ್ರದ ನೀರು ಬಾರವಯ್ಯಾ ನದಿಗೆ
ನಾನು ಹೋದೆನಯ್ಯಾ ಲಿಂಗದ ಕಡೆಗೆ
ಲಿಂಗ ಬಾರದು ನೋಡಯ್ಯಾ ನನ್ನ ಕಡೆಗೆ
ಮಗ ಮುನಿದಡೆ ತಂದೆ ಮುನಿಯನು

ನಾ ಮುನಿದಡೆ ನೀ ಮುನಿಯೆ ನೋಡಯ್ಯಾ
ಕಪಿಲಸಿದ್ಧಮಲ್ಲಿನಾಥಾ

೬೨೦
ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ ಸಲಹುತ್ತ
ಶಿವ ಶಿವಾ ಎಂದೋದಿಸಯ್ಯಾ
ಭಕ್ತಿಯೆಂಬ ಪಂಜರದೊಳಗಿಕ್ಕಿ ಸಲಹು
ಕೂಡಲಸಂಗಮದೇವಾ

೬೨೧
ನಲ್ಲ ಮುಳಿದು ಹೋಗುತ್ತ
ಎನ್ನ ಮನವ ನಂಬದೆ ಮೈಗಾಹಾಗಿ ಇರಿಸಿದನು
ಉರಿಲಿಂಗದೇವನು ತಾ ಬಂದು ನೆರೆವನ್ನಬರ

೬೨೨
ನಲ್ಲನ ಕೂಡುವ ಭರದಲ್ಲಿ
ಎನ್ನುವನಿದಿರುವನೇನೆಂದರಿಯೆನು
ನಲ್ಲನ ಕೂಡುವಾಗಳೂ
ಎನ್ನುವ ನಲ್ಲನನೇನೆಂದರಿಯೆನು
ಉರಿಲಿಂಗದೇವನ ಕೂಡಿದ ಬಳಿಕ
ನಾನೊ ತಾನೊ ಏನೆಂದರಿಯೆನು

೬೨೩
ನಲ್ಲನ ಕೂಡುವ ಸುಖಭೋಗದ್ರವ್ಯವನೆಲ್ಲಿಂದಾ ತಪ್ಪೆನು
ಹೇಳಾ ಕೆಳದಿ
ನಲ್ಲನ ಬೇಡಲು ನಾಚಿಕೆ ಎನಗೆ
ಮತ್ತೆಲ್ಲಿಯು ನಿಲ್ಲೆನು
ಕೂಡುವ ಶಕ್ತಿಯ ತಾನರಿದಿಹನು
ಕೇಳಾ ಕೆಳದಿ
ಹೆಣ್ಣು ಹೆಣ್ಣ ಕೂಡುವ ಸುಖವ ಮಣ್ಣಿನಲ್ಲಿ ನೆರಹುವೆನು
ಉರಿಲಿಂಗದೇವನ ಕೂಡುವೆನು

೬೨೪
ನಲ್ಲನ ಕೂಡುವನ್ನಕ್ಕ ಸುಖದ ಸುಗ್ಗಿಯನೇನೆಂದರಿಯೆ
ಕೇಳಾ ಕೆಳದಿ
ಸುಖದ ಸವಿಗೆ ಸ್ರವಿಸಿ ಕೂಡಿದೆ ನೋಡವ್ವ
ತವಕಕ್ಕೆ ತವಕ ಮಿಗೆ ಮೇಲುವರಿದು ಕೂಡಿದಂತೆ
ಕೂಡುವೆನುರಿಲಿಂಗದೇವನ

೬೨೫
ನಲ್ಲನೊಲ್ಲನೆಂದು ಮುನಿದು ನಾನಡಗಲು
ಅಡಗುವ ಎಡೆಯೆಲ್ಲಾ ತಾನೆ
ನೋಡೆಲಗವ್ವಾ
ನಲ್ಲ ನೀನಿಲ್ಲದೆಡೆಯಿಲ್ಲ
ಅಡಗಲಿಕಿಂಬಿಲ್ಲಾಗಿ ಮುನಿದು ನಾನೇಗುವೆನು
ಶರಣುಗತಿವೋಗುವೆನು ಉರಿಲಿಂಗದೇವನ

೬೨೬
ನಾ ದೇವನಲ್ಲದೆ ನೀ ದೇವನೇ
ನೀ ದೇವನಾದರೆ ಎನ್ನನೇಕೆ ಸಲಹೆ
ಆರೈದು ಒಂದು ಕುಡಿತೆ ಉದಕವನೆರೆವೆ
ಹಸಿದಾಗ ಒಂದು ತುತ್ತು ಓಗರವನಿಕ್ಕುವೆ
ನಾ ದೇವ ಕಾಣಾ
ಗುಹೇಶ್ವರ

೬೨೭
ನಾ ನಿನ್ನನರಿವಲ್ಲಿ
ನೀನೆನ್ನ ಕೈಯಲ್ಲಿ ಅರಿಯಿಸಿಕೊಂಬಲ್ಲಿ
ಅದೇನು ಭೇದ
ನಾನೆಂದಡೆ ನಿನ್ನ ಸುತ್ತಿದ ಮಾಯೆ
ನೀನೆಂದಡೆ ನನ್ನ ಸುತ್ತಿದ ಮಾಯೆ
ನಾ ನೀನೆಂಬಲ್ಲಿ ಉಳಿಯಿತ್ತು
ಅರ್ಕೇಶ್ವರಲಿಂಗನ ಅರಿಕೆ .

೬೨೮

ನಾ ನಿಮ್ಮ ನೆನೆವನು ನೀವೆನ್ನನರಿಯಿರಿ
ನಾ ನಿಮ್ಮನೋಲೈಸುವೆನು ನೀವೆನ್ನ ಕಾಣಿರಿ
ನಾನೆಂತು ಬದುಕುವೆನೆಂತು ಜೀವಿಸುವೆನಯ್ಯಾ
ಕೂಡಲಸಂಗಮದೇವಾ
ಎನಗೆ ನೀವೆ ಪ್ರಾಣ ಗತಿ ಮತಿ ನೋಡಯ್ಯಾ

೬೨೯

ನಾ ಬಂದೆ ಹರಿಭಕ್ತನಾಗಿ
ಬಾಹಾಗ ನಾ ದಾಸನಾಗಿ
ಒಂಬತ್ತು ಜೂಳಿಯ ತಣ್ಣೀರ ಕಣಿತೆಯ ಹೊತ್ತು
ತಿತ್ತಿಗ ನೀರ ಕಾಣೆ
ಲೆಕ್ಕವಿಲ್ಲದ ನಾಮವನಿಕ್ಕಿದೆ
ಸುತ್ತಿ ಸುತ್ತಿ ಬಳಸಿದೆ
ಹೀಲಿಯ ಗರಿಯ ಹೇಕಣ್ಣ
ಪಚ್ಚೆಯ ನಾಮವ ದೃಷ್ಟಿಯ ಮಧ್ಯದಲ್ಲಿ ಇಕ್ಕಿ
ಮತ್ತೆ ಅದರ ನಡುವೆ ನಿಶ್ಚಯ ಬಿಳಿಯ ನಾಮವನಿಕ್ಕಿ
ಹೊತ್ತ ದಾಸಿಕೆ ಹುಸಿಯಾಯಿತ್ತು
ದಾಸೋಹವೆಂಬುದನರಿಯದೆ ಎನ್ನ ವೇಷ ಹುಸಿಯಾಯಿತ್ತು
ನಾರಾಯಣಪ್ರಿಯ ರಾಮನಾಥಾ

೬೩೦

ನಾ ಮಾರಬಂದ ಸುಧೆಯ ಕೊಂಬವರಾರೂ ಇಲ್ಲ
ಹೊರಗಣ ಭಾಜನಕ್ಕೆ ಒಳಗಣ ಇಂದ್ರಿಯಕ್ಕೆ
ಉಂಡು ದಣಿದು ಕಂಡು ದಣಿದು ಸಂದೇಹವ ಬಿಟ್ಟು ದಣಿದು
ಕಂಡುದ ಕಾಣದೆ ಸಂದೇಹದಲ್ಲಿ ಮರೆಯದೆ
ಆನಂದವೆಂಬುದ ಆಲಿಂಗನವ ಮಾಡಿ
ಆ ಕಂಗಳಂ ಮುಚ್ಚಿ ಮತ್ತಮಾ ಕಂಗಳಂ ತೆರೆದು ನೋಡಲಾಗಿ
ಧರ್ಮೇಶ್ವರಲಿಂಗವು ಕಾಣಬಂದಿತ್ತು

೬೩೧

ನಾಚಿ ಮಾದುದು
ಮಾದುದಲ್ಲ
ನಾಚದೆ ಮಾದುದು
ಮಾದುದಲ್ಲ
ಹೇಸಿ ಮಾದುದು
ಮಾದುದಲ್ಲ
ಹೇಸದೆ ಮಾದುದು
ಮಾದುದಲ್ಲ
ಅಲಸಿ ಮಾದುದು
ಮಾದುದಲ್ಲ
ನಾಚದೆ ಹೇಸದೆ ಅಲಸದೆ
ಮಾದಡೆ ಮಾದುದು
ಗುಹೇಶ್ವರ

೬೩೨

ನಾಡೆಲ್ಲರೂ ಮುಟ್ಟಿ ಪೂಜಿಸುವುದು ಸಿರಿದೇವಿ
ಸತ್ಯರೆಲ್ಲರೂ ಮುಟ್ಟಿ ಪೂಜಿಸುವುದು ಮೂದೇವಿ
ನಾ ಮೊರದಲ್ಲಿ ಹೊತ್ತಾಡುವುದು ಉರಿಮಾರಿ
ಸಿರಿ ಮೂದೇವಿ ಉರಿ ಮೊರದ ಗೋಟಿಗೊಳಗಾಯಿತ್ತು
ಡಕ್ಕೆಯ ದನಿಗೆ ಮುನ್ನವೆ ಸಿಕ್ಕದಿರು
ಕಾಲಾಂತಕ ಭೀಮೇಶ್ವರಲಿಂಗವನರಿಯಬಲ್ಲಡೆ

೬೩೩

ನಾಣ ಮರೆಯ ನಾಚಿಕೆ ಒಂದು ನೂಲ ಮರೆಯಲಡಗಿತ್ತು
ಬಲ್ಲೆನೆಂಬ ಅರುಹಿರಿಯರೆಲ್ಲರು ಅಲ್ಲಿಯೇ ಮರುಳಾದರು
ನೂಲಮಾರಿ ಹತ್ತಿಯ ಬಿಲಿಯ ಹೋದರೆ
ಅದು ಅತ್ತಲೆ ಹೋಯಿತ್ತು
ಗುಹೇಶ್ವರ

೬೨೪

ನಾಣ ಮರೆಯ ನೂಲು ಸಡಿಲಲು
ನಾಚುವರು ನೋಡಾ ಗಂಡು ಹೆಣ್ಣೆಂಬ ಜಾತಿಗಳು
ಪ್ರಾಣದೊಡೆಯ ಜಗದೊಳಗೆ ಮುಳುಗಲು ತೆರಹಿಲ್ಲದಿರಲು
ದೇವರ ಮುಂದೆ ನಾಚಲೆಡೆಯುಂಟೆ
ಚೆನ್ನಮಲ್ಲಿಕಾರ್ಜುನ ಜಗವೆಲ್ಲ ಕಣ್ಣಾಗಿ ನೋಡುತ್ತಿರಲು
ಮುಚ್ಚಿ ಮರಸುವ ಠಾವಾವುದು
ಹೇಳಯ್ಯಾ

೬೨೫

ನಾದ ಮುನ್ನವೋ
ಬಿಂದು ಮುನ್ನವೋ
ಜೀವ ಮುನ್ನವೋ
ಕಾಯ ಮುನ್ನವೋ
ಜೀವಕಾಯದ ಕುಳಸ್ಥಳಂಗಳ ಬಲ್ಲವರು
ನೀವು ಹೇಳಿರೇ
ಗುಹೇಶ್ವರ
ನೀನು ಮುನ್ನವೋ
ನಾನು ಮುನ್ನವೋ ಬಲ್ಲವರು
ನೀವು ಹೇಳಿರೇ

೬೨೬

ನಾದದ ಬಲದಿಂದ ವೇದಂಗಳಾದವಲ್ಲದೆ
ವೇದ ಸ್ವಯಂಭುವಲ್ಲ
ಮಾತಿನ ಬಲದಿಂದ ಶಾಸ್ತ್ರಂಗಳಾದವಲ್ಲದೆ
ಶಾಸ್ತ್ರ ಸ್ವಯಂಭುವಲ್ಲ
ನಿಲ್ಲು
ಪಾಷಾಣದ ಬಲದಿಂದ ಸಮಯಂಗಳಾದವಲ್ಲದೆ
ಸಮಯ ಸ್ವಯಂಭುವಲ್ಲ
ನಿಲ್ಲು
ಇಂತೀ ಮಾತಿನ ಬಣಬೆಯ ಮುಂದಿಟ್ಟುಕೊಂಡು

ಆತನ ಕಂಡೆಹೆನೆಂದಡೆ
ಆತನತ್ಯತಿಷ್ಠದ್ದಶಾಂಗುಲ
ಆತನೆಂತು ಸಿಲುಕುವನೆಂದಾತನಂಬಿಗ ಚವುಡಯ್ಯ

೬೩೭
ನಾದಪ್ರಿಯ ಶಿವನೆಂಬರು
ನಾದಪ್ರಿಯ ಶಿವನಲ್ಲಯ್ಯಾ
ವೇದಪ್ರಿಯ ಶಿವನೆಂಬರು
ವೇದಪ್ರಿಯ ಶಿವನಲ್ಲಯ್ಯಾ
ನಾದವ ನುಡಿಸಿದ ರಾವಳಂಗೆ ಅರೆ ಆಯುಷ್ಯವಾಯಿತ್ತು
ವೇದವಮಾಡಿದ ಬ್ರಹ್ಮನ ಶಿರ ಹೋಯಿತ್ತು
ನಾದಪ್ರಿಯನೂ ಅಲ್ಲ
ವೇದಪ್ರಿಯನೂ ಅಲ್ಲ
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ

೬೩೮
ನಾನಾ ಜನ್ಮಂಗಳಲ್ಲಿ ಬಂದಡೂ
ನಾನಾ ಯುಕ್ತಿಯಲ್ಲಿ ನುಡಿದಡೂ
ನಾನಾ ಲಕ್ಷಣಂಗಳಲ್ಲಿ
ಶ್ರುತ ದೃಷ್ಟ ಅನುಮಾನಂಗಳ ಲಕ್ಷಿಸಿ ನುಡಿವಲ್ಲಿ
ಏನನಹುದು ಏನನಲ್ಲಾಯೆಂಬ ಠಾವನರಿಯಬೇಕು
ಮಾತ ಬಲ್ಲೆನೆಂದು ನುಡಿಯದೆ
ನೀತಿವಂತನೆಂದು ಸುಮ್ಮನಿರದೆ
ಆ ತತ್ಕಾಲದ ನೀತಿಯನರಿದು
ಸಾತ್ವಿಕ ಲಕ್ಷಣದಲ್ಲಿಪ್ಪಾತನ ಲಕ್ಷಣವೇ ನಿರೀಕ್ಷಣ
ಕದಂಬಲಿಂಗಾ

೬೩೯
ನಾನಾ ವರ್ಣದ ಗೋವುಗಳೆಲ್ಲವೂ ಕೂಡಿ
ಒಂದೇ ಹೊಲದಲ್ಲಿ ಮೇದು

ಆರು ಕೆರೆಯ ನೀರ ಕುಡಿದು
ಒಂದೇ ದಾರಿಯಲ್ಲಿ ಬಂದು
ಮೂರು ಕೊಟ್ಟಿಗೆಯ ಗೊತ್ತಿಂಗೊಳಗಾದುವು
ಬಿಟ್ಟು ಕರೆಯಲಾಗಿ ಗೋವಿಂಗೆ ಹಲವು
ಹಾಲಿಗೆ ಏಕವರ್ಣ
ಹಾಲ ತಂದು ಭಾಜನದಲ್ಲಿ ನೀಡಿ ಕಾಸುವಲ್ಲಿ
ಚಟ್ಟಿ ಹತ್ತದೆ ಹಸುಕು ನಾರದೆ
ಕೌರು ಏಳದೆ ನೀರ ರಸ ತಪ್ಪಿ ಮಧುರ ರಸ ತುಂಬಿ
ಕಾಸಿ ಉಣಬಲ್ಲಡೆ ಆತನೆ ಭೋಗಿ
ಆತ ನಿರತಿಶಯಾನುಭಾವ ಶುದ್ಧಾತ್ಮನು
ಕಾಲಕರ್ಮವಿರಹಿತ ತ್ರಿಪುರಾಂತಕಲಿಂಗ ತಾನೆ

**೬೪೦**

ನಾನಾ ವೇಷವ ತೊಟ್ಟು ಆಡುವನಂತೆ
ಬಹುರೂಪು ಬೇರಲ್ಲದೆ ಆಡುವ ತಾನೊಬ್ಬನೆ
ಎಲ್ಲಿ ಅರ್ಪಿತ ಮುಖ ಅಲ್ಲಿಯೂ ನೀನೇ
ಏಣಾಂಕಧರ ಸೋಮೇಶ್ವರಲಿಂಗವೆ

**೬೪೧**

ನಾನಾ ವ್ರತಂಗಳ ಪಿಡಿವುದೆಲ್ಲವು
ಮನದ ಶಂಕೆ
ಮನ ಹರಿದಾಡುವುದೆಲ್ಲವು
ತನುವಿನ ಶಂಕೆ
ಮನ ತನು ಕೂಡಿ ನಡೆವುದೆಲ್ಲವು
ಪ್ರಕೃತಿಯ ಶಂಕೆ
ಮನ ತನು ಪ್ರಕೃತಿ ಮೂರೊಂದಾದಲ್ಲಿ
ಶೀಲವೆಂಬ ಪಾಶ ಜೀವನ ಕೊರಳ ಸುತ್ತಿತ್ತು
ಬಹಿರಂಗದ ವ್ರತ ಅಂತರಂಗದ ಅರಿವು
ಉಭಯವು ಕಟ್ಟುವಡೆದಲ್ಲಿ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗವೆಂಬ ಗೊತ್ತಾಯಿತ್ತು

೬೪೨
ನಾನಾರ ಸಾರುವೆನೆಂದು ಚಿಂತಿಸಲೇತಕ್ಕಯ್ಯಾ
ಬಸವಾ
ನಾನಾರ ಹೊಂದುವೆನೆಂದು ಭ್ರಮೆಬಡಲೇತಕ್ಕಯ್ಯಾ
ಬಸವಾ
ನಾನಾರ ಇರವನರಿವೆನೆಂದು ಪ್ರಳಾಪಿಸಲೇತಕ್ಕಯ್ಯಾ
ಬಸವಾ
ಪರಿಣಾಮಮೂರ್ತಿ ಬಸವನರೂಪು
ಎನ್ನ ಕರಸ್ಥಲದಲ್ಲಿ ಬೆಳಗಿದ ಬಳಿಕ
ಸಂಗಯ್ಯನ ಹಂಗು ನಮಗೇತಕ್ಕಯ್ಯಾ
ಬಸವಾ

೬೪೩
ನಾನಾರ ಹೆಸರ ಕುರುಹಿಡಲಯ್ಯಾ
ಬಸವಾ
ನಾನಾರ ರೂಪ ನಿಜವಿಡಲಯ್ಯಾ
ಬಸವಾ
ನಾನಾರ ಮಾತ ನೆಲೆಗೊಳಿಸಲಯ್ಯಾ
ಬಸವಾ
ನಾನಾರ ಮನವನಂಗೈಸಲಯ್ಯಾ
ಬಸವಾ
ಎನ್ನ ಸುಖಾಕಾರಮೂರ್ತಿ ಬಸವನಡಗಿದಬಳಿಕ
ಎನಗೆ ಹೆಸರಿಲ್ಲ
ರೂಪು ನಿರೂಪಾಯಿತ್ತಯ್ಯಾ
ಸಂಗಯ್ಯಾ ಬಸವನಡಗಿದಬಳಿಕ

೬೪೪
ನಾನು ಘನ ತಾನು ಘನವೆಂಬ ಹಿರಿಯರುಂಟೆ
ಜಗದೊಳಗೆ ಹಿರಿಯರ ಹಿರಿಯತನದಿಂದೇನಾಯಿತ್ತು
ಹಿರಿಕಿರಿದೆಂಬ ಶಬ್ದವಡಗಿದಡೆ ಆತನೆ ಶರಣ
ಗುಹೇಶ್ವರ

೬೪೫
ನಾನು ಭಕ್ತನಾದಡೆ
ನೀನು ದೇವನಾದಡೆ
ನೋಡುವೆವೆ ಇಬ್ಬರ ಸಮರಸವನೊಂದು ಮಾಡಿ
ಭೂಮಿಯಾಕಾಶವನೊಂದು ಮಾಡಿ
ಚಂದ್ರ ಸೂರ್ಯರಿಬ್ಬರ ತಾಳವ ಮಾಡಿ ಆಡುವೆವೆ
ಜಡೆಯ ಮೇಲಣ ಗಂಗೆ ನೀನು ಕೇಳಾ
ತೊಡೆಯ ಮೇಲಣ ಗೌರಿ ನೀನು ಕೇಳಾ
ಗುಹೇಶ್ವರನೆಂಬ ಲಿಂಗವು ಎನ್ನ ಕೈಯಲಿ ಸತ್ತಡೆ
ರಂಡೆಗೂಳನುಂಬುದು ನಿಮಗೆ ಲೇಸೆ

೬೪೬
ನಾನು ಮೆಟ್ಟುವ ಭೂಮಿಯ
ಭಕ್ತನ ಮಾಡಿದಲ್ಲದೆ ಮೆಟ್ಟೆನಯ್ಯಾ
ನಾ ನೋಡುತಿಹ ಆಕಾಶದ ಚಂದ್ರಸೂರ್ಯರ
ಭಕ್ತರ ಮಾಡಿದಲ್ಲದೆ ನೋಡೆನಯ್ಯಾ
ನಾನು ಬಳಸುವ ಜಲವ
ಭಕ್ತನ ಮಾಡಿದಲ್ಲದೆ ಬಳಸೆನಯ್ಯಾ
ನಾನು ಕೊಂಬ ಹದಿನೆಂಟು ಧಾನ್ಯವ
ಭಕ್ತನ ಮಾಡಿದಲ್ಲದೆ ಕೊಳ್ಳೆನಯ್ಯಾ
ಕೂಡಲಚೆನ್ನಸಂಗಯ್ಯಾ
ನಿಮ್ಮಾಣೆ

೬೪೭
ನಾನೆಂಬುದು ಪ್ರಮಾಣ
ನೀನೆಂಬುದು ಪ್ರಮಾಣ
ಸ್ವಯವೆಂಬುದು ಪ್ರಮಾಣ
ಪರವೆಂಬುದು ಪ್ರಮಾಣ
ಪ್ರಮಾಣವೆಂಬುದು ಪ್ರಮಾಣ
ಗೊಹೇಶ್ವರನೆಂಬುದು ಅಪ್ರಮಾಣ

### ೬೪೮

ನಾನೇಕೆ ಬಂದೆ ಸುಖವ ಬಿಟ್ಟು
ಬಂದುದಕ್ಕೆ ಒಂದೂ ಆದುದಿಲ್ಲ
ಸಂಸಾರದಲ್ಲಿ ಸುಖಿಯಲ್ಲ
ಪರಮಾರ್ಥದಲ್ಲಿ ಪರಿಣಾಮಿಯಲ್ಲ
ಸಿಕ್ಕಿದೆ ಅರ್ತಿಗಾರಿಕೆಯೆಂಬ ಭಕ್ತಿಯಲ್ಲಿ
ದಾಸಿಯ ಕೂಸಿನಂತೆ ಒಡವೆಗಾಸೆಮಾಡಿ
ಗಾಸಿಯಾದೆ ಮನೆಯೊಡೆಯನ ಕೈಯಲ್ಲಿ
ಈ ಭಾಷೆ ಇನ್ನೇಸು ಕಾಲ
ನಿಃಕಳಂಕ ಮಲ್ಲಿಕಾರ್ಜುನಾ

### ೬೪೯

ನಾನೊಂದ ನೆನೆದಡೆ
ತಾನೊಂದ ನೆನೆವುದು
ನಾನಿತ್ತಲೆಳೆದಡೆ
ತಾನತ್ತಲೆಳೆವುದು
ತಾ ಬೇರೆ
ಎನ್ನನಳಲಿಸಿ ಕಾಡಿತ್ತು
ತಾ ಬೇರ
ಎನ್ನ ಬಳಲಿಸಿ ಕಾಡಿತ್ತು
ಕೂಡಲಸಂಗನ ಕೂಡಿಹೆನೆಂದಡೆ
ತಾನೆನ್ನ ಮುಂದುಗೆಡಿಸಿತ್ತು ಮಾಯೆ

### ೬೫೦

ನಾನೊಂದು ಗಿಳಿಯ ಕಂಡೆ
ಬೆಕ್ಕಿನ ಬಾಧೆ ಘನ
ತಾ ಕೋಲಿನಲ್ಲಿದ್ದಡೆ ಶಯನಕ್ಕೆ ಆಸೆಯಿಲ್ಲ
ಪಂಜರಕ್ಕೆ ಸಂದ ಕೂಡುವ ಸಂಗದವನಿಲ್ಲ
ಕೊರೆಯ ಕೂಳನಿಕ್ಕುವುದಕ್ಕೆ ಅಡಿಗರಟವಿಲ್ಲ
ಗಿಳಿಯ ಹಿಡಿದು ನಾ ಕೆಟ್ಟೆ ಹಕ್ಕಿಯ ಹಂಬಲಿಲ್ಲ
ಗುಡಿಯೊಡೆಯ ಗುಮ್ಮಟನಾಥ ಅಗಮ್ಯೇಶ್ವರಲಿಂಗ

೬೫೧
ನಾಯಿಗೆ ಕಾಲು ಕೊಟ್ಟು
ತೋಳಗೆ ಹೊಟ್ಟೆಯ ಕೊಟ್ಟು
ಹುಲಿಗೆ ತಲೆಯ ಕೊಟ್ಟು
ಮೆಲಿಸಿಕೊಂಬವರೆಲ್ಲಕ್ಕು ಬಲವಂತತನವೆ
ಅದರ ಸಲೆ ಬಲುಮೆ
ಅರ್ಕೇಶ್ವರಲಿಂಗವನರಿತವರಿಗಲ್ಲದೆ ಆಗದು

೬೫೨
ನಾರಿ ಹರಿಯಿತ್ತು
ಬಿಲ್ಲು ಮುರಿಯಿತ್ತು
ಅಂಬೇನ ಮಾಡುವುದು
ಎಲೆ ಎಲೆ ನೋಡಿರಣ್ಣ
ಹೊತ್ತು ಹೋಯಿತ್ತು
ನೇಮ ನೀರಡಸಿತ್ತು
ಏನು ಕಾರಣ ಹೇಳಾ
ಗುಹೇಶ್ವರ

೬೫೩
ನಾರಿವಾಳವ ತಂದು ನಾಯಮುಂದೆ ಹಾಕಿದಡೆ
ಒಡೆಯಲರಿಯದು ತಿನಲರಿಯದು
ಅದರವೊಲು
ಜಂಗಮದೊಳಗೆ ಲಿಂಗವರಿದವ ಭಂಗಿಯ ತಿಂದಂತೆ
ತನ್ನ ಹೊದ್ದಿದ್ದ ತಾ ತಿಳಿಯಲರಿಯದಿದ್ದಡೆ
ತೆಂಗ ತಿನಲರಿಯದ ನಾಯಂತೆ
ಎಂದನಂಬಿಗ ಚವುಡಯ್ಯ

೬೫೪
ನಾಳೆ ಬಪ್ಪುದು ನಮಗಿಂದೆ ಬರಲಿ
ಇಂದು ಬಪ್ಪುದು ನಮಗೀಗಲೆ ಬರಲಿ
ಇದಕಾರಂಜುವರು ಇದಕಾರಳುಕುವರು

ಜಾತಸ್ಯ ಮರಣಂ ಧ್ರುವಂ ಎಂದುದಾಗಿ
ನಮ್ಮ ಕೂಡಲಸಂಗಮದೇವರು
ಬರೆದ ಬರೆಹವ ತಪ್ಪಿಸುವಡೆ
ಹರಿಬ್ರಹ್ಮಾದಿಗಳಿಗಳವಲ್ಲ

೬೫೫
ನಿಃಶಬ್ದ ಲಿಂಗಾನುಭಾವಿ
ಶರಣ ಮುಗ್ಧಾನುಭಾವಿ
ಪ್ರಸಾದಿ ಪರಿಣಾಮಾನುಭಾವಿ
ಇಂತೀ ತ್ರಿವಿಧಾನುಭಾವಿ
ಕೂಡಲಚೆನ್ನಸಂಗಾ
ನಿಮ್ಮ ಶರಣ

೬೫೬
ನಿತ್ಯನಿರಂಜನ ತಾನೆಂದರಿಯದೆ
ತತ್ವಮಸಿಯೆಂದು ಹೊರರಿಗನೆ ಬಳಸಿ
ಸತ್ತಿತ್ತಲ್ಲಾ ಜಗವೆಲ್ಲಾ ನಾಯಿ ಸಾವ
ತಮ್ಮ ತಾವರಿಯದೆ
ಸತ್ತವರ ಹೆಸರ ಪತ್ರವನೋದಿದಡೆ
ಅದೆತ್ತಣ ಮುಕ್ತಿ
ಗುಹೇಶ್ವರ

೬೫೭
ನಿದ್ರೆಯಿದ್ದೆಡೆಯಲ್ಲಿ ಬುದ್ಧಿಯೆಂಬುದಿಲ್ಲ
ನೋಡಾ
ಕಾಯವೊಂದೆಸೆ ಜೀವವೊಂದೆಸೆ
ಗುಹೇಶ್ವರಲಿಂಗ ತಾನೊಂದೆಸೆ

೬೫೮
ನಿನ್ನನರಿತು ಅರಿದೆನೆಂದಡೆ
ನಾ ಕುತ್ತದ ಕೊಮ್ಮೆ

ನೀ ಮುದ್ದಿನ ಗುಳಿಗೆ
ನಿನ್ನನರಿತು ನೆರೆದಿಹೆನೆಂದಡೆ
ನೀ ಹೆಣ್ಣು
ನಾ ಗಂಡು
ಸಾಕು ಬಲ್ಲಹರ ಮಾತು ಬಿಡು
ನಿನ್ನದು ನೀತಿಯಲ್ಲ
ನಿಃಕಳಂಕ ಮಲ್ಲಿಕಾರ್ಜುನಾ

೬೫೯
ನಿನ್ನರಿಕೆಯ ನರಕವೆ ಮೋಕ್ಷ
ನೋಡಯ್ಯಾ
ನಿನ್ನನರಿಯದ ಮುಕ್ತಿಯೆ ನರಕ
ಕಂಡಯ್ಯಾ
ನೀನೊಲ್ಲದ ಸುಖವೆ ದಃಖ
ಕಂಡಯ್ಯಾ
ನೀನೊಲಿದ ದುಃಖವೆ ಪರಮಸುಖ
ಕಂಡಯ್ಯಾ
ಚೆನ್ನಮಲ್ಲಿಕಾರ್ಜುನಯ್ಯಾ
ನೀ ಕಟ್ಟಿ ಕೆಡಹಿದ ಬಂಧನವೆ ನಿರ್ಬಂಧವೆಂದಿಪ್ಪೆನು

೬೬೦
ನಿಮ್ಮ ತೇಜವ ನೋಡಲೆಂದು ಹೆರೆಸಾರಿ ನೋಡುತ್ತಿರಲು
ಶತಕೋಟಿ ಸೂರ್ಯರು ಮೂಡಿದಂತಿರ್ದುದಯ್ಯ
ಮಿಂಚಿನ ಬಳ್ಳಿಯ ಸಂಚವ ಕಂಡೆ
ಎನಗಿದು ಸೋಜಿಗವಾಯಿತ್ತು
ಗುಹೇಶ್ವರ
ನೀನು ಜ್ಯೋತಿರ್ಲಿಂಗವಾದರೆ
ಉಪಮಿಸಿ ನೋಡಬಲ್ಲವರಿಲ್ಲಯ್ಯ

೬೬೧
ನಿಮ್ಮ ನೆನೆವುತ್ತಿದ್ದಿತ್ತು
ನೆನೆವ ಮುಖವಾವುದೆಂದರಿಯದೆ

ಪೂಜೆಯ ಪೂಜಿಸುತ್ತಿದ್ದಿತ್ತು
ಪೂಜೆಯ ಮುಖವಾವುದೆಂದರಿಯದೆ
ಆಡಿ ಹಾಡಿ ಬೇಡುತ್ತಿದ್ದಿತ್ತು
ಬೇಡುವ ಮುಖವಾವುದೆಂದರಿಯದೆ
ಕಾಯದಲಿಲ್ಲ ಜೀವದಲ್ಲಿಲ್ಲ ಭಾವದಲಿಲ್ಲ
ಭರಿತವು ಅದು ತಾನಪ್ಪುದು
ತಾನಲ್ಲದುದೇನ ಹೇಳುವೆ ಕೌತುಕವ
ಗುಹೇಶ್ವರನೆಂಬ ಹೆಸರೊಳಗಿದ್ದುದ
ಬೆಸಗೊಂಬವರಿಲ್ಲ ನಿರಾಳದ ಘನವ

೬೬೨
ನಿಮ್ಮನರಿಯದ ಕಾರಣ ಕೈಯಲ್ಲಿ ಹುಲ್ಲು
ನಿಮಗೆರಗದ ಕಾರಣ ಕೊರಳಲ್ಲಿ ನೇಣು
ಹಿಂಡಲೇಕೋ ತೊಳೆಯಲೇಕೋ
ಮುಳುಗಿ ಮುಳುಗಿ ಮೂಗ ಹಿಡಿಯಲೇಕೋ
ಕೂಡಲಸಂಗನ ಶರಣರಲ್ಲಿ
ಡೋಹರ ಕಕ್ಕಯ್ಯನಾವ ತೊರೆಯಲಿ ಮಿಂದ

೬೬೩
ನಿಮ್ಮಲ್ಲಿ ನೀವು ತಿಳಿದು ನೋಡಿರೇ
ಅನ್ಯವಿಲ್ಲ ಕಾಣಿರಣ್ಣ
ಅರಿವು ನಿಮ್ಮಲ್ಲಿಯೇ ತದ್ಗತವಾಗಿಯದೆ
ಅನ್ಯಭಾವವ ನೆನೆಯದೆ
ತನ್ನೊಳಗೆ ತಾನೆಚ್ಚರಬಲ್ಲಡೆ
ತನ್ನಲ್ಲಿಯೆ ತನ್ಮಯ ಗುಹೇಶ್ವರ ಲಿಂಗವು

೬೬೪
ನಿರಾಳವೆಂಬ ಕೂಸಿಂಗೆ ಬೆಣ್ಣೆಯನಿಕ್ಕಿ
ಹೆಸರಿಟ್ಟು ಕರೆದವರಾರೋ
ಅಕಟಕಟಾ
ಶಬ್ದದ ಲಜ್ಜೆಯ ನೋಡಾ
ಗುಹೇಶ್ವರನನರಿಯದ ಅನುಭಾವಿಗಳೆಲ್ಲರ ತರಕಟಗಾಡಿತ್ತು

೬೬೫
ನಿರ್ಣಯವನರಿಯದ ಮನವೇ
ದುಗುಡವನಾಹಾರಂಗೊಂಡೆಯಲ್ಲಾ
ಮಾಯಾಸೂತ್ರವಿದೇನೋ
ಕಂಗಳೊಳಗಣ ಕತ್ತಲೆ ತಿಳಿಯದಲ್ಲಾ
ಬೆಳಗಿನೊಳಗಣ ಶೃಂಗಾರ ಬಳಲುತ್ತಿದೆ
ಗುಹೇಶ್ವರ

೬೬೬
ನೀನಲ್ಲದನ್ಯದೈವವುಂಟೆಂಬವನ ಬಾಯ
ಕೆನ್ನವಾರೆ ಸೀಳಿದಲ್ಲದೆ ಎನ್ನ ಮುನಿಸು ಹೋಗದಯ್ಯಾ
ಎನ್ನ ಕೋಪವಡಗದಯ್ಯಾ
ಎನ್ನ ಬಿನ್ನಪವನವಧರಿಸು
ಕೂಡಲಸಂಗಮದೇವಾ

೬೬೭
ನೀನಾನೆಂಬ ಭಾವವಾರಿಂದಾಯಿತ್ತು
ಹೇಳಾ
ನೀನೆಂಬುದೇ ಅಜ್ಞಾನ
ನಾನೆಂಬುದೇ ಮಾಯಾಧೀನ
ನೀನೆನ್ನದೆ ನಾನೆನ್ನದೆ ಇಪ್ಪ ಸುಖವ
ಭಿನ್ನವಿಲ್ಲದೆ ಅರಿಯಬಲ್ಲಡೆ
ಆ ಸುಖವು ನಿಮಗರ್ಪಿತ
ಕಾಣಾ ಗುಹೇಶ್ವರ

೬೬೮
ನೀನೀಶನೀಯದೆ ಮಾನೀಸನೀವನೆ
ನೀನೀಸುವ ಕಾರಣ ಮಾನಿಸನೀವನು
ಆ ಮಾನಿಸನ ಹೃದಯದೊಳು ಹೊಕ್ಕು
ನೀನೀಸುವ ಕಾರಣದಿಂದ
ನೀನೆ ಶರಣೆಂಬೆನಯ್ಯ
ರಾಮನಾಥ

೬೭೯
ನೀನು ಅಂಗದಲ್ಲಿ ಕಡಿದುದ ಬಿಟ್ಟು
ಬಿಟ್ಟು ನೋಡಿ ನಿನ್ನ ಕುರುಹ ಕಾಣೆ
ನೀನು ಕರ್ಣದಲ್ಲಿ ಹೇಳಿದುದ ನೆನೆದು ನೆನೆದು ಮನದಲ್ಲಿ ನಿಲ್ಲೆ
ನೀ ಬಿಡೆಂದುದ ಬಿಟ್ಟೆ
ನೀ ಹಿಡಿಯೆಂದುದ ಹಿಡಿದೆ
ನೀ ಅರಿಯೆಂದುದ ಮುಖಗುರುಹ ಕಾಣೆ
ನಿನ್ನರಿಕೆ ಇನ್ನೆಂದಿಗೆ
ಈ ಘಟವ ಬಿಡುವುದಕ್ಕೆ ಮೊದಲೆ
ನಿನ್ನಡಿಯ ಗುಡಿಯ ತೋರಿ
ಗೋಪತಿನಾಥ ವಿಶ್ವೇಶ್ವರಲಿಂಗಾ

೬೭೦
ನೀನೊಲಿದಡೆ ಕೊರಡು ಕೊನರುವುದಯ್ಯಾ
ನೀನೊಲಿದಡೆ ಬರಡು ಹಯನಹುದಯ್ಯಾ
ನೀನೊಲಿದಡೆ ವಿಷವೆಲ್ಲ ಅಮೃತವಹುದಯ್ಯಾ
ನೀನೊಲಿದಡೆ ಸಕಲ ಪಡಿಪದಾರ್ಥ ಇದಿರಲ್ಲಿರ್ಪುವು
ಕೂಡಲಸಂಗಮದೇವಾ

೬೭೧
ನೀರ ಕಂಡಲ್ಲಿ ಮುಳುಗುವರಯ್ಯಾ
ಮರನ ಕಂಡಲ್ಲಿ ಸುತ್ತುವರಯ್ಯಾ
ಬತ್ತುವ ಜಲವ ಒಣಗುವ ಮರನ
ಮಚ್ಚಿದವರು ನಿಮ್ಮನೆತ್ತ ಬಲ್ಲರು
ಕೂಡಲಸಂಗಮದೇವಾ

೬೭೨
ನೀರ ನೆಳಲಿನಲ್ಲಿ ಒಂದು ಆರವೆ ಹುಟ್ಟಿತ್ತು
ಅದು ಬೇರಿಲ್ಲದೆ
ಆ ಮರನ ಮೀರುವ ಕೊಂಬಿಲ್ಲದೆ
ಕೊಂಬ ಮೀರುವ ಎಲೆಯಿಲ್ಲದೆ

ಎಲೆಯ ಮೀರುವ ಹೂವಿಲ್ಲದೆ
ಹೂವ ಮೀರುವ ಕಾಯಿಯಿಲ್ಲದೆ
ಇದು ಚೆನ್ನಾಗಿ ತಿಳಿದು ನೋಡಿ
ಆ ನೀರು ಬೇರ ನುಂಗಿ
ಬೇರು ವೃಕ್ಷವ ನುಂಗಿ
ಪರ್ಣ ಕುಸುಮವ ಕೊಂಡು
ಕುಸುಮ ಕಾಯವ ಕೊಂಡು
ಕಾಯಿ ಹಣ್ಣನು ಮೆದ್ದಲ್ಲಿ
ಭಾವವಳಿಯಿತ್ತು
ಇದನಾರು ಬಲ್ಲರು
ನಿಃಕಳಂಕ ಮಲ್ಲಿಕಾರ್ಜುನಾ ನೀನೆ ಬಲ್ಲೆ

**೬೭೩**

ನೀರ ಬೊಬ್ಬುಳಿಕೆಗೆ ಕಬ್ಬುನದ ಕಟ್ಟುಕೊಟ್ಟು
ಸುರಕ್ಷಿತವ ಮಾಡುವ ಭರವ ನೋಡಾ
ಮಹಾದಾನಿ ಕೂಡಲಸಂಗಯ್ಯನ ಪೂಜಿಸಿ
ಬದುಕುವೋ ಕಾಯ ನಿಶ್ಚೈಸದೆ

**೬೭೪**

ನೀರಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ
ಬಯಲಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ
ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ
ಅಗ್ನಿ ಕರಗಿ ಕರ್ಪೂರ ಉಳಿದುದಕ್ಕೆ ಬೆರಗಾದೆನಯ್ಯಾ
ಎನ್ನ ಅಜಗಣ್ಣನ ಯೋಗಕ್ಕೆ

**೬೭೫**

ನೀರಿಂಗೆ ನೈದಿಲೆಯೆ ಶೃಂಗಾರ
ಸಮುದ್ರಕ್ಕೆ ತೆರೆಯೆ ಶೃಂಗಾರ
ಊರಿಗೆ ಆಗರವೆ ಶೃಂಗಾರ
ನಾರಿಗೆ ಗುಣವೆ ಶೃಂಗಾರ

ಗಗನಕ್ಕೆ ಚಂದ್ರಮನೆ ಶೃಂಗಾರ
ನಮ್ಮ ಕೂಡಲಸಂಗನ ಶರಣರಿಗೆ
ನೊಸಲ ವಿಭೂತಿಯೆ ಶೃಂಗಾರ

**೬೭೬**

ನೀರೊಳಗಣ ಕಿಚ್ಚಿಗೆ ನೀರೆ ತಾಯಿ
ಕಲ್ಲೊಳಗಣ ಕಿಚ್ಚಿಗೆ ಕಲ್ಲೆ ತಾಯಿ
ಮರದೊಳಗಣ ಕಿಚ್ಚಿಗೆ ಮರನೆ ತಾಯಿ
ಅವು ಹೊರಹೊಮ್ಮಿದಾಗ
ತಾಯ ತಿಂದು ತಾವು ತಲೆದೋರುವಂತೆ
ಕುರುಹಿಂದ ಅರಿವನರಿತು
ಅರಿವು ಕುರುಹು ನಷ್ಟವ ಮಾಡಿ ನಿಂದಲ್ಲಿಯೆ
ಐಘಟದೂರ ರಾಮೇಶ್ವರಲಿಂಗ ಅಂಗವ ಅರಿತು ನಿಂದ ನಿಲವು

**೬೭೭**

ನೀರೊಳಗಣ ಕಿಚ್ಚು
ತಾಯಲ್ಲಿ ಅಡಗಿತ್ತು
ಶಿಲೆಯೊಳಗಣ ಕಿಚ್ಚು
ತಾಯನುಳುಹಿ ಇದಿರ ಸುಟ್ಟಿತ್ತು
ಮರದೊಳಗಣ ಕಿಚ್ಚು
ಮರನನೂ ಸುಟ್ಟು
ಇದಿರನೂ ಸುಟ್ಟು
ಪರಿಸ್ಪಂದಕ್ಕೆ ಹರಿಯಿತ್ತು
ಇಂತೀ ತ್ರಿವಿಧಭೇದದಿಂದ ಜ್ಞಾನದ ಭೇದವನರಿ
ಐಘಟದೂರ ರಾಮೇಶ್ವರಲಿಂಗವನರಿವುದಕ್ಕೆ

**೬೭೮**

ನೀರೊಳಗೊಂದು ನೆಳಲು ಸುಳಿಯಿತ್ತು
ನೆಳಲೊಳಗೊಂದು ಹೊಳೆವ ಶಬ್ದವು
ಅದು ನೆಮ್ಮಲ್ಲ ಸೊಮ್ಮಲ್ಲ
ಅಮ್ಮಿದಡಾಯಿತ್ತು

ನೆಮ್ಮಿದಡರಳಿಯಿತ್ತು
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ
ಬಯಲು

೬೭೯
ನುಡಿದ ಮಾತಿಂಗೆ ಕೊರತೆಯೆಂದು
ಮನವ ಮಾಡಿ ತನು ಅಂಡಿಸಲೇತಕ್ಕೆ
ಹಾವಿನ ಹೇಳಿಗೆಯ ತೆಗೆದ ಕೋಡಗದಂತೆ
ಮಾತಾಡಲೇಕೆ ಮತ್ತುಡುಗಲೇಕೆ
ಮಕರಧ್ವಜವೈರಿ ಮಾರೇಶ್ವರಾ

೬೮೦
ನುಡಿದಡೆ ಮಿಥ್ಯ ಸುಮ್ಮನಿದ್ದಡೆ ತಥ್ಯವಲ್ಲ
ಈ ಉಭಯದ ಹೆಚ್ಚು ಕುಂದ ಹೊತ್ತುಹೋರಿಯಾಡುತ್ತ
ಮತ್ತೆ ನಿಶ್ಚಯವಂತ ನಾನೆಂದು
ಹೆಚ್ಚು ಕುಂದಿನೊಳಗೆ ಬೇವುತ್ತ
ಮತ್ತೆ ನಿಶ್ಚಯಕ್ಕೆ ದೃಷ್ಟವ ಕೇಳಲಿಲ್ಲ
ಕಾಮಧೂಮ ಧೂಳೇಶ್ವರನು ನಿತ್ಯಾನಿತ್ಯದವನಲ್ಲ

೬೮೧
ನುಡಿದಡೆ
ಮುತ್ತಿನ ಹಾರದಂತಿರಬೇಕು
ನುಡಿದಡೆ
ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದಡೆ
ಸ್ಫಟಿಕದ ಸಲಾಕೆಯಂತಿರಬೇಕು
ನುಡಿದಡೆ
ಲಿಂಗ ಮೆಚ್ಚಿ ಅಹುದಹುದನಬೇಕು
ನುಡಿಯೊಳಗಾಗಿ ನಡೆಯದಿದ್ದಡೆ
ಕೂಡಲಸಂಗಮದೇವನೆಂತೊಲಿವನಯ್ಯಾ

೬೮೨

ನುಡಿದೆಹೆನೆಂಬ ಉಲುಹಿನ ಗಲಭೆಯ ತೋಟಿ ಬಿಡದು
ಉತ್ತಮ ಮಧ್ಯಮ ಕನಿಷ್ಠವೆಂಬುವ
ತಿರುಗಿ ಕಂಡೆಹೆನೆಂಬ ಕಾಲಿನ ಎಡೆಯಾಟ ಬಿಡದು
ಎನಗೆ ಗರ್ವ ಮೊದಲಾದಲ್ಲಿ ನಿಮಗೆ ಗರ್ವ ವೆಗ್ಗಳವಾಯಿತ್ತು
ಈ ಉಭಯ ತೋಟಿಯ ನಾನಿನ್ನಾರಿಗೆ ಹೇಳುವೆ
ಕಪಿಲಸಿದ್ಧಮಲ್ಲಿಕಾರ್ಜುನ

೬೮೩

ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದಡೆ
ಹಿಡಿದಿರ್ದ ಲಿಂಗವು ಘಟಸರ್ಪನಯ್ಯಾ
ನುಡಿಯಲೂ ಬಾರದು ನಡೆಯಲೂ ಬಾರದು
ಲಿಂಗದೇವನೆ ದಿಬ್ಯವೊ
ಅಯ್ಯಾ
ಬಡವನ ಕೋಪವು ಅವುಡಿಗೆ ಮೃತ್ಯುವಾದಂತೆ
ಕಡೆಗೆ ದಾಂಟದು ಕಾಣಾ ಕೂಡಲಸಂಗಮದೇವಾ

೬೮೪

ನುಡಿಯಿಂದ ನಡೆಗೆಟ್ಟಿತ್ತು
ನಡೆಯಿಂದ ನುಡಿಗೆಟ್ಟಿತ್ತು
ಭಾವದ ಗುಸುಟು
ಅದು ತಾನೆ ನಾಚಿ ನಿಂದಿತ್ತು
ಗುಹೇಶ್ವರನೆಂಬ ಅರಿವು
ಸಿನೆಬಂಜೆಯಾಯಿತಲ್ಲಾ

೬೮೫

ನುಡಿಯಿರಿದಡೆ ಪಡಿಕೈದೇಕೆ
ಕೈಯಲ್ಲಿ ಅರಿವು ವಸ್ತುವಾದಡೆ
ಬೇರೊಂದು ಕುರುಹೇಕೆ
ಕೈಯಲ್ಲಿ ಕುರುಹು ಕುರುಹಿಂಗೆ ಬೇಕು
ಅರಿವು ಅರಿವಿಂಗೆ ಬೇಕು
ಅರ್ಕೇಶ್ವರಲಿಂಗವನರಿವುದಕ್ಕೆ ಕುರುಹಿನ ಮರೆಬೇಕು

೬೮೬
ನುಡಿಯೆನೆಂಬಲ್ಲಿಯೆ ನುಡಿ ಅದೆ
ನಡೆಯೆನೆಂಬಲ್ಲಿಯೆ ನಡೆ ಅದೆ
ಭಾವಿಸೆನೆಂಬಲ್ಲಿಯೆ ಭಾವ ಅದೆ
ಅರಿದು ಮರೆದೆನೆಂಬಲ್ಲಿಯೆ ಅರಿವು ಮರವೆ ಅದೆ
ಅಂಗದಲ್ಲಿ ಲಿಂಗ ಲೀಯವಾಯಿತ್ತೆಂದಡೆ
ಅಲ್ಲಿಯೆ ಅಂಗ ಅದೆ
ಅನಂಗಸಂಗಿಯಾದೆನೆಂಬಲ್ಲಿಯೆ ವಿಷಯಸೂತಕ ಅದೆ
ನಾನೆ ನಾನಾದೆನೆಂಬಲ್ಲಿಯೆ ನೀನೆಂಬುದು ಅದೆ
ಅರಿದು ಮರೆದ ಪರಿ ಎಂತು ಹೇಳಾ
ಅರಿವು ನಷ್ಟವಾಗಿ ಮರಹು ಲಯವಾಗಿಪ್ಪಡೆ
ಎನ್ನ ಅಜಗಣ್ಣತಂದೆಯಲ್ಲದೆ ಮತ್ತಾರನೂ ಕಾಣೆ

೬೮೭
ನೆನವ ಮನಕ್ಕೆ ಮಣ್ಣನೆ ತೋರಿದೆ
ನೋಡುವ ಕಣ್ಣಿಗೆ ಹೆಣ್ಣನೆ ತೋರಿದೆ
ಪೂಜಿಸುವ ಕೈಗೆ ಹೊನ್ನನೆ ತೋರಿದೆ
ಇಂತೀ ತ್ರಿವಿಧವನೆ, ತೋರಿ ಕೊಟ್ಟು
ಮರಹನಿಕ್ಕಿದೆಯಯ್ಯಾ
ಅಮರಗುಂಡದ ಮಲ್ಲಿಕಾರ್ಜುನಯ್ಯಾ
ನೀ ಮಾಡಿದ ಬಿನ್ನಾಣಕ್ಕೆ ನಾನು ಬೆರಗಾದೆ
ಕಾಣಾ ಕಲಿದೇವರದೇವ

೬೮೮
ನೆನೆವುತ್ತಿದೆ ಮನ
ದುರ್ವಾಸನೆಗೆ ಹರಿವುತ್ತಿದೆ ಮನ
ಕೊನೆಗೊಂಬೆಗೆ ಎಳೆವುತ್ತಿದೆ ಮನ
ಕಟ್ಟಿಗೆ ನಿಲ್ಲದು ಮನ
ಬಿಟ್ಟಡೆ ಹೋಗದು ಮನ
ತನ್ನಿಚ್ಛೆಯಲಾಡುವ ಮನವ ಕಟ್ಟಿಗೆ ತಂದು ಗೊತ್ತಿಗೆ ನಿಲಿಸಿ
ಬಚ್ಚಬರಿಯ ಬಯಲಿನೊಳಗೆ ಓಲಾಡುವ

ಶರಣರ ಪಾದದಲ್ಲಿ ನಾ ಬೆಚ್ಚಂತಿದ್ದೆನಯ್ಯಾ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣ

೬೮೯
ನೆರೆ ಕೆನ್ನೆಗೆ ತೆರೆ ಗಲ್ಲಕೆ
ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ ಬೆನ್ನು ಬಾಗಿ
ಅನ್ಯರಿಗೆ ಹಂಗಾಗದ ಮುನ್ನ
ಕಾಲಮೇಲೆ ಕೈಯನೂರಿ
ಕೋಲ ಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ
ಮೃತ್ಯು ಮುಟ್ಟದ ಮುನ್ನ
ಪೂಜಿಸುವೋ ಕೂಡಲಸಂಗಮದೇವನ

೬೯೦
ನೆರೆದರೆ ಗಣಂಗಳು
ಹರದಡೆ ಕಂಚುಗಾರರು
ಲಿಂಗವ ಮಾರಿ ಉಂಬ ಭಂಗಾರರು
ತಮ್ಮ ತಳಿಗೆಯ ಕೊಂಡುಹೋಗಿ
ಅನ್ಯರ ಮನೆಯಲುಂಬ ಕುನ್ನಿಗಳೇನೆಂಬೆ
ರಾಮನಾಥ

೬೯೧
ನೆಲ ತಳವಾರನಾದಡೆ
ಕಳ್ಳಂಗೆ ಹೊಗಲೆಡೆಯುಂಟೆ
ಸರ್ವಾಂಗಲಿಂಗಿಗೆ ಅನರ್ಪಿತವುಂಟೆ
ನಿಃಕಳಂಕ ಮಲ್ಲಿಕಾರ್ಜುನಾ

೬೯೨
ನೆಲದ ಬೊಂಬೆಯ ಮಾಡಿ
ಜಲದ ಬಣ್ಣವನುಡಿಸಿ

ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ
ವಾಯುವನಲನಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ
ಆಡಿಸುವ ಯಂತ್ರವಾಹಕನಾರೋ
ಬಯಲ ಕಂಭಕ್ಕೆ ತಂದು ಸಯವೆಂದು ಪರವ ಕಟ್ಟಿದಡೆ
ಸಯವದ್ವಯವಾಯಿತ್ತು ಏನೆಂಬೆ
ಗುಹೇಶ್ವರ

೬೯೩
ನೆಲದ ಮರೆಯ ನಿಧಾನದಂತೆ
ಮುಗಿಲ ಮರೆಯಲಡಗಿದ ಮಿಂಚಿನಂತೆ
ಬಯಲ ಮರೆಯಲಡಗಿದ ಮರೀಚಿಯಂತೆ
ಕಂಗಳ ಮರೆಯಲಡಗಿದ ಬೆಳಗಿನಂತೆ
ಗುಹೇಶ್ವರ ನಿಮ್ಮ ನಿಲವು

೬೯೪
ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ
ಜಲವೊಂದೆ ಶೌಚಾಚಮನಕ್ಕೆ
ಕುಲವೊಂದೆ ತನ್ನ ತಾನರಿದವಂಗೆ
ಫಲವೊಂದೆ ಷಡುದರುಶನ ಮುಕ್ತಿಗೆ
ನಿಲವೊಂದೆ ಕೂಡಲಸಂಗಮದೇವಾ ನಿಮ್ಮನರಿದವಂಗೆ

೬೯೫
ನೆಲ್ಲು ನೆಲದಲ್ಲಿಯೆ ಅಳಿದು ಹುಲ್ಲಿನ ಒಡಲಲ್ಲಿಯೆ ಜನಿಸಿ
ಆ ಹುಲ್ಲ ತನ್ನೊಳಗಿರಿಸಿದ ಭೇದವ ನೋಡ
ತನ್ನೊಡಲಳಿದಲ್ಲಿ ನೆಲ್ಲೂ ಅಲ್ಲ ಹುಲ್ಲೂ ಅಲ್ಲ
ಆ ಹೊಡೆಯಲ್ಲಿ ಅಡಗಿತ್ತೆಂದರಿಯೆ
ಕುಂಭೇಶ್ವರಲಿಂಗದಲ್ಲಿ ಜಗನ್ನಾಥನನರಿಯಲಾಗಿ

೬೯೬
ನೆಳಲ ಹೂಳಿಹೆನೆಂದು ಬಳಲುತ್ತಿದೆ ಜಗವೆಲ್ಲ
ನೆಳಲು ಸಾಯಬಲ್ಲುದೆ ಅಂಗಪ್ರಾಣಿಗಳಿಗೆ
ಸಮುದ್ರದಾಚೆಯ ತಡಿಯಲ್ಲಿ ಕಳ್ಳನ ಕಂಡು

ಇಲ್ಲಿ ಮುನಿದು ಬೈದರೆ ಅವ ಸಾಯಬಲ್ಲನೆ
ಭಾವದಲ್ಲಿ ಹೊಲಿದ ಹೊಲಿಗೆಯ ಭೇದವನರಿಯರು
ಕಾಮಿಸಿದರುಂಟೆ ನಮ್ಮ ಗುಹೇಶ್ವರಲಿಂಗವು

೬೯೭

ನೇತ್ರದಲ್ಲಿ ಕಂಡು ಶ್ರೋತ್ರದಲ್ಲಿ ಕೇಳಿ
ಗಾತ್ರದಲ್ಲಿ ಮುಟ್ಟಿ ಚಿತ್ರದಲ್ಲಿ ಒಲಿಸುವಡೆ
ಮತ್ತೊಬ್ಬರಲ್ಲಿ ಹೊತ್ತು ಹೋರಲೇಕಣ್ಣಾ
ಅರ್ಕೇಶ್ವರಲಿಂಗವನರಿವುದಕ್ಕೆ

೬೯೮

ನೇಮಿಯ ನೇಮ ಲಿಂಗಾರ್ಚನೆಯ ಕೆಡಿಸಿತ್ತಲ್ಲಾ
ಮತಿಗೆಟ್ಟ ಕುಂಬಾರ ಮಣ್ಣಸೂಜಿಯ ಮಾಡಿ
ಕಮ್ಮಾರಗೇರಿಗೆ ಮಾರಹೋದಂತೆ
ಸಕಳೇಶ್ವರದೇವಾ ನಿಮ್ಮ ಶರಣರು
ಶೃಂಗಾರದಲ್ಲಿ ಲಿಂಗವ ಮರೆದರಲ್ಲಾ

೬೯೯

ನೇಹವೆಳದಾಯಿತ್ತಾಗಿ
ನೋಟ ವಿಪುಳವಾಯಿತ್ತ ಕಂಡೆ
ಅಂಗದ ಕಳೆ
ಕಂಗಳ ಮೋಹ
ಎವೆಗೆವೆ ಸೈರಿಸದು
ಬೆಳಕಿನ ಮೇಲೆ ಕೆಂಪಡರಿತ್ತು
ಉದಕ ಪಲ್ಲಟ ಮತ್ಸ್ಯ ಬೆನ್ನು ಬಸುರ ತೋರಿತ್ತು
ಮಾಗಿಯ ಕೋಗಿಲೆಯಂತೆ ಮೂಗನಾಗಿದ್ದೆನವ್ವಾ
ಮಹಾಲಿಂಗ ಗಜೇಶ್ವರನೊಲವಿಂದೆನಗೆ ರಣದಣಕನವ್ವಾ

೭೦೦

ನೋಡುವ ಸೂರ್ಯ ಸುರಿವಜಲ
ಹೊಲೆ ನೆಲೆ ಶುದ್ಧವೆಲ್ಲಕ್ಕೂ ಸರಿ
ಅರಿದು ನುಡಿದವಂಗೆ

ಮರೆದು ನುಡಿದು ತಲ್ಲಣಿಸುವಂಗೆ
ಅವನ ಹೃದಯವೇ ಸಾಕ್ಷಿ
ಗೊಹೇಶ್ವರಲಿಂಗಕ್ಕೆ ತಥ್ಯ ಮಿಥ್ಯವಿಲ್ಲ [ಸಂಗನ ಬಸವಣ್ಣ]

೭೦೧
ನೋಡುವುದ ನೋಡಲರಿಯದೆ
ಕೆಟ್ಟಿತ್ತೀ ಲೋಕವೆಲ್ಲ
ನೋಡುವುದ ನೋಡಬಲ್ಲಡೆ
ಕೂಡಲಿಲ್ಲ ಅಗಲಲಿಲ್ಲ
ನೋಟದ ಕೂಟದ ಅಗಲದ ಸುಖವನು
ಗುಹೇಶ್ವರ
ನಿಮ್ಮ ಶರಣ ಬಲ್ಲ

೭೦೨
ನೋಡುವುದದು ನೋಡಲೇಬೇಕು
ಮಾಡುವುದದು ಮಾಡಲೇಬೇಕು
ನೋಡಿ ಮಾಡಿ
ಮನದಲ್ಲಿ ಲೀಢವಾಗಿರಬಾರದು
ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ

೭೦೩
ಪಂಕವಿಲ್ಲದ ಕಮಲಕ್ಕೆ ಸುಗಂಧ ಸುಲಲಿತವೆಂತಪ್ಪುದಯ್ಯಾ
ಹೊನ್ನು ಹೆಣ್ಣು ಮಣ್ಣಿಲ್ಲದೆ ದೇವತಾಯೋಗ್ಯವೆಂತಪ್ಪುದಯ್ಯಾ
ಕಮಲ ಪಂಕದಲಿ ವರ್ತಿಸಿದಂತೆ ವರ್ತಿಸುತಿಪ್ಪರು ನಿಮ್ಮ ಶರಣರು
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

೭೦೪
ಪಕ್ಕ ಮುರಿದ ಹಕ್ಕಿಯಂತೆ
ಸಾಸಿವೆಯನೊಕ್ಕಿದ ಎತ್ತಿನಂತೆ
ಬೆಳಗ ಕಂಡು ಮೈಮರೆದ ಹುಲ್ಲೆಯಂತೆ

ಅಳಿಕುಲಕ್ಕೆ ವಿಷವಾದ ಸಂಪಿಗೆಯ ಪುಷ್ಪದಂತೆ
ಎನ್ನ ತನು ಮನ ಕುಲಕ್ಕೆ
ನಿಮ್ಮ ನೆನಹೆಂಬ ಜ್ವಾಲೆ ತಾಗಿ
ಸತ್ತೆನಯ್ಯಾ ಸಾಯದಂತೆ
ಹುಲ್ಲಸರವಿಯಲ್ಲಿ ಕಟ್ಟಿದ ಕಿಚ್ಚಿನಂತೆ
ಬೇಯದಂತೆ ಬೆಂದೆನಾಗಿ
ನಿಜಗುರು ಭೋಗೇಶ್ವರಾ
ನಿಮ್ಮ ಸಂಗಸುಖವದೇಕೊ

೨೦೫

ಪಕ್ಷಿಯ ಕುಕ್ಕೆಯೊಳಗಿಕ್ಕಿ ಮಾರಬಹುದಲ್ಲದೆ
ಮತ್ತ ಗಜವ ಮಾರಬಹುದೆ
ಅಯ್ಯಾ
ಚಿತ್ರವ ಬರೆವುದಕ್ಕೆ ಲೆಕ್ಕಣಿಕೆಯಲ್ಲದೆ ಚಿತ್ತಜಗುಂಟೆ
ಪುನರಪಿ ವಸ್ತುವನರಿವುದಕ್ಕೆ ಹೊತ್ತುಗೊತ್ತುಂಟೆ
ಅರ್ಕೇಶ್ವರನ ಕೂಡುವುದಕ್ಕೆ ತತ್ಕಾಲವುಂಟೆ

೨೦೬

ಪಚ್ಚೆಯ ನೆಲೆಗಟ್ಟು
ಕನಕದ ತೋರಣ
ವಜ್ರದ ಕಂಬ
ಪವಳದ ಚಪ್ಪರವಿಕ್ಕಿ
ಮುತ್ತುಮಾಣಿಕದ ಮೇಲುಕಟ್ಟು ಕಟ್ಟಿ
ಮದುವೆಯ ಮಾಡಿದರು
ಎಮ್ಮವರೆನ್ನ ಮದುವೆಯ ಮಾಡಿದರು
ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆಯಮಾಡಿದರು

೨೦೭

ಪದವನರಿಯದ ವಾಚಕ ಘಾತಕನ ಇರವು
ಪುಸಿ ಧನುವಿನಲ್ಲಿ ಸಿಕ್ಕಿದ ಮಿಸುಕಿದ ಕಣೆಯಂತೆ
ಹುಸಿದವನ ಒಡಲಿನ ಪ್ರತಿಮೂದಲೆಯಂತೆ

ಇಂತೀ ಅರಿವಿನ ಒಳಗನರಿಯದ ಜೂಜಿನ ಹುದುಗಿಂಗೆ ಬಂದು
ಸುರಿಗಾಯ ಸುರಿವವನ ವಿಧಿಯಂತೆ
ಗುಡಿಯ ಗುಮ್ಮಟನೊಡೆಯ ಅಗಮ್ಯೇಶ್ವರಲಿಂಗ

೭೦೮
ಪದವನರ್ಪಿಸಬಹುದಲ್ಲದೆ
ಪದಾರ್ಥವನರ್ಪಿಸಬಾರದು
ಓಗರವನರ್ಪಿಸಬಹುದಲ್ಲದೆ
ಪ್ರಸಾದವನರ್ಪಿಸಬಾರದು
ಗುಹೇಶ್ವರ
ನಿಮ್ಮ ಶರಣರು ಹಿಂದ ನೋಡಿ ಮುಂದನರ್ಪಿಸುವರು

೭೦೯
ಪದವು ಪದಾರ್ಥವು ಎಂಬರು
ಪದವಾವುದೆಂದರಿಯರು
ಪದಾರ್ಥವಾವುದೆಂದರಿಯರು
ಪದವೇ ಲಿಂಗ ಪದಾರ್ಥವೇ ಭಕ್ತ
ಇದನರಿದು ಪದಾರ್ಥವ ತಂದು ಅರ್ಪಿತವ ಮಾಡಬಲ್ಲಡೆ
ಕೂಡಿಕೊಂಡಿಪ್ಪ ನಮ್ಮ ಕೂಡಲಚೆನ್ನಸಂಗಮದೇವ

೭೧೦
ಪರರ ಚಿಂತೆ ಎಮಗೇಕಯ್ಯಾ
ನಮ್ಮ ಚಿಂತೆ ನಮಗೆ ಸಾಲದೆ
ಕೂಡಲಸಂಗಯ್ಯ ಒಲಿದಾನೊ
ಒಲಿಯನೊ ಎಂಬ ಚಿಂತೆ
ಹಾಸಲುಂಟು ಹೊದೆಯಲುಂಟು

೭೧೧
ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ
ಸಂಗದೊಳಗೆ ಶರಣರ ಸಂಗವೆ ಚೆಲುವ

ಕಾಯಗೊಂಡು ಹುಟ್ಟಿದ ಮೂಢರೆಲ್ಲ
ಸಾಯದ ಸಂಚವನರಿವುದೆ ಚೆಲುವ
ಗುಹೇಶ್ವರ

೭೧೨
ಪರುಷದ ಪುತ್ಥಳಿಗೆ ಕಬ್ಬುನದ ಆಭರಣಗಳುಂಟೇ
ಅಯ್ಯಾ
ಲೋಕದೊಳಗೆ ಲಿಂಗ ಲಿಂಗದೊಳಗೆ ಲೋಕವಾದಡೆ
ಹಿಂದಣ ಪ್ರಳಯಗಳೇಕಾದವು
ಇನ್ನು ಮುಂದಿನ ಪ್ರಳಯಗಳಿಗಿನ್ನೆಂತೋ
ಲೋಕವು ಲೋಕದಂತೆ
ಲಿಂಗವು ಲಿಂಗದಂತೆ
ಈ ಉಭಯದ ಭೇದವ
ಗುಹೇಶ್ವರ
ನಿಮ್ಮ ಶರಣನೆ ಬಲ್ಲ

೭೧೩
ಪಾತಾಳದಗ್ಘವಣಿಯ ನೇಣಿಲ್ಲದೆ ತೆಗೆಯಬಹುದೆ
ಸೋಪಾನದ ಬಲದಿಂದಲ್ಲದೆ
ಶಬ್ದಸೋಪಾನದ ಬಲದಿಂದ ನಿಶ್ಶಬ್ದ ಸೋಪಾನವ ಕಟ್ಟಿ
ನಡೆಯಿಸಿದರು ಪುರಾತರು
ದೇವಲೋಕಕ್ಕೆ ಬಟ್ಟೆ ಕಾಣಿರೋ
ಮರ್ತ್ಯರ ಮನದ ಮೈಲಿಗೆಯ ಕಳೆಯಲೆಂದು
ಗೀತಮಾತೆಂಬ ಜ್ಯೋತಿಯ ಬೆಳಗಿಟ್ಟರು
ಕೂಡಲಚೆನ್ನಸಂಗನ ಶರಣರು

೭೧೪
ಪಾತಾಳದಿಂದತ್ತ ಮಾತ ಬಲ್ಲವರಿಲ್ಲ
ಗಗನದಿಂದ ಮೇಲೆ ಅನುಭಾವ ತಾನಿಲ್ಲ
ಒಳಗಣ ಜ್ಯೋತಿಯ ಬೆಳಗ ಬಲ್ಲವರಿಲ್ಲ

ಹೊರಗಣ ಹೊರಗನು ಅರಿಯಬಲ್ಲವರಿಲ್ಲ
ಹಿಂದಣ ಹಿಂದನು ಮುಂದಣ ಮುಂದನೂ
ತಂದೆ ತೋರಿದನು ನಮ್ಮ ಗುಹೇಶ್ವರನು

೭೧೫
ಪುರಾತರು ಪುರಾತರು ಎಂದು
ಪುರಾಣದೊಳಗಣ ಕಥೆಯನೆ ಕಲಿತುಕೊಂಡು
ಪುರದ ಬೀದಿಯೊಳಗೆ ಹರದರಂತೆ
ಮಾತಿನ ಹಸರವನಿಕ್ಕಿ ಮಾರುವ ಅಣ್ಣಗಳಿರಾ
ನೀವು ಕೇಳಿರೊ
ಅಂದು ಹೋದವರ ಸುದ್ದಿಯ ನುಡಿದರೆ ಇಂದು ಬಂದರೊ
ನಿಮಗೆ ಇಂದು ಬಂದವರ ಒಂದೇ ಎಂದರಿದ ಭಕ್ತರ
ಆಚರಣೆಯ ತೋರಿ ಬದುಕಿಸಯ್ಯಾ
ಬಸವಪ್ರಿಯ ಕೂಡಲಚೆನ್ನಬಸವಣ್ಣಾ

೭೧೬
ಪುರುಷನ ಮುಂದೆ ಮಾಯೆ
ಸ್ತ್ರೀಯೆಂಬ ಅಭಿಮಾನವಾಗಿ ಕಾಡುವುದು
ಸ್ತ್ರೀಯ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡುವುದು
ಲೋಕವೆಂಬ ಮಾಯೆಗೆ ಶರಣಚಾರಿತ್ರ್ಯ
ಮರುಳಾಗಿ ತೋರುವುದು
ಚೆನ್ನಮಲ್ಲಿಕಾರ್ಜುನನೊಲಿದ ಶರಣಂಗೆ
ಮಾಯೆಯಿಲ್ಲ ಮರಹಿಲ್ಲ ಅಭಿಮಾನವೂ ಇಲ್ಲ

೭೧೭
ಪೂಜೆ ಪುಣ್ಯಕ್ಕೆ ಒಡಲು
ಜ್ಞಾನ ಶೂನ್ಯಕ್ಕೆ ಒಡಲು
ಉಂಟು ಇಲ್ಲ ಎಂಬುದು ಸಂದೇಹಕ್ಕೆ ಒಡಲು
ಇಂತೀ ಒಡಲಳಿದು ಕೊಡುವ ಕೊಂಬ ಎಡೆಯಾಟ ನಿಂದು
ಜಿಡ್ಡೆಂಬ ಜಿಗುಡು ಹರಿದು ಶೂನ್ಯವೆಂಬ ಸುಳುಹು ಸತ್ತು
ಮತ್ತಾವುದೂ ಕಲೆದೋರದೆ ನಿಂದ ನಿಜ ತಾನು ತಾನೆ
ಕಾಮಧೂಮ ಧೂಳೇಶ್ವರಾ

೭೧೮
ಪೃಥ್ವಿ ಅಪ್ಪು ತೇಜ ವಾಯು ಆಕಾಶದಿಂದ
ಹೊಂದುವ ಹುಟ್ಟುವ ದೇಹದ ಅಂದಗಾರಿಕೆಯಲ್ಲಿ
ಬಂದುದನರಿಯ
ಬಂದಂತೆ ಹಿಂಗಿತೆಂದು ಇರು
ಮುಂದಣ ನಿಜಲಿಂಗವನರಿಯಾ
ನಿಃಕಳಂಕ ಮಲ್ಲಿಕಾರ್ಜುನಾ

೭೧೯
ಪೃಥ್ವಿಯ ಮೇಲಣ ಶಿಲೆಯ ತಂದು ಪ್ರತಿಮೆಗಳ ಮಾಡಿ
ಕಲ್ಲುಕುಟಿಗನಲ್ಲಿಯೆ ಗುರುವಾದ ಕಲ್ಲು ಶಿಷ್ಯನಾದ
ಹಿಂದಣಾದಿಯನರಿಯದ ಗುರು
ಮುಂದೆ ವೇದಿಸಲಿಲ್ಲದ ಉಪದೇಶಕೊಳ್ಳಲರಿಯದ ಶಿಷ್ಯ
ಈ ಎರಡೂ ಕಲ್ಲಕುಟಿಗನ ಕಲ್ಲಿನಂತೆ
ಕಾಣಾ
ಕಲಿದೇವಯ್ಯ

೭೨೦
ಪೃಥ್ವಿಯನತಿಗಳೆದ ಸ್ಥಾವರಂಗಳಿಲ್ಲ
ಅಪ್ಪುವನತಿಗಳೆದ ತೀರ್ಥಯಾತ್ರೆಗಳಿಲ್ಲ
ಅಗ್ನಿಯನತಿಗಳೆದ ಹೋಮಸಮಾಧಿಗಳಿಲ್ಲ
ವಾಯುವನತಿಗಳೆದ ನೇಮನಿತ್ಯಂಗಳಿಲ್ಲ
ಆಕಾಶವನತಿಗಳೆದ ಧ್ಯಾನ ಮೌನಂಗಳಿಲ್ಲ
ಗುಹೇಶ್ವರನರಿದಂಗೆ
ಇನ್ನಾವಂಗವೂ ಇಲ್ಲ

೭೨೧
ಪೃಥ್ವಿಯೆಂಬ ಅಂಗದ ಧರೆಯಲ್ಲಿ
ಅಪ್ಪುವೆಂಬ ಅಸು ಹರಿವುತ್ತಿರಲಾಗಿ
ಬಹುಚಿತ್ತವೆಂಬ ಜನರು ನೆರೆದು
ಅರುವೆಂಬ ಹರುಗೋಲು ಕೆಟ್ಟಿದೆ

ಕುರುಹಿನ ಜಲ್ಲೆಯ ಹಿಡಿದು
ಒತ್ತುವರಿಲ್ಲದೆ ತಡಿಯಲ್ಲಿ ಕೂಗುತ್ತೈದಾರೆ
ಏಣಾಂಕಧರ ಸೋಮೇಶ್ವರಲಿಂಗವನರಿಯದೆ

೭೨೨
ಪೈರಿಗೆ ನೀರು ಬೇಕೆಂಬಲ್ಲಿ
ಉಚಿತವನರಿದು ಬಿಡಬೇಕು
ಕ್ರೀಗೆ ಅರಿವು ಬೇಕೆಂಬಲ್ಲಿ
ಉಭಯನರಿದು ಘಟಿಸಬೇಕು
ಏರಿ ಹಿಡಿವನ್ನಕ್ಕ ನೀರ ಹಿಡಿದಡೆ ಸುಖವಲ್ಲದೆ ಮೀರಿದರುಂಟೆ
ಕ್ರೀಯ ಬಿಡಲಿಲ್ಲ
ಅರಿವ ಮರೆಯಲಿಲ್ಲ
ಬೆಳೆಯ ಕೊಯಿದ ಮತ್ತೆ ಹೊಲಕ್ಕೆ ಕಾವಲುಂಟೆ
ಫಲವ ಹೊತ್ತ ಪೈರಿನಂತೆ
ಪೈರನೊಳಕೊಂಡ ಫಲದಂತೆ
ಅರಿವು ಆಚರಣೆಯೆಲ್ಲ ನಿಂದು
ಆಚರಣೆ ಅರಿವಿನಲ್ಲಿ ಲೇಪನಾದ ಮತ್ತೆ
ಕಾಮಭೀಮ ಜೀವಧನನೊಡೆಯನೆಂಬುದ ಭಾವಿಸಲಿಲ್ಲ

೭೨೩
ಪ್ರತಿಯಿಲ್ಲದ ಲಿಂಗದಲ್ಲಿ ಪ್ರತಿರಹಿತವಾದ ಮಹಿಮನಿಗೆ
ಅತಿಶಯವೊಂದಿಲ್ಲಾಗಿ ಸಂಸ್ಮೃತಿ ವಿಸ್ಮೃತಿಗಳಿಲ್ಲ
ಸೂಕ್ಷ್ಮಾಸೂಕ್ಷ್ಮವಿಲ್ಲ ಯೋಗವಿಯೋಗವಿಲ್ಲ
ಅಭೇದ್ಯ ಚಿತ್ತಾಕಾಶಂಗೆ ಒಳಹೊರಗಿಲ್ಲ
ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣಂಗೆ

೭೨೪
ಬಂಗಾರದ ರೂಪಿದ್ದಲ್ಲದೆ ಬಣ್ಣವನವಗವಿಸದು
ಬಣ್ಣ ರಂಜನೆಯಾಗಿ ರಂಜಿಸುತ್ತಿರೆ ಎಲ್ಲರ ಕಣ್ಣಿಗೆ ಮಂಗಲ
ಇಂತೀ ಕಾಯ ಜೀವ ಜ್ಞಾನದ ಬೆಳಗು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗದ ಒದಗು

೭೨೫

ಬಂಗಾರವನೊರೆದು ಬಣ್ಣವ ಕಾಣಬೇಕಲ್ಲದೆ
ಬಣ್ಣವನೊರೆದು ಬಂಗಾರದ ಇರವನರಿಯಬಹುದೆ
ಜೀವವರಿದು ಜ್ಞಾನವ ಕಾಣಬೇಕಲ್ಲದೆ
ಜೀವವಳಿದು ಜ್ಞಾನಕ್ಕೆ ಉಳಿವುಂಟೆ
ಅದು ಜ್ಯೋತಿಯ ಮೇಲಣ ತಮವದೆ
ಕೆಳಗೆ ಬೆಳಗು ತುದಿಯಲ್ಲಿ ಸಮವದೆ
ತಿಳಿದು ನೋಡಿ
ಆ ಪರಿಯ ಇರವು ಜೀವಪರಮನ ಕಲೆ
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಲಿಂಗಾ

೭೨೬

ಬಂಜೆ ಬೇನೆಯನರಿವಳೆ
ಬಲದಾಯಿ ಮುದ್ದ ಬಲ್ಲಳೆ
ನೊಂದವರ ನೋವ ನೋಯದವರೆತ್ತ ಬಲ್ಲರೊ
ಚೆನ್ನಮಲ್ಲಿಕಾರ್ಜುನಯ್ಯನಿರಿದಲಗು
ಒಡಲಲ್ಲಿ ಮುರಿದು ಹೊರಳುವೆನ್ನಳಲನು
ನೀವೆತ್ತ ಬಲ್ಲಿರೆ ಎಲೆ ತಾಯಿಗಳಿರಾ

೭೨೭

ಬಂಡಿಯ ಮೇಗಣ ಹೆಳವನಂತೆ
ಕಂಡ ಕಂಡ ಕಡೆಗೆ ಹಲುಬಿದಡೆ
ನಿಮಗೆ ಬಂದುದೇನಿರೊ
ಆ ಮಹಾಘನವನರಿಯದನ್ನಕ್ಕ
ಹಾಡಿದಡಿಲ್ಲ ಹರಸಿದಡಿಲ್ಲ
ಹೇಳಿದಡಿಲ್ಲ ಕೇಳಿದಡಿಲ್ಲ
ಇವೇನ ಮಾಡಿದಡೂ
ವಾಯಕ್ಕೆ ವಾಯವೆಂದರು
ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ

೭೨೮
ಬಂದ ಬಹುರೂಪದಲ್ಲಿ ಸಂದಿಲ್ಲದೆ ಆಟವನಾಡುತ್ತ
ಬಂದ ಬಂದವರ ಮೆಚ್ಚಿಸುತ್ತ
ಅವರವರಂದಕ್ಕೆ ಕೊಂಡಾಡಿ ಬಂದುದ ಕೈಕೊಂಡೆ
ರೇಕಣ್ಣಪ್ರಿಯ ನಾಗಿನಾಥನಲ್ಲಿ

೭೨೯
ಬಂದಿತ್ತು ದಿನ
ಬಸವಣ್ಣ ಕಲ್ಲಿಗೆ
ಚನ್ನಬಸವಣ್ಣ ಉಳುವೆಯಲ್ಲಿಗೆ
ಪ್ರಭು ಅಕ್ಕ ಕದಳಿದ್ವಾರಕ್ಕೆ
ಮಿಕ್ಕಾದ ಪ್ರಮಥರೆಲ್ಲರೂ ತಮ್ಮ ಲಕ್ಷ್ಯಕ್ಕೆ
ನಾ ತುರುವಿನ ಬೆಂಬಳಿಯಲ್ಲಿ ಹೋದ ಮರೆಯಲ್ಲಿ
ಅಡಗಿಹರೆಲ್ಲರು ಅಡಗಿದುದ ಕೇಳಿ ನಾ
ಗೋಪತಿನಾಥ ವಿಶ್ವೇಶ್ವರಲಿಂಗದಲ್ಲಿಯೆ ಉಡುಗುವೆನು

೭೩೦
ಬಂದುದ ಸಾಕೆನ್ನದೆ
ಬಾರದುದ ತಾ ಎನ್ನದೆ
ಗಡಿಗೆ ಬಟ್ಟಲು ನಮ್ಮೆಡೆಯಲ್ಲಿ ಒಡಗೂಡಿ ಸುರಿಯೆನ್ನದೆ
ಮಂತ್ರಭಿನ್ನವಾಗಿ ಮತ್ತರಿಗು ಸಂಚರಿಸದೆ
ಕೆಲಬಲದಿಂದ ಅವರಿಗೆ ಅದು ನೇಮವೆಂದೆನಿಸದೆ
ಲಿಂಗಕ್ಕೆ ಬಂದು ಸಂದುದ
ಆನಂದದಿಂದ ಸ್ವೀಕರಿಸಿ ನಿಂತುದೆ ಭರಿತಾರ್ಪಣ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗದಲ್ಲಿ

೭೩೧
ಬಡತನಕ್ಕೆ ಉಂಬುವ ಚಿಂತೆ
ಉಣಲಾದರೆ ಉಡುವ ಚಿಂತೆ
ಉಡಲಾದರೆ ಇಡುವ ಚಿಂತೆ
ಇಡಲಾದರೆ ಹೆಂಡಿರ ಚಿಂತೆ

ಹೆಂಡಿರಾದರೆ ಮಕ್ಕಳ ಚಿಂತೆ
ಮಕ್ಕಳಾದರೆ ಬದುಕಿನ ಚಿಂತೆ
ಬದುಕಾದರೆ ಕೇಡಿನ ಚಿಂತೆ
ಕೇಡಾದರೆ ಮರಣದ ಚಿಂತೆ
ಇಂತೀ ಹಲವು ಚಿಂತೆಯಲ್ಲಿ ಇಪ್ಪವರ ಕಂಡೆನು
ಶಿವನ ಚಿಂತೆಯಲ್ಲಿದ್ದವರೊಬ್ಬರನೂ ಕಾಣೆನೆಂದಾತ
ನಮ್ಮ ಅಂಬಿಗರ ಚೌಡಯ್ಯನ ನಿಜ ಶರಣನು

೭೩೨

ಬಯಕೆ ಎಂಬುದು ದೂರದ ಕೂಟ
ಬಯಸೆನೆಂಬುದು ಕೂಟದ ಸಂದು
ಈ ಉಭಯವು ಕಪಟದ ಕಣ್ಣಡವಲ್ಲದೆ ಸಹಜವಲ್ಲ
ಕೂಡಿ ಕಂಡ ಪರಿಯೆಂತು ಹೇಳಾ ಇನ್ನು ಲಿಂಗೈಕ್ಯವನು
ಕೂಪರ ಠಾವಿನಲ್ಲಿ ಪರವಶವಾದೆನೆಂಬ ಮಾತ ಮೆಚ್ಚುವನೆ
ನಮ್ಮ ಗೊಹೇಶ್ವರಲಿಂಗವು

೭೩೩

ಬಯಲ ರೂಪ ಮಾಡಬಲ್ಲಾತನೆ ಶರಣನು
ಆ ರೂಪ ಬಯಲ ಮಾಡಬಲ್ಲಾತನೆ ಲಿಂಗಾನುಭಾವಿ
ಬಯಲ ರೂಪ ಮಾಡಲರಿಯದಿದ್ದಡೆ
ಎಂತು ಶರಣನೆಂಬೆ
ಆ ರೂಪ ಬಯಲು ಮಾಡಲರಿಯದಿದ್ದಡೆ
ಎಂತು ಲಿಂಗಾನುಭಾವಿಯೆಂಬೆ
ಈ ಉಭಯ ಒಂದಾದಡೆ
ನಿಮ್ಮಲ್ಲಿ ತೆರಹುಂಟೆ
ಕೂಡಲಸಂಗಮದೇವಾ

೭೩೪

ಬಯಲ ಹೊಲಬಿನಲ್ಲಿ ಹುಟ್ಟಿದ ಬೆಳಗು
ಶಿಲೆ ಲೋಹ ಕಂಚುಗಳಲ್ಲಿ ಬೆಳಗಿನ ಕಳೆ ತೋರುವಂತೆ

ಎನ್ನ ಕರತಳದಲ್ಲಿ ಸ್ವಯಂಭುವಪ್ಪ ಲಿಂಗವೆ
ನಿನ್ನ ಕಳೆ ಎನ್ನ ಕಂಗಳಿಗೆ ಹೊಲಬಾಗಿ ಏಕೆ ತೋರದು
ಅದು ಎನ್ನಯ ಜಡವೊ ನಿನ್ನಯ ಪ್ರಕೃತಿಯೊ
ಅದು ನಿನ್ನ ಬಿನ್ನಾಣದ ಗನ್ನದ ಭೇದವೊ
ಎನ್ನಲ್ಲಿ ನೀನಿಲ್ಲದ ಕಾರಣವೊ
ನಾ ನಿನ್ನಲ್ಲಿ ಸುಗುಣವಿಲ್ಲದ ಕಾರಣವೊ
ಎನಗೆ ಭಿನ್ನನಾದೆ ಎನ್ನಯ್ಯಪ್ರಿಯ ಇಮ್ಮಡಿ
ನಿಃಕಳಂಕಮಲ್ಲಿಕಾರ್ಜುನಾ
ಎನ್ನಲ್ಲಿ ನೀ ಸನ್ನದ್ಧನಾಗಿರು

**೭೩೫**

ಬಯಲು ಬಯಲನೆ ಬಿತ್ತಿ
ಬಯಲು ಬಯಲನೆ ಬೆಳೆದು
ಬಯಲು ಬಯಲಾಗಿ ಬಯಲಾಯಿತ್ತಯ್ಯ
ಬಯಲ ಜೀವನ
ಬಯಲ ಭಾವನೆ
ಬಯಲು ಬಯಲಾಗಿ ಬಯಲಾಯಿತ್ತಯ್ಯ
ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು
ನಾ ನಿಮ್ಮ ನಂಬಿ ಬಯಲಾದೆ
ಗುಹೇಶ್ವರ

**೭೩೬**

ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ
ಆತನ ವಿದ್ಯಾ ಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ
ಆತನ ಶಾಂತಿ ಸೈರಣೆಯಿಂದ ಹುಟ್ಟಿದಾತ ವಿಷ್ಣು
ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ
ಈ ಮೂರು ಪೀಠವಂತಿರಲಿ
ಈ ತತ್ವತ್ರಯಂಗಳಿಗೆ ತಾನೆ ಕಾರಣವಾಗಿಪ್ಪ
ಶರಣನನಿಲವನರಿದು ಶರಣೆನುತ್ತಿದ್ದೆನು
ಕೂಡಲಚೆನ್ನಸಂಗಮದೇವಾ

೭೩೭

ಬಯಲು ಲಿಂಗವೆಂಬೆನೆ
ಬಗಿದು ನಡೆವಲ್ಲಿ ಹೋಯಿತ್ತು
ಬೆಟ್ಟ ಲಿಂಗವೆಂಬೆನೆ
ಮೆಟ್ಟಿ ನಿಂದಲ್ಲಿ ಹೋಯಿತ್ತು
ತರುಮರಾದಿಗಳು ಲಿಂಗವೆಂಬೆನೆ
ತರಿದಲ್ಲಿ ಹೋಯಿತ್ತು
ಲಿಂಗ ಜಂಗಮದ ಪಾದವೇ ಗತಿಯೆಂದು ನಂಬಿದ
ಚೆನ್ನಮಲ್ಲಿಕಾರ್ಜುನಾ
[ಸಂಗನಬಸವಣ್ಣನ ಮಾತು ಕೇಳದೆ ಕೆಟ್ಟೆನಯ್ಯಾ]

೭೩೮

ಬರಬರ ಭಕ್ತಿ ಅರೆಯಾಯಿತ್ತು ಕಾಣಿರಣ್ಣಾ
ಮೊದಲದಿನ ಹಣೆಮುಟ್ಟಿ ಮರುದಿನ ಕೈಮುಟ್ಟಿ
ಮೂರೆಂಬ ದಿನಕ್ಕೆ ತೂಕಡಿಕೆ ಕಾಣಿರಣ್ಣಾ
ಹಿಡಿದುದ ಬಿಡದಿದ್ದಡೆ ಕಡೆಗೆ ಚಾಚುವ
ಅಲ್ಲದಿದ್ದಡೆ ನಡುನೀರಲದ್ದುವ ನಮ್ಮ ಕೂಡಲಸಂಗಮದೇವ

೭೩೯

ಬರು ಸಠಗನ ಭಕ್ತಿ ದಿಟವೆಂದು ನಚ್ಚಲು ಬೇಡ
ಮಠದೊಳಗಣ ಬೆಕ್ಕು ಇಲಿಯ ಕಂಡು
ಪುಟನೆಗೆದಂತಾಯಿತ್ತು
ಕಾಣಾ
ರಾಮನಾಥ

೭೪೦

ಬರುವ ಮುಂದೆ ಪುರುಷನಿದ್ದೆ
ಬಂದ ಬಳಿಕ ಸ್ತ್ರೀಯಾದೆ
ಇನ್ನು ಮೇಲೆ ನಪುಂಸಕನಾದೆ
ನಮ್ಮ ಕಪಿಲಸಿದ್ಧಮಲ್ಲಿಕಾರ್ಜುನನ ಕೂಡಬೇಕೆಂದಲ್ಲಿ
ಪುರುಷನಾದೆ
ನೋಡವ್ವಾ ಎನ್ನ ಹೆತ್ತ ತಾಯೆ

೭೪೧
ಬರೆದು ಮತ್ತೆ ತೊಡೆದಡೆ
ಆಲೇಖ ಶುದ್ಧವಲ್ಲ ಎಂದೆ
ಹರಿದು ಮತ್ತೆ ಮರೆದಡೆ
ಆ ಅರಿವಿಂಗೆ ಭಂಗವೆಂದೆ
ಸತ್ತ ಮತ್ತೆ ಸಮುದ್ರವೂ ಸರಿ
ಒಕ್ಕುಡುತೆಯುದಕವೂ ಸರಿ
ಜಾಂಬೇಶ್ವರಾ

೭೪೨
ಬಲ್ಲನಿತ ಬಲ್ಲರಲ್ಲದೆ
ಅರಿಯದುದನೆಂತು ಬಲ್ಲರಯ್ಯ
ಅರಿವು ಸಾಮಾನ್ಯವೆ
ಅರಿಯದುದನಾರಿಗೂ ಅರಿಯಬಾರದು
ಗುಹೇಶ್ವರನೆಂಬ ಲಿಂಗವನರಿಯದಡೆರಡು
ಅರಿದಡೊಂದೆ

೭೪೩
ಬಲ್ಲವನ ನುಡಿ ಸರ್ವವೆಲ್ಲಕ್ಕೂ ನನ್ನಿ
ಬೆಲ್ಲದ ಘಟ್ಟಿ ಸರ್ವವೆಲ್ಲಕ್ಕೂ ಮಧುರ
ಕಳವಿಲ್ಲದವನ ನುಡಿ ಸರ್ವವೆಲ್ಲಕ್ಕೂ ದಿಟ
ಹುಸಿ ಒಂದಕ್ಕೆ ದಿಟವೆರಡಕ್ಕೆ ಸಂದೇಹ ಮೂರಕ್ಕೆ ಬೀಡು
ಮೂಕೊರೆಗನ ಶುದ್ಧಿಯೇತಕ್ಕೆ
ಆತುರವೈರಿ ಮಾರೇಶ್ವರಾ

೭೪೪
ಬಲ್ಲವನಾಗಿ ಮಾತಿನ ವೈರಕ್ಕೆ ಎಲ್ಲರೊಳಗೂ ಹೋರಿ
ಕೃಪೆಯಿಲ್ಲಿದವನಾಗಿ ತತ್ಕಾಲ ಉಚಿತ ದೇಹಕ್ಕೆ ದಳ್ಳುರಿಯವನಾಗಿ
ಮಿಕ್ಕವರೆಲ್ಲರಿಗೆ ಸನ್ಮತಿಯ ಹೇಳುವ ಜಿಳ್ಳನ ನೋಡಾ
ಆತುರವೈರಿ ಮಾರೇಶ್ವರಾ

೭೪೫
ಬಲ್ಲಿದ ಹಗೆಯವ ತೆಗೆವನ್ನಬರ
ಬಡವರ ಹರಣ ಹಾರಿ ಹೋದ ತೆರನಂತಾಯಿತ್ತು
ನೀ ಕಾಡಿ ಕಾಡಿ ನೋಡುವನ್ನಬರ
ಎನಗಿದು ವಿಧಿಯೇ ಹೇಳಾ ತಂದೆ
ಮೂರುವಾರುವನ್ನಬರ
ಎಮ್ಮ ಗಾಳಿಗೆ ಹಾರಿ ಹೋದ ತೆರನಂತಾಯಿತ್ತು
ಎನಗೆ ನೀನಾವ ಪರಿಯಲ್ಲಿ ಕರುಣಿಸುವೆಯಯ್ಯಾ
ಚನ್ನಮಲ್ಲಿಕಾರ್ಜುನಾ

೭೪೬
ಬಲ್ಲೆವು ಬಲ್ಲೆವೆಂದೆಂಬರು
ಬಯಲು ಭ್ರಮೆಗೆ ಬಳಲುತ್ತಿರ್ಪರು
ಹಗಲುಗತ್ತಲೆ ಹಗಲುಗತ್ತಲೆ
ಹದಿರ ನುಡಿವ ಚದುರರಿಗೆಲ್ಲಾ ಹಗಲುಗತ್ತಲೆ
ಬಲ್ಲವರನಲ್ಲೆನಿಸಿತ್ತು
ಸಿಮ್ಮಲಿಗೆಯ ಚೆನ್ನರಾಮನೆಂಬ ನಾಮದೊಡಕು

೭೪೭
ಬಸವನ ಹೆಸರಳಿಯಿತ್ತು
ಬಸವನ ಕುರುಹಳಿಯಿತ್ತು
ಬಸವನ ಭಾವವಳಿಯಿತ್ತು
ಬಸವನಮೂರ್ತಿಯ ಕರ್ಮವ ಹರಿದು
ಆನು ನಿಃಕರ್ಮಿಯಾದೆನಯ್ಯಾ
ನಿಃಕರ್ಮಿಯಾದ ಕಾರಣ ಅರಿವನರಿದು
ಪ್ರಣವಮೂರ್ತಿಯ ತಿಳಿದು
ಆನು ಬದುಕಿದೆನಯ್ಯಾ
ಸಂಗಯ್ಯಾ

೭೪೮
ಬಸವಯ್ಯಾ ಬಸವಯ್ಯಾ
ಹುಯ್ಯಲಿಲ್ಲದ ಹುಲ್ಲೆಯಾದೆಯಾ

ಬಸವಯ್ಯಾ ಬಸವಯ್ಯಾ
ಕಾಯವಿಲ್ಲದ ದೇಹಿಯಾದೆಯಾ
ಬಸವಯ್ಯಾ ಬಸವಯ್ಯಾ
ಕರ್ಮವಿರಹಿತನಾದೆಯಾ
ಸಂಗಯ್ಯನಲ್ಲಿ ನಿರ್ಮಳಮೂರ್ತಿ
ಬಸವಯ್ಯಾ

೭೪೯
ಬಸವಾ ಬಸವಾ ಎಂಬ ಶಬ್ದವಡಗಿತ್ತು
ಬಸವ ಬಸವಾಯೆಂಬ ರೂಪು ನಿರೂಪಾಯಿತ್ತು
ಬಸವನ ಕಾಯವಳಿದು ನಿರಾಕುಳವಾಗಲು
ಆನು ಬಸವಾ ಬಸವಾ ಬಸವಾಯೆಂದು
ಬಯಲಾದೆನಯ್ಯಾ ಸಂಗಯ್ಯಾ

೭೫೦
ಬಹುಜನಂಗಳೆಲ್ಲಾ ಓಲಗವಿಲ್ಲ ಹೋಗಿ
ಸಲಿಗೆವಂತರಲ್ಲಿಲ್ಲ ನಿಲ್ಲಿ
ಕಾಂತ ಸಂಬಂಧರು ಹೋಗಿ
ಲೋಕಾಂತ ಭಂಡರು ನಿಲ್ಲಿ
ಇಂತೀ ಅವರವರ ಸ್ವಸ್ಥಾನಂಗಳ ಸಲುಗೆಯನರಿದುಬಿಡುತ್ತಿದ್ದೇನೆ
ಕೂಡಲಸಂಗಮದೇವರಲ್ಲಿ ಬಸವಣ್ಣನ ಕಾಲವೇಳೆಯನರಿದು

೭೫೧
ಬಹುರೂಪಕ್ಕೆ ಭಾಷಾಂಗವಿಲ್ಲದಿರೆ ಮೆಚ್ಚದು ಜಗ
ಗುರುಚರರೂಪ ತಾಳ್ದಲ್ಲಿ ಗುರುವಿಂಗೆ ಗಂಭೀರತೆ ಚರಕ್ಕೆ ನಿಸ್ಪೃಹತ್ವ
ಇಂತೀ ಉಭಯಮೂರ್ತಿ ಅಪೇಕ್ಷೆವಿರಹಿತವಾಗಿ ನಿಂದುದು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು ತಾನೆ

೭೫೨
ಬಹುರೂಪು ತೊಟ್ಟಾಡಿದ ದೇಹ ಒಂದೇ
ವೇಷ ರೂಪಿನ ಪಲ್ಲಟವಲ್ಲದೆ ವೇಷಕ್ಕೆ ತಕ್ಕ ಭಾಷೆ

ಭಾಷೆಗೆ ತಕ್ಕ ವೇಷ ಅರಿವು ಆಚರಣೆ ಒಂದಾಗಬೇಕು
ಬಂಕೇಶ್ವರಲಿಂಗವನರಿವುದಕ್ಕೆ

**೭೫೩**

ಬಳ್ಳಿ ಮರನ ಸುತ್ತಿ ಅದು ಸಾಲದೆ ಮತ್ತೊಂದಕ್ಕೆ ಅಲ್ಲಾಡುವಂತೆ
ನಿಲ್ಲದು ಮನ ಕ್ರೀಯಲ್ಲಿ
ಸಲ್ಲದು ಮನ ನಿಶ್ಚಯದಲ್ಲಿ
ಬೆಲ್ಲವ ಮೆಲಿದ ಕೋಡಗದಂತೆ
ಕಲ್ಲಿನೊಳಗಾದ ಮತ್ಸ್ಯದಂತೆ
ಅಲ್ಲಿಗೆ ಹೊಲಬು ಕಾಣದೆ
ಇಲ್ಲಿಗೆ ನೆಲೆಯ ಕಾಣದೆ ತಲ್ಲಣಗೊಳ್ಳುತ್ತಿದ್ದೇನೆ
ಎನ್ನ ಭಾವದಲ್ಲಿ ನೀನಿರು
ನಿಃಕಳಂಕ ಮಲ್ಲಿಕಾರ್ಜುನಾ

**೭೫೪**

ಬಾಹಾಗ ಕೊಂಡುಬಂದ ಪ್ರಾಪ್ತಿಯಲ್ಲದೆ
ಬೇರೊಂದ ಗಳಿಸಲಿಲ್ಲ
ಬೇರೊಂದ ಕೆಡಿಸಲಿಲ್ಲ
ಬಂದುದು ನಿಂದುದು
ಮಾರಯ್ಯಪ್ರಿಯ ಅಮಲೇಶ್ವರಲಿಂಗ ಕೊಟ್ಟಲ್ಲದಿಲ್ಲ

**೭೫೫**

ಬಿಟ್ಟು ಮಹೇಶನಾದೆನೆಂಬುದು ಅರುಹಿನ ಕೇಡು
ಹಿಡಿದು ಭಕ್ತನಾದೆನೆಂಬುದು ನಿಜದ ಕೇಡು
ಬಿಡುವುದು ಹಿಡಿವುದು ಮನಃಕಲ್ಪಿತವಲ್ಲದೆ
ಕಲ್ಪನಾರಹಿತ ಭಕ್ತಮಹೇಶರಲ್ಲಿಪ್ಪುದೇನಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ

**೭೫೬**

ಬಿಟ್ಟೆನೆಂದಡೆ ಬಿಡದೀ ಮಾಯೆ
ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ

ಯೋಗಿಗೆ ಯೋಗಿಣಿಯಾಯಿತ್ತು ಮಾಯೆ
ಸವಣಂಗೆ ಸವಣಿಯಾಯಿತ್ತು ಮಾಯೆ
ಯತಿಗೆ ಪರಾಕಿಯಾಯಿತ್ತು ಮಾಯೆ
ನಿನ್ನ ಮಾಯೆಗೆ ನಾನಂಜುವಳಲ್ಲ
ಚೆನ್ನಮಲ್ಲಿಕಾರ್ಜುನದೇವಾ
ನಿಮ್ಮಾಣೆ

೭೫೭
ಬಿಡುವುದಕ್ಕೆ ಮುನ್ನವೆ ಮೊನೆ ಮುಂಚಿದಂತಿರಬೇಕು
ಅಡಿ ಏರುವುದಕ್ಕೆ ಮುನ್ನವೆ ಆ ಮೊನೆಯ ಜಾರಿ
ಮತ್ತೆ ತಾನಡಿಯೇರಿ ಮೀರಿ ಮುಂಚಿದಂತಿರಬೇಕು
ನೀನೆಂಬನ್ನಕ್ಕ ಲಕ್ಷ್ಯದಲ್ಲಿ ಅಲಕ್ಷ್ಯವಾಗಬೇಕು
ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನ
ಎಂಬುದಕ್ಕೆ ಮುನ್ನವೆ

೭೫೮
ಬಿತ್ತು ಬೆಳೆಯಿತ್ತು
ಕೆಯ್ಯ ಕೊಯ್ಯಿತ್ತು
ಗೂಡು ಮುರಿಯಿತ್ತು
ಕುತ್ತುರಿಯೊಟ್ಟಿತ್ತು ಒಕ್ಕಿತ್ತು ತೂರಿತ್ತು  ಅಳೆಯಿತ್ತು
ಸಲಗೆ ತುಂಬಿತ್ತು
ಕೂಡಲಸಂಗಮದೇವಯ್ಯಾ
ಮೇಟಿ ಕಿತ್ತಿತ್ತು ಕಣ ಹಾಳಾಯಿತ್ತಯ್ಯಾ

೭೫೯
ಬಿದಿರಲಂದಣವಕ್ಕು
ಬಿದಿರೆ ಸತ್ತಿಗೆಯಕ್ಕು
ಬಿದಿರಲ್ಲಿ ಗುಡಿಯು ಗೂಡಾರವಕ್ಕು
ಬಿದಿರಲ್ಲಿ ಸಕಲಸಂಪದವೆಲ್ಲವು
ಬಿದಿರದವರ ಮೆಚ್ಚ ಕೂಡಲಸಂಗಮದೇವ

೨೬೦
ಬಿರುಗಾಳಿ ಬೀಸಿ ಮರ ಮುರಿವಂತಹ ಸುಳಿಹ ಸುಳಿಯದೆ
ತಂಗಾಳಿ ಪರಿಮಳದೊಡಗೂಡಿ ಸುಳಿವಂತೆ ಸುಳಿಯಬೇಕು
ಸುಳಿದಡೆ ನೆಟ್ಟನೆ ಜಂಗಮವಾಗಿ ಸುಳಿಯಬೇಕು
ನಿಂದರೆ ನೆಟ್ಟನೆ ಭಕ್ತನಾಗಿ ನಿಲಬೇಕು
ಸುಳಿದು ಜಂಗಮವಾಗಲರಿಯದ
ನಿಂದು ಭಕ್ತರಾಗಲರಿಯದ
ಉಭಯ ಭ್ರಷ್ಟರನೇನೆಂಬೆ
ಗುಹೇಶ್ವರ

೨೬೧
ಬಿಸಿಲ ಕಹರು ಮಂಜಿನ ಮುಂಡಿಗೆಯ ನೆಟ್ಟು
ಮನೆ ಒಲೆಯದಂತೆ ಅನಲನ ತೊಲೆಯ ಹಾಕಿ
ಮಳೆಯ ಗಳು ಬೀಸಿ ಕೆಂಡದ ಹಂಜರಗಟ್ಟು ಕಟ್ಟಿ
ಹಿಂಡುಗಟ್ಟಿಗೆ ಗಳುವಿನ ಸಂದಿಯಲ್ಲಿ ಅಡಗಿತ್ತು
ಅನಿಲನ ಹುಲ್ಲು ಹೊದಿಸಿ ಮನೆ ಹೊಲಬಾಯಿತ್ತು
ನೆಲಗಟ್ಟು ಶುದ್ಧವಿಲ್ಲಾಯೆಂದು
ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗವು
ಆ ಮನೆಗೆ ಒಕ್ಕಲು ಬಾರ

೨೬೨
ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ
ನಿರಾಳಲಿಂಗಕ್ಕೆ ಬಯಲೆ ಸೆಜ್ಜೆ
ವಾಯುವೆ ಶಿವದಾರ
ಬೆಳಗೆ ಸಿಂಹಾಸನ
ಅತ್ತಲಿತ್ತ ಚಿತ್ತವ ಹರಿಯಲೀಯದೆ
ಮಜ್ಜನಕ್ಕೆರೆದು ಸುಖಿಯಾದೆ
ಗುಹೇಶ್ವರ

೨೬೩
ಬೀಜವ ಕಳೆದು ತರು ಬೆಳೆದಂತೆ
ತರುವ ಕಳೆದು ಬೀಜ ಆ ತರುವಿಂಗೆ ಕುರುಹಾದಂತೆ

ಪರಮ ಜೀವನ ಕಳೆದು
ಆ ಜೀವಕ್ಕೆ ತಾ ಪರಮನೆಂಬ ಪರಿಭ್ರಮಣವ ಕಳೆದು
ಪರಶಕ್ತಿಸಮೇತವಾದಲ್ಲಿ
ಮರದಲ್ಲಿ ಹುಟ್ಟಿದ ಕಿಚ್ಚು
ಮರ ನಷ್ಟವಾಗಿ ತಾ ನಷ್ಟವಾದಂತೆ
ಅರಿದ ಅರಿವು ಕುರುಹಿನಲ್ಲಿ ಪರಿಹರಿಸಿದ ಮತ್ತೆ
ತೆರೆ ದರುಶನ ಉಭಯವಡಗಿತ್ತು
ಚನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗವನರಿದಲ್ಲಿ

**೭೬೪**
ಬೀಜವಿಲ್ಲದೆ ಬೆಳೆವುಂಟೆ
ಅಯ್ಯಾ
ನಾದವಿಲ್ಲದೆ ಶಬ್ದವುಂಟೆ
ಅಯ್ಯಾ
ದೃಷ್ಟಿಯಿಲ್ಲದ ಕಳೆ ಉಂಟೆ
ಅಯ್ಯಾ
ಅಂಗಸಹಿತವಾಗಿ ಸರ್ವಸಂಗವನರಿಯಬೇಕಲ್ಲದೆ
ನಿರಂಗ ಅಂಗದಲ್ಲಿ ಹೊಕ್ಕು
ಸರ್ವಭೋಗಂಗಳ ಕಾಬುದಕ್ಕೆ ಇದೇ ದೃಷ್ಟ
ಬಂಗಾರದ ಒಡಲಿನಲ್ಲಿ ಬಣ್ಣ ನಿಂದು ತಿಕ್ಕವಟ್ಟಕ್ಕೆ ಬಾಹಂತೆ
ಆತ್ಮನ ದೃಷ್ಟನ ಕಂಡು ಮತ್ತೆ ಆಧ್ಯಾತ್ಮವೆನಲೇಕೆ
ಘಟದ ಮಧ್ಯದಲ್ಲಿ ನಿಂದು ನುಡಿವುದೆ ಕ್ರೀಯೆಂದೆ
ಸದಾಶಿವಮೂರ್ತಿಲಿಂಗವನರಿವುದಕ್ಕೆ

**೭೬೫**
ಬೆಟ್ಟಕ್ಕೆ ಚಳಿಯಾದಡೆ
ಏನ ಹೊದಿಸುವರಯ್ಯ
ಬಯಲು ಬತ್ತಲೆಯಿದ್ದರೆ
ಏನನುಡಿಸುವರಯ್ಯ
ಭಕ್ತನು ಭವಿಯಾದಡೆ
ಏನನುಪಮಿಸುವೆನಯ್ಯ
ಗುಹೇಶ್ವರ

೭೬೬
ಬೆಟ್ಟಕ್ಕೆ ಬೆಳ್ಳಾರ ಸುತ್ತಿತಯ್ಯಾ
ಪಾಪದ ಬಲೆಯ ತಂದು ಮುಂದೆ ಒಡ್ಡಿದಿರಯ್ಯಾ
ಬೇಟೆಕಾರನು ಮೃಗವನಟ್ಟಿ ಬರಲು
ಮೃಗವು ಗೋರಿಗೊಳಗಾಗದಯ್ಯಾ
ಹರನೊಡ್ಡಿದ ಬಲೆಯಲ್ಲಿ ಸಿಲುಕಿದ ಮೃಗವು
ಕೂಡಲಸಂಗಮದೇವಂಗೆ ಓಗರವಾಯಿತ್ತು

೭೬೭
ಬೆಟ್ಟಕ್ಕೆ ಸಾರವಿಲ್ಲೆಂಬರು
ತರುಗಳು ಹುಟ್ಟುವ ಪರಿ ಇನ್ನೆಂತಯ್ಯಾ
ಇದ್ದಲಿಗೆ ರಸವಿಲ್ಲೆಂಬರು
ಕಬ್ಬುನ ಕರಗುವ ಪರಿ ಇನ್ನೆಂತಯ್ಯಾ
ಎನಗೆ ಕಾಯವಿಲ್ಲೆಂಬರು
ಚೆನ್ನಮಲ್ಲಿಕಾರ್ಜುನನೊಲಿವ ಪರಿ ಇನ್ನೆಂತಯ್ಯಾ

೭೬೮
ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದಡೆಂತಯ್ಯಾ
ಸಮುದ್ರದ ತಡಿಯಲೊಂದು ಮನೆಯ ಮಾಡಿ
ನೊರೆ ತೆರೆಗಳಿಗಂಜಿದಡೆಂತಯ್ಯಾ
ಸಂತೆಯೊಳಗೊಂದು ಮನೆಯ ಮಾಡಿ
ಶಬ್ದಕ್ಕೆ ನಾಚಿದಡೆಂತಯ್ಯಾ
ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯಾ
ಲೋಕದೊಳಗೆ ಹುಟ್ಟಿದ ಬಳಿಕ
ಸ್ತುತಿನಿಂದೆಗಳು ಬಂದಡೆ
ಮನದಲ್ಲಿ ಕೋಪವ ತಾಳದೆ
ಸಮಾಧಾನಿಯಾಗಿರಬೇಕು

೭೬೯
ಬೆಲ್ಲವ ತಿಂದ ಕೋಡಗದಂತೆ
ಸಿಹಿಯ ನೆನೆಯದಿರಾ ಮನವೆ

ಕಬ್ಬ ತಿಂದ ನರಿಯಂತೆ
ಹಿಂದಕ್ಕೆಳಸದಿರಾ ಮನವೆ
ಗಗನವನಡರಿದ ಕಾಗೆಯಂತೆ
ದೆಸೆದೆಸೆಗೆ ಹಂಬಲಿಸದಿರಾ ಮನವೆ
ಕೂಡಲಸಂಗನ ಶರಣರ ಕಂಡು
ಲಿಂಗವೆಂದೆ ನಂಬು ಮನವೆ

೭೭೦
ಬೆವಸಾಯವ ಮಾಡಿ
ಮನೆಯ ಬೀಯಕ್ಕೆ ಬತ್ತವಿಲ್ಲದಿದ್ದರೆ
ಆ ಬೆವಸಾಯದ ಘೋರವೇತಕಯ್ಯ
ಕ್ರಯವಿಕ್ರಯವ ಮಾಡಿ
ಮನೆಯ ಸಂಚು ನಡೆಯದನ್ನಕ್ಕ
ಆ ಕ್ರಯವಿಕ್ರಯದ ಘೋರವೇತಕಯ್ಯ
ಒಡಯನನೋಲೈಸಿ
ತನುವಿಂಗೆ ಅಷ್ಟಭೋಗವ ಪಡೆಯದಿದ್ದರೆ
ಆ ಓಲಗದ ಘೋರವೇತಕಯ್ಯ
ಭಕ್ತನಾಗಿ ಭವಂನಾಸ್ತಿಯಾಗದಿದ್ದರೆ
ಆ ಉಪದೇಶವ ಕೊಟ್ಟ ಗುರು
ಕೊಂಡ ಶಿಷ್ಯ
ಇವರಿಬ್ಬರ ಮನೆಯಲ್ಲಿ ಮಾರಿ ಹೊಗಲಿ
ಗುಹೇಶ್ವರಲಿಂಗವತ್ತಲೆ ಹೋಗಲಿ

೭೭೧
ಬೇಕೆನಲಾಗದು ಶರಣಂಗೆ
ಬೇಡೆನಲಾಗದು ಶರಣಂಗೆ
ಲಿಂಗವಶದಿಂದ ಬಂದುದ ಪತಿಕರಿಸದಿರ್ದಡೆ
ಮಹಾಘನವು ಅವಗವಿಸದು ನೋಡಾ
ಅದೆಂತೆಂದಡೆ
ಅವ್ರತ ಸುವ್ರತ್ಶ್ಚೈವ ವೇಶ್ಯಾ ದಿವ್ಯಾನ್ನಭೂಷಣಂ
ಅಕಲ್ಪಿತಂಚ ಭೋಗಾನಾಂ ಸರ್ವಂ ಲಿಂಗಸ್ಯ ಪ್ರೇರಣಂ

ಎಂದುದಾಗಿ
ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣರ
ಪರದ್ವಾರಿಗಳೆಂದು ನುಡಿದವರಿಗೆ ನಾಯಕನರಕವಯ್ಯಾ

೭೭೨
ಬ್ರಹ್ಮದ ಮಾತನಾಡಿ
ಕನ್ನೆಯರ ಕಾಲದೆಸೆಯಲಿ ಕುಳಿತು
ಪರಬೊಮ್ಮದ ಮಾತು
ಅಲ್ಲಿಯೆ ನಿಂದಿತ್ತೆಂದನಂಬಿಗ ಚವುಡಯ್ಯ

೭೭೩
ಭಕ್ತಂಗೆ ಬಡತನವುಂಟೆ
ನಿತ್ಯಂಗೆ ಮರಣವುಂಟೆ
ಭಕ್ತರು ಬಡವರೆಂದು
ಮತ್ತೊಂದ ಕೊಟ್ಟೆಹೆನೆಂದಡೆ
ಮಾರಯ್ಯಪ್ರಿಯ ಅಮಲೇಶ್ವರಲಿಂಗವು ಸತ್ತಂದಿಗಲ್ಲದೆ
ಬಡತನವಿಲ್ಲ

೭೭೪
ಭಕ್ತಂಗೆ ಬೇಡದ ಭಾಷೆ
ನಿನಗೆ ಕೊಡದ ಭಾಷೆ
ಭಕ್ತಂಗೆ ಓಡದ ಭಾಷೆ
ನಿನಗೆ ಕಾಡುವ ಭಾಷೆ
ಭಕ್ತಂಗೆ ಸತ್ಯದ ಬಲ
ನಿನಗೆ ಶಕ್ತಿಯ ಬಲ
ಇಬ್ಬರ ಗೆಲ್ಲ ಸೋಲಕ್ಕೆ ಕಡೆಯಿಲ್ಲ
ಈ ಇಬ್ಬರಿಗೆಯೂ ಒಡೆಯರಿಲ್ಲದ ಲೆಂಕ
ಇನ್ನು ಭಕ್ತನು ಭಕ್ತಿಯ ಛಲವ ಬಿಡನಾಗಿ
ಭಕ್ತ ಸೋತಡೆ ಭಕ್ತನದೆ ಗೆಲುವು
ಭಕ್ತ ಗೆದ್ದಡೆಂತು ಗೆಲುವು
ಇದ ನೀನೆ ವಿಚಾರಿಸಿಕೊಳ್ಳಾ
ಭಕ್ತದೇಹಿಕದೇವ ಸಕಳೇಶ್ವರಾ

೭೭೫
ಭಕ್ತರ ಕಂಡಡೆ ಬೋಳರಪ್ಪಿರಯ್ಯಾ
ಸವಣರ ಕಂಡಡೆ ಬತ್ತಲೆಯಪ್ಪಿರಯ್ಯಾ
ಹಾರುವರ ಕಂಡಡೆ ಹರಿನಾಮವೆಂಬಿರಯ್ಯಾ
ಅವರವರ ಕಂಡಡೆ ಅವರವರಂತೆ
ಸೂಳೆಗೆ ಹುಟ್ಟಿದವರ ತೋರದಿರಯ್ಯಾ
ಕೂಡಲಸಂಗಯ್ಯನ ಪೂಜಿಸಿ ಅನ್ಯದೈವಂಗಳಿಗೆರಗಿ
ಭಕ್ತರೆನಿಸಿಕೊಂಬ ಅಜ್ಞಾನಿಗಳ ನಾನೇನೆಂಬೆನಯ್ಯಾ

೭೭೬
ಭಕ್ತರಿಗೆ ಅಕ್ಕೆ ಶೋಕ ದುಃಖವುಂಟೆ
ಅಯ್ಯಾ
ಅತ್ತು ಕಳೆವ ನೋವ ಹಾಡಿ ಕಳೆಯಲೇಕಯ್ಯಾ
ಈ ಮುಕ್ತಾಯಕ್ಕಗಳ ಕಕ್ಕುಲತೆಯ
ಶಂಭುಜಕ್ಕೇಶ್ವರನ ಶರಣರೊಪ್ಪರಯ್ಯಾ

೭೭೭
ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿ ತಂದು
ದಾಸೋಹವ ಮಾಡಬಹುದೆ
ಒಮ್ಮನವ ತಂದು ಒಮ್ಮನದಲ್ಲಿಯೆ ಮಾಡಿ
ಇಮ್ಮನವಾಗದ ಮುನ್ನವೆ
ಮಾರಯ್ಯಪ್ರಿಯ ಅಮಲೇಶ್ವರಲಿಂಗಕ್ಕೆ
ಸಲಬೇಕು ಮಾರಯ್ಯಾ

೭೭೮
ಭಕ್ತಿ ಜ್ಞಾನ ವೈರಾಗ್ಯದಿಂದ ಅರಿಯಬೇಕೆಂಬುದು
ಭಕ್ತಿಯೊ ಜ್ಞಾನವೊ ವೈರಾಗ್ಯವೊ
ಮೂರಕ್ಕೆ ಬೇರೊಂದೆಡೆಯುಂಟೆ
ಅದರ ಎಡೆ ಗುಡಿಯ ತೋರಿ
ಬರಿಯ ಮಾತಿನ ಮಾಲೆ ಬೇಡ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ

೭೭೯
ಭಕ್ತಿ ಸುಭಾಷೆಯ ನುಡಿಯ ನುಡಿವೆ
ನುಡಿದಂತೆ ನಡೆವೆ
ನಡೆಯೊಳಗೆ ನುಡಿಯ ಪೂರೈಸುವೆ
ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ
ಒಂದು ಜವೆ ಕೊರತೆಯಾದಡೆ
ಎನ್ನನದ್ದಿ ನೀನೆದ್ದು ಹೋಗು
ಕೂಡಲಸಂಗಮದೇವಾ

೭೮೦
ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು
ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣು
ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ

೭೮೧
ಭಕ್ತಿಯೆಂಬುದ ಮಾಡಬಾರದು
ಕರಗಸದಂತೆ ಹೋಗುತ್ತ ಕೊಯ್ವುದು
ಬರುತ್ತ ಕೊಯ್ವುದು
ಘಟಸರ್ಪನಲ್ಲಿ ಕೈದುಡುಕಿದಡೆ
ಹಿಡಿವುದ ಮಾಬುದೆ
ಕೂಡಲಸಂಗಮದೇವಾ

೭೮೨
ಭಕ್ತಿಯೆಂಬುದು ಬೇರು
ವಿರಕ್ತಿಯೆಂಬುದೆ ಮರ
ಫಲವೆಂಬುದೆ ಜ್ಞಾನ

ಪಕ್ವಕ್ಕೆ ಬಂದಿತ್ತೆಂಬಾಗಲೆ ಅವಧಿಜ್ಞಾನ
ತೊಟ್ಟು ಬಿಟ್ಟಲ್ಲಿಯೆ ಪರಮಜ್ಞಾನ
ಸವಿದಲ್ಲಿಯೆ ಅಂತರೀಯಜ್ಞಾನ
ಸುಖ ತನ್ಮಯವಾದಲ್ಲಿಯೆ ದಿವ್ಯಜ್ಞಾನ
ದಿವ್ಯ ತೇಜಸ್ಸು ಹಿಂಗದಲ್ಲಿಯೆ ಪರಿಪೂರ್ಣಜ್ಞಾನ
ಅದು ಮಹದೊಡಲೆಂಬುದಕ್ಕೆ ಎಡೆಯಿಲ್ಲ
ಚನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗವು
ಅಪ್ರಮಾಣಾದ ಕಾರಣ

**೭೮೩**

ಭವದ ಬಟ್ಟೆಯ ದೂರವನೇನ ಹೇಳುವೆನಯ್ಯಾ
ಎಂಬತ್ತುನಾಲ್ಕು ಲಕ್ಷ ಊರಲ್ಲಿ ಎಡೆಗೆಯ್ಯಬೇಕು
ಒಂದೂರ ಭಾಷೆಯೊಂದೂರಲಿಲ್ಲ
ಒಂದೂರಲ್ಲಿ ಕೊಂಡಂಥ ಆಹಾರ ಮತ್ತೊಂದೂರಲಿಲ್ಲ
ಇಂತೀ ಊರ ಹೊಕ್ಕ ತಪ್ಪಿಂಗೆ
ಕಾಯವ ಭೂಮಿಗೆ ಸುಂಕವ ತೆತ್ತು
ಜೀವವನುಳುಹಿಕೊಂಡು ಬರಬೇಕಾಯಿತ್ತು
ಇಂತೀ ಮಹಾಘನದ ಬೆಳಕಿನೊಳಗೆ
ಕಳೆದುಳಿದು ಸುಳಿದಾಡಿ
ನಿಮ್ಮ ಪಾದವ ಕಂಡು ಸುಯಿಧಾನಿಯಾದೆ ಕಾಣಾ
ಚೆನ್ನಮಲ್ಲಿಕಾರ್ಜುನಯ್ಯಾ

**೭೮೪**

ಭವಿ ಬೀಜವೃಕ್ಷದ ಫಲದೊಳಗೆ
ಭಕ್ತಿ ಬೀಜವೃಕ್ಷ ಪಲ್ಲವಿಸಿತ್ತು
ಆ ಭಕ್ತಿಬೀಜವೃಕ್ಷದ ಫಲದೊಳಗೆ
ಶರಣ ಬೀಜವೃಕ್ಷ ಪಲ್ಲವಿಸಿತ್ತು
ಆ ಶರಣ ಬೀಜವೃಕ್ಷದ ಫಲದೊಳಗೆ
ಕುಲನಾಶಕನಾದ ಶರಣ ಒಂದೆ ಬಸಿರಲ್ಲಿ ಬಂದ
ಬಂಧುಬಳಗಕ್ಕೆ ತನ್ನ ಕುಲಕ್ಕೆ ತಾನೆ ಮಾರಿಯಾದ ಶರಣ
ಭವಿ ಭಕ್ತ ಭವಿಬೀಜವೃಕ್ಷದ ತಂಪು ನೆಳಲನೆ ಬಿಟ್ಟು

ಕುಳ್ಳಿದ್ದಲ್ಲಿಯೆ ಬಳಿ ಬಳಿಯೆ ಬಯಲಾದ ಶರಣ
ನಾದ ಬಿಂದು ಬೀಜ ನಷ್ಟಹೊಳ್ಳಾಗಿ ಹಾರಿ ಹೋದಲ್ಲಿ
ಇನ್ನೇನ ಹೇಳಲುಂಟು
ಗುಹೇಶ್ವರನೆಂಬಲಿಂಗವನರಿದು
ಭವಿಗೆ ಭವಿಯಾದಾತಂಗೆ
ಇನ್ನೇನು ಪದವುಂಟಯ್ಯ

೭೮೫
ಭವಿ ಮಾಡಲಿಕ್ಕೆ ಪೃಥ್ವಿಯಾಯಿತ್ತು
ಭವಿ ಮಾಡಲಿಕ್ಕೆ ಅಪ್ಪುವಾಯಿತ್ತು
ಭವಿ ಮಾಡಲಿಕ್ಕೆ ತೇಜವಾಯಿತ್ತು
ಭವಿ ಮಾಡಲಿಕ್ಕೆ ವಾಯುವಾಯಿತ್ತು
ಭವಿ ಮಾಡಲಿಕ್ಕೆ ಆಕಾಶವಾಯಿತ್ತು
ಭವಿ ಮಾಡಲಿಕ್ಕೆ ಸೂರ್ಯಚಂದ್ರರಾದರು
ಭವಿ ಮಾಡಲಿಕ್ಕೆ ವಿಷ್ಣುವಾದ ರುದ್ರನಾದ ದೇವರ್ಕಳಾದರು
ಇದು ಕಾರಣ ಕೂಡಲಚೆನ್ನಸಂಗಯ್ಯ
ಭವಿಯಿಂದಾಯಿತ್ತು ಸಕಲ ಜಗವೆಲ್ಲ

೭೮೬
ಭವಿಯ ಕಳೆದೆವೆಂಬ ಮರುಳು ಜನಂಗಳು
ನೀವು ಕೇಳಿರೇ
ಭವಿಯಲ್ಲವೇ ನಿಮ್ಮ ತನುಗುಣಾದಿಗಳು
ಭವಿಯಲ್ಲವೇ ನಿಮ್ಮ ಮನಗುಣಾದಿಗಳು
ಭವಿಯಲ್ಲವೇ ನಿಮ್ಮ ಪ್ರಾಣಗುಣಾದಿಗಳು
ಇವರೆಲ್ಲರು ಭವಿಗಳ ಹಿಡಿದು ಭವಭಾರಿಗಳಾದರು
ನಾನು ಭವಿಯ ಪೂಜಿಸಿ ಭವನಾಸ್ತಿಯಾದೆನು
ಗುಹೇಶ್ವರ

೭೮೭
ಭಸ್ಮವ ಹೂಸಿದಲ್ಲಿ ಶರಣನೆ ಅಲ್ಲಲ್ಲ
ಮಾಡುವ ಕ್ರಿಯೆ ಭಸ್ಮವಾದಡೆ ಶರಣ

ನೋಡುವ ಕೃತ್ಯ ರುದ್ರಾಕ್ಷಿಯಾದಡೆ ಶರಣ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ

೭೮೮
ಭಾವ ಬಲಿದಲ್ಲಿ ಲಿಂಗವೆನಿಸಿತ್ತು
ಭಾವ ವಿಭಾವವಾದಲ್ಲಿ ಪಾಷಾಣವೆನಿಸಿತ್ತು
ಭಾವ ನಿರ್ಭಾವವಾದಲ್ಲಿ ಏನೆಂದೆನಿಸದು ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನಾ

೭೮೯
ಭಾವದಲೊಬ್ಬ ದೇವರ ಮಾಡಿ
ಮನದಲೊಂದು ಭಕ್ತಿಯ ಮಾಡಿದರೆ
ಕಾಯದ ಕೈಯಲ್ಲಿ ಕಾರ್ಯವುಂಟೆ
ವಾಯಕ್ಕೆ ಬಳಲುವರು ನೋಡಾ
ಎತ್ತನೇರಿ ಎತ್ತನರಸುವರು
ಎತ್ತ ಹೋದರೈ
ಗುಹೇಶ್ವರ

೭೯೦
ಭಿಕಾರಿ ಭಿಕಾರಕ್ಕೆಳಸ
ಉಣ್ಣಲು ಉಡಲು ಕಾಣದಾತ ಭಿಕಾರಿ
ತನು ಮೀಸಲು ಮನ ಮೀಸಲು
ಬಾಯಿ ಬೋರು ಬೋರು
ಮರಣವಳಿದುಳಿತಾತ ಭಿಕಾರಿ
ಸಂಚಲದ ಪಂಚಕರಣಗಳ ತೆಗೆದುಂಡು
ರುಂಡಮಾಲೆಯ ರಣಮಾಲೆಯ
ಹೆಣಮಾಲೆಯ ಚಾರುಚ್ಚಿದಲ್ಲದೆ
ಭಿಕಾರಿ ಭೀಮೇಶ್ವರಲಿಂಗಕ್ಕೆ ದೂರ ಕಾಣಾ
ಕರುತಿರುವ ಗೊರವಾ

೭೯೧

ಭೂಪ ಗೋಪನ ನೆನೆದಡೆ ಗೋಪನಾಗಬಲ್ಲನೆ
ಅಂದಿನ ಗಣಂಗಳ ಕಂಡು ಇಂದಿನ ಜೀವಿಗಳು ನೆನೆನೆನೆದು
ಧನ್ಯರಾದವೆಂಬ ಪರಿಯ
ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ

೭೯೨

ಭೂಮಿ ಒಂದೆಂದಡೆ
ಬೆಳೆವ ವೃಕ್ಷ ಹಲವು ತೆರನುಂಟು
ಉದಕ ಒಂದೆಂದಡೆ
ಸವಿಸಾರದ ಸಂಪದ ಬೇರುಂಟು
ನಿನ್ನೊಳಗು ನಾನಾದಡೆ
ತಾಮಸದ ರಾಗವಿರಾಗವಾಗದು
ಕಪಿಲಸಿದ್ಧಮಲ್ಲಿಕಾರ್ಜುನಂಗವೆಂಬ ಪುರುಷರತಿ ಕೂಟಸ್ಥವಿಲ್ಲ

೭೯೩

ಭೂಮಿಯ ಕಠಿಣವನು
ಆಕಾಶದ ಮೃದುವನು
ತಿಳಿವ ಗಮನವಲ್ಲಿಯೆ ನಿಂದಿತ್ತು
ಉದಕದೊಳಗೆ ಹುಟ್ಟಿದ ತೃಷ್ಣೆ ಉದಕವನರಸಿತ್ತಲ್ಲಾ
ಒಳಗೆ ಸತ್ತು ಹೊರಗೆ ಆಡುತ್ತದೆ
ಗುಹೇಶ್ವರ ಬೆರಗಾಗಿ ಅಲ್ಲಿಯೆ ನಿಂದನು

೭೯೪

ಮಚ್ಚು ಅಚ್ಚುಗವಾಗಿ ಒಪ್ಪಿದ ಪರಿಯ ನೋಡಾ
ಎಚ್ಚಡೆ ಗರಿದೋರದಂತಿರಬೇಕು
ಅಪ್ಪಿದಡೆ ಅಸ್ತಿಗಳು ನಗ್ಗುನುಸಿಯಾಗಬೇಕು
ಬೆಚ್ಚಡೆ ಬೆಸುಗೆಯನರಿಯದಂತಿರಬೇಕು
ಮಚ್ಚು ಒಪ್ಪಿತ್ತು
ಚೆನ್ನಮಲ್ಲಿಕಾರ್ಜುನನ ಸ್ನೇಹ ತಾಯೆ

೭೯೫
ಮಡಕೆ ದೈವ ಮೊರ ದೈವ ಬೀದಿಯ ಕಲ್ಲು ದೈವ
ಹಣಿಗೆ ದೈವ ಬಿಲ್ಲನಾರಿ ದೈವ ಕಾಣಿರೊ
ಕೊಳಗ ದೈವ ಗಿಣ್ಣಿಲು ದೈವ ಕಾಣಿರೊ
ದೈವ ದೈವವೆಂದು ಕಾಲಿಡಲಿಂಬಿಲ್ಲ
ದೈವನೊಬ್ಬನೆ ಕೂಡಲಸಂಗಮದೇವ

೭೯೬
ಮಡದಿ ಎನಲಾಗದು ಬಸವಂಗೆ ಎನ್ನನು
ಪುರುಷನೆನಲಾಗದು ಬಸವನ ಎನಗೆ
ಉಭಯದ ಕುಳವ ಹರಿದು ಬಸವಂಗೆ ಶಿಶುವಾನಾದೆನು
ಬಸವನೆನ್ನ ಶಿಶುವಾದನು
ಪ್ರಮಥರು ಪುರಾತರು ಸಾಕ್ಷಿಯಾಗಿ
ಸಂಗಯ್ಯನಿಕ್ಕಿದ ದಿಬ್ಯವ ಮೀರದೆ ಬಸವನೊಳಗಾನಡಗಿದೆ

೭೯೭
ಮಡದಿಯ ಪ್ರಾಣಕ್ಕೆ ಮೊಲೆ ಮುಡಿ ಇದ್ದೀತ್ತೆ
ಒಡೆಯನ ಪ್ರಾಣಕ್ಕೆ ಇದ್ದೀತ್ತೆ ಯಜ್ಞೋಪವೀತ
ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಹಿಡಿಗೋಲ
ನೀ ತೊಡಕಿಕ್ಕಿದ ತೊಡಕನೀ ಲೋಕದ ಜನರೆತ್ತ ಬಲ್ಲರೈ
ರಾಮನಾಥ

೭೯೮
ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು
ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇರಿತ್ತು
ಈ ಉನ್ಮತ್ತದಲ್ಲಿ ಮಗ್ನರಾದವರೆಲ್ಲರೂ ಅರುಹಿರಿಯರೆಂತಪ್ಪರೊ
ಭಕ್ತಿ ವಿರಕ್ತಿಯೆಂಬುದು ಇತ್ತಲೆ ಉಳಿಯಿತ್ತು
ಧರ್ಮೇಶ್ವರಲಿಂಗದತ್ತಮುಟ್ಟಿದಡಂತಿಲ್ಲ

೭೯೯
ಮದ್ದಿನ ಸುರೆಯ ತೊಗಲ ತಿತ್ತಿಯಲ್ಲಿ ತುಂಬಿ ಒಪ್ಪದಲ್ಲಿ ನಿಲಿಸಲಿಕೆ
ಅದು ತನ್ನ ಉತ್ಪಾತದಿಂದ ತಿತ್ತಿ ಹಾರಿ

ನೆಲಕ್ಕೆ ಅಪ್ಪಳಿಸಿ ಬೀಳೂದ ಕಂಡೆ
ದೃಷ್ಟವ ಕೇಳಲೇತಕ್ಕೆ
ಕಾಯದ ತಿತ್ತಿಯಲ್ಲಿ ಜೀವ ಹೊಕ್ಕು
ತ್ರಿವಿಧಮಲವಂ ಕಚ್ಚಿ ನಡೆವುದಕ್ಕೆ ಕಾಲಿಲ್ಲದೆ
ನುಡಿವುದಕ್ಕೆ ಬಾಯಿಲ್ಲದೆ
ನೋಡುವುದಕ್ಕೆ ಕಣ್ಣಾಲಿ ಮರೆಯಾಯಿತ್ತು
ಬೊಂಬೆ ಹೋಯಿತ್ತು
ದೃಷ್ಟಾಂತರ ಬೊಂಬೆ ಕೆಟ್ಟಲ್ಲಿ
ಮಣ್ಣಿಗೆ ಕಾದಿ ಹೊನ್ನಿಗೆ ಹೋರಿ
ಹೆಣ್ಣಿಂಗೆ ನಾಣುಗೆಟ್ಟ ಈ ಕುನ್ನಿಮನಕ್ಕೆ ಇನ್ನೇವೆ
ಧರ್ಮೇಶ್ವರಲಿಂಗಾ

೮೦೦
ಮಧ್ಯಾಹ್ನದಿಂದ ಮೇಲೆ ಹಿರಿಯರಿಲ್ಲ
ಅಸ್ತಮಾನದಿಂದ ಮೇಲೆ ಜಿತೇಂದ್ರಿಯರಿಲ್ಲ
ವಿಧಿಯ ಮೀರುವ ಅಮರರಿಲ್ಲ
ಕ್ಷುಧೆ ವಿಧಿ ವ್ಯಸನಕ್ಕಂಜಿ
ನಾ ನಿಮ್ಮ ಮರೆಹೊಕ್ಕು ಬದುಕಿದೆನು
ಚೆನ್ನಮಲ್ಲಿಕಾರ್ಜುನಾ

೮೦೧
ಮನ ಬಸುರಾದರೆ ಕೈ ಬೆಸಲಾಯಿತ್ತ ಕಂಡೆ
ಕರ್ಪುರದ ಕಂಪ ಕಿವಿ ಕುಡಿಯಿತ್ತ ಕಂಡೆ
ಮುತ್ತಿನ ಥಾಳವ ಮೂಗು ನುಂಗಿತ್ತ ಕಂಡೆ
ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ
ಒಂದು ನೀಲದೊಳಗೆ ಮೂರು ಲೋಕವಡಗಿತ್ತ ಕಂಡೆ
ಗುಹೇಶ್ವರ

೮೦೨
ಮನ ಮಂಕಾಯಿತ್ತು
ತನು ಮರೆಯಿತ್ತು

ವಾಯು ಬರತಿತ್ತು
ಉರಿ ಎದ್ದಿತ್ತು
ಹೊಗೆ ಹರಿಯಿತ್ತು
ಸರೋವರವೆಲ್ಲ ಉರಿದು ಹೋಯಿತ್ತು
ಒಳಕ್ಕೆ ಹೊಕ್ಕು ಕದವ ತೆಗೆದು
ಬಯಲು ನೋಡಿ ಬೆಳಗ ಕೂಡಿದಲ್ಲದೆ
ನಿಜಮುಕ್ತಿ ಇಲ್ಲವೆಂದರು
ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ

೮೦೩
ಮನಕ್ಕೆ ನಾಚದ ವಚನ
ವಚನಕ್ಕೆ ನಾಚದ ಮನ
ಕುಂದು ಹೆಚ್ಚ ನುಡಿವೆ
ಒಂದು ಮಾತಿನ ಗೆಲ್ಲಕ್ಕೆ ಹಿಡಿದು ಹೋರುವೆ
ಕೂಡಲಸಂಗನ ಶರಣರ ಎನ್ನಾಳ್ದರೆಂಬೆ

೮೦೪
ಮನದ ಕಾಲತ್ತಲು
ತನುವಿನ ಕಾಲಿತ್ತಲು
ಅನುಭಾವದನುವ ನೆನೆವುತ್ತ ನೆನೆವುತ್ತ ಗಮನಗೆಟ್ಟಿತ್ತು
ಲಿಂಗಮುಖದಲಾದ ಸೂಚನೆಯ ಸುಖವ ಕಂಡು ಗಮನಗೆಟ್ಟಿತ್ತು
ಅನುವಾಯಿತ್ತು ಅನುವಾಯಿತ್ತು
ಅಲ್ಲಿಯೇ ತಲ್ಲೀಯವಾಯಿತ್ತು
ಗುಹೇಶ್ವರನೆಂಬ ಲಿಂಗೈಕ್ಯಂಗೆ

೮೦೫
ಮನದ ಸುಖವ ಕಂಗಳಿಗೆ ತಂದರೆ
ಕಂಗಳ ಸುಖವ ಮನಕ್ಕೆ ತಂದರೆ
ನಾಚಿತ್ತು ಮನ ನಾಚಿತ್ತು
ಸ್ಥಾನಪಲ್ಲಟವಾದಡೆ ವ್ರತಕ್ಕೆ ಭಂಗ
ಗುಹೇಶ್ವರ

೮೦೬
ಮನವಿದ್ದಲ್ಲಿ ಮಹಾದೇವನಿಪ್ಪ
ಮನವಿದ್ದಲ್ಲಿ ಮಹಾದೇವನಿಲ್ಲವೋ
ಅಯ್ಯಾ
ಯಾತಾರ್ಥವಾಗಿ ಬಂದವರು
ಬಯಲಲ್ಲಿ ಬಯಲ ಬಿಟ್ಟು ಬಯಲಾರಿಸುವಂತೆ
ಮನೋವ್ಯಾಪಾರಕ್ಕದರಂತೆ ಇಪ್ಪ
ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ

೮೦೭
ಮನವೆ ಸರ್ಪ ತನು ಹೇಳಿಗೆ
ಹಾವಿನೊಡತಣ ಹುದುವಾಳಿಗೆ
ಇನ್ನಾವಾಗ ಕೊಂದಹುದೆಂದರಿಯೆ
ಇನ್ನಾವಾಗ ತಿಂದಹುದೆಂದರಿಯೆ
ನಿಚ್ಚಕ್ಕೆ ನಿಮ್ಮ ಪೂಜಿಸಬಲ್ಲಡೆ
ಅದೆ ಗಾರುಡ
ಕೂಡಲಸಂಗಮದೇವಾ

೮೦೮
ಮನೆ ನೋಡಾ ಬಡವರು
ಮನ ನೋಡಾ ಘನ
ಸೋಂಕಿನಲ್ಲಿ ಶುಚಿ ಸರ್ವಾಂಗ ಕಲಿಗಳು
ಪಸರಕ್ಕನುವಿಲ್ಲ ಬಂದ ತತ್ಕಾಲಕೆ ಉಂಟು
ಕೂಡಲಸಂಗನ ಶರಣರು ಸ್ವತಂತ್ರಧೀರರು

೮೦೯
ಮನೆ ಮನೆದಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ
ಬೇಡಿದಡೆ ಇಕ್ಕದಂತೆ ಮಾಡಯ್ಯ
ಇಕ್ಕಿದಡೆ ನೆಲಕ್ಕೆ ಬೀಳುವಂತೆ ಮಾಡಯ್ಯ

ನೆಲಕ್ಕೆ ಬಿದ್ದಡೆ ನಾನೆತ್ತಿಕೊಂಬುದಕ್ಕೆ ಮುನ್ನವೆ
ಶುನಿಯೆತ್ತಿಕೊಂಬಂತೆ ಮಾಡಾ
ಚೆನ್ನಮಲ್ಲಿಕಾರ್ಜುನಯ್ಯ

೮೧೦
ಮನೆಯಲ್ಲಿ ಅಟ್ಟೆನೆಂದಡೆ ಹೊಟ್ಟೆ ತುಂಬಿದುದುಂಟೆ
ಇರಿಯೆಂಬ ಮಾತಿಗೆ ಘಾಯವೊಡಲಾದುದುಂಟೆ
ಮಾತಿನ ಮಾಲೆಯ ನುಡಿದು ಅರ್ಕೇಶ್ವರಲಿಂಗವನರಿದವರುಂಟೆ

೮೧೧
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ
ಹೊಸ್ತಿಲೊಳಗೆ ಹುಲ್ಲು ಹುಟ್ಟಿ
ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ
ತನುವಿನೊಳಗೆ ಹುಸಿ ತುಂಬಿ
ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ
ಕೂಡಲಸಂಗಮದೇವಾ

೮೧೨
ಮರಕ್ಕೆ ಬೇರು ಬಾಯಿಯೆಂದು
ತಳಕ್ಕೆ ನೀರನೆರೆದಡೆ
ಮೇಲೆ ಪಲ್ಲವಿಸಿತ್ತು
ನೋಡಾ
ಲಿಂಗದ ಬಾಯಿ ಜಂಗಮವೆಂದು
ಪಡಿಪದಾರ್ಥವ ನೀಡಿದಡೆ
ಮುಂದೆ ಸಕಳಾರ್ಥವನೀವನು
ಆ ಜಂಗಮವ ಹರನೆಂದು ಕಂಡು ನರನೆಂದು ಭಾವಿಸಿದಡೆ
ನರಕ ತಪ್ಪದು ಕಾಣಾ
ಕೂಡಲಸಂಗಮದೇವಾ

೮೧೩

ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ
ಶರೀರದೊಳಗಾತ್ಮನನಾರು ಕಾಣದಂತಿರಿಸಿದೆ
ನೀ ಬೆರಸುವ ಭೇದಕ್ಕೆ ಬೆರಗಾದೆನಯ್ಯ
ರಾಮನಾಥ

೮೧೪

ಮರನ ತಾಳೂದಕ್ಕೆ ಪೃಥ್ವಿ ಆಧಾರವಾಗಿ
ಶಾಖೆಯ ತಾಳೂದಕ್ಕೆ ಮರನಾಧಾರವಾಗಿ
ಲತೆಯ ತಾಳೂದಕ್ಕೆ ಶಾಖೆ ಆಧಾರವಾಗಿ
ಲತೆಯ ಬಿಡುಮುಡಿಯಲ್ಲಿ ಕುಸುಮತೋರಿ
ಕುಸುಮದ ತೊಟ್ಟಿನಲ್ಲಿ ಕುಸುಮವಳಿದು
ಕಾಯಿ ಬಲಿದು ರಸ ಬಲಿದು ಹಣ್ಣಾದಂತೆ
ತೊಟ್ಟು ಬಿಡುವನ್ನಕ್ಕ ಕಾಯ ಶಿಲೆಯ ಪೂಜೆ
ಆತ್ಮ ಅರಿವಿನ ಪೂಜೆ
ಉಭಯಸ್ಥಲ ನಿರುತವಾಗಿ ಬಿಟ್ಟು ನಿಂದುದು ವಸ್ತುವಿನ ಉಳುಮೆ
ಆ ಉಳುಮೆ ಲೇಪವಾಗಿ ಬೆಳಗು ತೋರುತ್ತದೆ
ಸದಾಶಿವಮೂರ್ತಿಲಿಂಗದಲ್ಲಿ

೮೧೫

ಮರನ ನೆಳಲಲಿದ್ದು ತನ್ನ ನೆಳಲನರಸಬಹುದೆ
ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯಾ
ನಿಮ್ಮ ಶರಣರ ಮುಂದೆ ನಾನೇತರ ಯುಕ್ತನಯ್ಯಾ
ಆನು ಭಕ್ತನೆಂಬ ನುಡಿ ಸುಡದೆ ಕೂಡಲಸಂಗಮದೇವಾ

೮೧೬

ಮರನ ಹೂ ನುಂಗಿ
ಅಡಿಯೊಳಗಡಗಿ ಹಣ್ಣಾಯಿತ್ತು
ಹಣ್ಣು ಎಳೆಗಾಯಿ ನುಂಗಿ
ಹೂ ಮರನ ಉಗುಳಿತ್ತು

ಮರ ಮರಣಕ್ಕೆ ತೆರಹಿಲ್ಲ
ಏಣಾಂಕಧರ ಸೋಮೇಶ್ವರಲಿಂಗವನರಿತೆಹೆನೆಂದು

೮೧೭
ಮರನನೇರಿದ ಮರ್ಕಟನಂತೆ
ಹಲವು ಕೊಂಬಿಂಗೆ ಹಾಯುತ್ತಲಿದೆ
ಬೆಂದ ಮನವ ನಾನೆಂತು ನಂಬುವೆನಯ್ಯಾ
ಎಂತು ನಚ್ಚುವೆನಯ್ಯಾ ಎನ್ನ ತಂದೆ
ಕೂಡಲಸಂಗಮದೇವನಲ್ಲಿಗೆ ಹೋಗಲೀಯದಯ್ಯಾ

೮೧೮
ಮರನೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯ
ಬಯಲ ಗಾಳಿಯ ಪರಿಮಳ ನಾಸಿಕವನಪ್ಪಿದಂತಾದೆನಯ್ಯ
ಕರುವಿನ ಬೊಂಬೆಯನುರಿಗೊಂಡು ನಿಂದಂತಾದೆನಯ್ಯ
ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆ ನಾನಯ್ಯ

೮೧೯
ಮರನೊಳಗಣ ಪತ್ರೆಫಲಂಗಳು
ಮರಕಾಲವಶದಲ್ಲಿ ತೋರುವಂತೆ
ಹರನೊಳಗಣ ಪ್ರಕೃತಿಸ್ವಭಾವಂಗಳು
ಹರಭಾವದಿಚ್ಛೆಗೆ ತೋರುವವು
ಲೀಲೆಯಾದಡುಮಾಪತಿ
ಲೀಲೆ ತಪ್ಪಿದಡೆ ಸ್ವಯಂಭು
ಗುಹೇಶ್ವರ

೮೨೦
ಮರಮರ ಮಥನಿಸಿ ಕಿಚ್ಚು ಹುಟ್ಟಿ
ಸುತ್ತಣ ತರುಮರಾದಿಗಳ ಸುಡಲಾಯಿತ್ತು
ಆತ್ಮ ಆತ್ಮ ಮಥನಿಸಿ ಅನುಭಾವ ಹುಟ್ಟಿ
ಹೊದ್ದಿರ್ದ ತನುಗುಣಾದಿಗಳ ಸುಡಲಾಯಿತ್ತು
ಇಂತಪ್ಪ ಅನುಭಾವರ ಅನುಭಾವವ ತೋರಿ
ಎನ್ನ ಒಡಲನುಳುಹಿಕೊಳ್ಳಾ ಚೆನ್ನಮಲ್ಲಿಕಾರ್ಜುನಾ

೮೨೧
ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ
ಅಗಲಿದ್ದು ಫಲವೇನು ಬಾನವಿಲ್ಲದನ್ನಕ್ಕ
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ
ಚೆನ್ನಮಲ್ಲಿಕಾರ್ಜುನಾ

೮೨೨
ಮರೆದವರ ಮನದಲ್ಲೆಲ್ಲವೂ ಮಾರಿ
ಅರಿದವರ ಮನದಲ್ಲೆಲ್ಲವೂ ಸ್ವಯಂಜ್ಯೋತಿ
ಡಕ್ಕೆಯ ದನಿ ಉಳ್ಳನ್ನಕ್ಕ ನಿಶ್ಚೈಸಿಕೊಳ್ಳಿ
ಕಾಲಾಂತಕ ಭೀಮೇಶ್ವರಲಿಂಗವನರಿವುದಕ್ಕೆ

೮೨೩
ಮರೆಯಲಾಗದು ಹರಿಯ
ಮರೆಯಲಾಗದು ಬ್ರಹ್ಮನ
ಮರೆಯಲಾಗದು ತೆತ್ತೀಸಕೋಟಿ ದೇವರ್ಕಳ
ನಮ್ಮ ಕೂಡಲಸಂಗಮದೇವರ ಮರೆಯಲಹುದು

೮೨೪
ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು
ಕೂಡಲಸಂಗಮದೇವಾ

೮೨೫
ಮಹಾರಾಜನನೆಲ್ಲರೂ ಬಲ್ಲರು
ಆ ರಾಜನು ಆರನೂ ಅರಿಯನು
ಅರಿಯನಾಗಿ ಪದವಿಲ್ಲ ಫಲವಿಲ್ಲ ಭೋಗವಿಲ್ಲ ಪರಿಣಾಮವಿಲ್ಲ

ಮಹಾರಾಜಾಧಿರಾಜ ಶಿವನನೆಲ್ಲರೂ ಬಲ್ಲರು
ಆ ಶಿವನು ಅರಿಯನು
ಅರಿಯನಾಗಿ ಪದವಿಲ್ಲ ಭೋಗವಿಲ್ಲ ಪರಿಣಾಮವಿಲ್ಲ
ಇದು ಕಾರಣ
ಶಿವನನರಿದ ಸದ್ಭಕ್ತರ ಸಂಗದಿಂದ
ಆ ಮಹಾಶಿವನು ತನ್ನನು ಅರಿವಂತೆ ಮಾಡಿಕೊಂಡನಾಗಿ
ಪದ ಫಲ ಭೋಗ ಪರಿಣಾಮ ಮತ್ತೆ ಉಂಟೇ
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ

**೮೨೬**

ಮಳಲ ಮರೆಯ ನೀರ ಒಲವರವಿಲ್ಲದೆ ತೋಡಿ
ಚೆಲುಮೆಯ ಶೀಲವಂತರೆಂದು ಹಲುಬುತ್ತಿರಲೇತಕ್ಕೆ
ಸಲೆ ವಸ್ತುವನರಿತು ತ್ರಿವಿಧದ ಹೊಲಬಿನಾಸೆಯ ಬಿಟ್ಟು ಸಲೆಗೆದ್ದಡೆ
ಬೇರೊಂದು ಹೊಲಬ ತೋರಿಹನೆಂದನಂಬಿಗ ಚೌಡಯ್ಯ

**೮೨೭**

ಮಳಲಲ್ಲಿ ರಸ ಉಂಟೆ
ನೆಳಲಿಗೆ ತಡೆ ಉಂಟೆ
ರಣದಲ್ಲಿ ತಪ ಉಂಟೆ
ನೇಹ ತಪ್ಪಿದಲ್ಲಿ ಮೋಹವನರಸಲುಂಟೆ
ಮಹಾಲಿಂಗ ಚೆನ್ನರಾಮ
ಮನ ಮುರಿದ ಬಳಿಕ ಕಂಗಳಿಗೆ ವಿಷವಯ್ಯಾ

**೮೨೮**

ಮಾಗಿಯ ಹುಲ್ಲಿನ ಸೋಂಕಿನಂತೆ
ತನು ಪುಳಕಿತಳಾದಳವ್ವೆ
ನುಡಿ ತೊದಳು
ಆತನ ಒಲವೆ ಆಧಾರವಾಗಿದ್ದಳವ್ವೆ
ಬಿಳಿಯ ತುಂಬಿ ಕುಂಕುಮ ರಸದಲ್ಲಿ ಬಂಡುಂಡಂತೆ
ಮಹಾಲಿಂಗ ಗಜೇಶ್ವರನಲ್ಲಿ
ತನ್ನಲ್ಲಿ ತಾನೆ ರತಿಯಾಗಿರ್ದಳವ್ವೆ

೮೨೯

ಮಾಘಮಾಸದ ನವಿಲಿನಂತಾದೆ
ನೋಡವ್ವಾ
ಇರುಳು ತೊಲಗುವ ಜಕ್ಕವಕ್ಕಿಯಂತೆ ಹಲುಬುತಿರ್ದೆ
ನೋಡವ್ವಾ
ಮಾಗಿಯ ಕೋಗಿಲೆಯಂತೆ ಮೂಗಿಯಾಗಿರ್ದೆ
ನೋಡವ್ವಾ
ಮಹಾಲಿಂಗ ಗಜೇಶ್ವರನ ಅನುಭಾವ ಸಂಬಂಧಿಗಳ ಬರವು
ಎನ್ನ ಪ್ರಾಣದ ಬರವು
ನೋಡವ್ವಾ

೮೩೦

ಮಾಡಿ ಆಡಲೇತಕ್ಕೆ
ಸಲಹಿ ಕೊಲಲೇತಕ್ಕೆ
ಬಿತ್ತಿ ಕೀಳಲೇತಕ್ಕೆ
ಕಟ್ಟಿ ಒಡೆಯಲೇತಕ್ಕೆ
ಮಾಡಿ ಮಾಡಿ ಮನಗುಂದುವ
ನೀಡಿ ನೀಡಿ ನಿಜಗುಂದುವ ಬೇಡ
ಆ ಮಾಟವ ನಿನ್ನ ನೀನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ

೮೩೧

ಮಾಡಿ ನೀಡಿ ಹೋದೆನೆಂಬಾಗ ಕೈಲಾಸವೇನು ಕೈಕೂಲಿಯೆ
ಮುಂದೊಂದ ಕಲ್ಪಿಸದೆ ಹಿಂದೊಂದ ಭಾವಿಸದೆ
ಸಲೆಸಂದಿದ್ದಾಗವೆ
ಮಾರಯ್ಯಪ್ರಿಯ ಅಮಲೇಶ್ವರಲಿಂಗವಿದ್ದ ಠಾವೆ ಕೈಲಾಸ

೮೩೨

ಮಾಡಿ ಮಾಡಿ ಕೆಟ್ಟರು ಮನವಿಲ್ಲದೆ
ನೀಡಿ ನೀಡಿ ಕೆಟ್ಟರು ನಿಜವಿಲ್ಲದೆ
ಮಾಡುವ ನೀಡುವ ನಿಜಗುಣವುಳ್ಳವರ
ಕೂಡಿಕೊಂಬ ನಮ್ಮ ಕೂಡಲಸಂಗಮದೇವ

೮೩೩

ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ
ಮತ್ತಾರ ಹಿತಕ್ಕಲ್ಲ
ನೋಡಯ್ಯಾ
ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ
ಮತ್ತಾರ ಹಿತಕ್ಕಲ್ಲ
ನೋಡಯ್ಯಾ
ತನ್ನ ಬಿಟ್ಟನ್ಯಹಿತವ ನೋಡಿದಡೆ
ಕೂಡಿಕೊಂಬ ನಮ್ಮ ಕಪಿಲಸಿದ್ಧಮಲ್ಲಯ್ಯನವರ

೮೩೪

ಮಾಡುವ ಭಕ್ತನ ಕಾಯ ಬಾಳೆಯ ಕಂಬದಂತಿರಬೇಕು
ಮೆಲ್ಲಮೆಲ್ಲನೆ ಹೊರೆಯೆತ್ತಿ ನೋಡಿದಡೆ
ಒಳಗೆ ಕೆಚ್ಚಿಲ್ಲದಿರಬೇಕು
ಮೇಲಾದ ಫಲವ ನಮ್ಮವರು ಬೀಜಸಹಿತ ನುಂಗಿದರು
ಎನಗಿನ್ನಾವ ಭಯವಿಲ್ಲ ಕಾಣಾ
ಕೂಡಲಸಂಗಮದೇವಾ

೮೩೫

ಮಾಡುವ ಮಾಟವುಳ್ಳನ್ನಕ್ಕ ಬೇರೊಂದು ಪದವನರಸಲೇತಕ್ಕೆ
ದಾಸೋಹವೆಂಬ ಸೇವೆಯ ಬಿಟ್ಟು ನೀಸಲಾರದೆ
ಕೈಲಾಸವೆಂಬ ಆಸೆ ಬೇಡ
ಮಾರಯ್ಯಪ್ರಿಯ ಅಮಲೇಶ್ವರಲಿಂಗವಿದ್ದ ಠಾವೆ ಕೈಲಾಸ

೮೩೬

ಮಾಣಿಕವ ಕಂಡವರು ತೋರುವರೆ
ಅಯ್ಯಾ
ಮುತ್ತ ಕಂಡವರು ಅಪ್ಪಿಕೊಂಬರಲ್ಲದೆ
ಬಿಚ್ಚಿ ಬಿಚ್ಚಿ ತೋರುವರೆ
ಅಯ್ಯಾ
ಆ ಮುತ್ತಿನ ನೆಲೆಯನು ಮಾಣಿಕದ ಬೆಲೆಯನು

ಬಿಚ್ಚಿ ಬೇರಾಗಿ ತೋರಿ ರಕ್ಷಣೆಯ ಮಾಡಿದ ಕಾರಣದಿಂದ
ಬಚ್ಚಬರಿಯ ಬೆಳಗಿನೊಳಗೋಲಾಡಿ
ನಿಮ್ಮ ಪಾದದೊಳಗೆ ನಿಜಮುಕ್ತಳಾದೆನಯ್ಯಾ ಚೆನ್ನಮಲ್ಲೇಶ್ವರ
ಅಪ್ಪಣ್ಣಪ್ರಿಯ ಚೆನ್ನಬಸವಣ್ಣಾ

೮೩೭

ಮಾತ ಅಲೇಖದ ಮೇಲಕೆ ಕುರುಹಿಟ್ಟಲ್ಲದೆ
ನೀತಿಲಕ್ಷಣವ ಕಾಣಬಾರದು
ಚಿತ್ತ ತಾ ಪೂಜಿಸುವ ವಸ್ತುವಿನಲ್ಲಿ ಲಕ್ಷಿಸಿಯಲ್ಲದೆ
ಮೇಲಣ ಅಲಕ್ಷವ ಕಾಣಬಾರದು
ಕಾಬನ್ನಕ್ಕ ಉಭಯದ ಆಚರಣೆ ತಾನುಳ್ಳನ್ನಕ್ಕ
ಕಾಲಾಂತಕ ಭೀಮೇಶ್ವರಲಿಂಗವ ಪೂಜಿಸಬೇಕು

೮೩೮

ಮಾತಂಗಿಯ ಹೊಳೆಯಲ್ಲಿ ಉತ್ತಮನ ನೆಳಲು ಸುಳಿದಡೆ
ರೂಪು ಹೊಲೆಯನಾಗಬಲ್ಲುದೆ
ಅಯ್ಯಾ
ಮರ್ತ್ಯಲೋಕದ ಮಾನವರೊಳಗೆ ಶರಣ ಸುಳಿದಡೆ
ಶರಣ ಸೂತಕಿಯಾಗಬಲ್ಲನೆ
ಅಯ್ಯಾ
ಮರ್ತ್ಯರ ಭವಿಯ ಮಾತ ವರ್ತಮಾನವೆಂಬ ಜೀವಿಗಳ
ಅಗೆದೊಗೆಯದೆ ಮಾಬನೆ ಮಹಾಲಿಂಗ ಗಜೇಶ್ವರಯ್ಯ

೮೩೯

ಮಾತನರಿದವಂಗೆ ಮಥನದ ಹಂಗೇಕೊ
ತೀರ್ಥವನರಿದವಂಗೆ ತೀರ್ಥದ ಹಂಗೇಕೊ
ಜ್ಯೋತಿಯನರಿದವಂಗೆ ಕತ್ತಲೆಯ ಹಂಗೇಕೊ
ಲೋಕವನರಿದವಂಗೆ ವ್ಯಾಕುಲದ ಹಂಗೇಕೊ
ಈ ತೆರನನರಿದವಂಗೆ ಮುಂದಾವ ಭೀತಿಯುಂಟು
ಹೇಳಾ ಬಸವಪ್ರಿಯ ಕೂಡಲಚೆನ್ನಬಸವಣ್ಣಾ

೮೪೦

ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು
ಎಲೆ ಹೋತೇ ಅಳು ಕಂಡಾ
ವೇದವನೋದಿದವರ ಮುಂದೆ ಅಳು ಕಂಡಾ
ಶಾಸ್ತ್ರ ಕೇಳಿದವರ ಮುಂದೆ ಅಳು ಕಂಡಾ
ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ

೮೪೧

ಮಾತಿನ ಹಂಗೇತಕ್ಕೆ ಮನವೇಕಾಂತದಲ್ಲಿ ನಿಂದ ಬಳಿಕ
ಬಸವಯ್ಯಾ
ಅಜಾತನ ಒಲುಮೆ ಏತಕ್ಕೆ ಅರ್ಪಿತದ ಹಂಗ ಹರಿದ ಬಳಿಕ
ಬಸವಯ್ಯಾ
ಎನಗೆ ಸಮಯಾಚಾರವಿನ್ನೇಕೆ ಭಕ್ತಿಭಾವ ನಷ್ಟವಾದ ಬಳಿಕ
ಬಸವಯ್ಯಾ
ಮಾತಿನ ಸೂತಕ ಹಿಂಗಿ ಮನೋಲೀಯವಾಯಿತ್ತಯ್ಯಾ
ಸಂಗಯ್ಯಾ
ಬಸವ ಕುರುಹಿಲ್ಲದ ಮೂರ್ತಿಯಾದ ಕಾರಣ

೮೪೨

ಮಾತಿಲ್ಲದ ಮಥನವ ಮಾಡಿ ಮೆರೆದೆ
ಬಸವಾ ನೀತಿಯಿಲ್ಲದೆ ನಿಜವ ತೋರಿ ಮೆರೆದೆ
ಬಸವಾ ಅನಿತನಿತು ತೃಪ್ತಿಯಮಾಡಿ ತೋರಿದೆಯಯ್ಯಾ ಬಸವಾ
ನಿಮ್ಮಂಗ ಸಂಗಯ್ಯನಲ್ಲಿ ಸ್ವಯಲಿಂಗಿಯಾದೆಯಲ್ಲಾ ಬಸವಾ

೮೪೩

ಮಾತು ಬ್ರಹ್ಮಾಂಡವ ಮುಟ್ಟಿ
ನೀತಿ ಮಾತಿನ ಬಾಗಿಲ ಕಾಯ್ವುದು ಅದೇತರ ಮಾತು
ಆತುರವೈರಿ ಮಾರೇಶ್ವರಾ

೮೪೪

ಮಾತು ಮಾತಿಗೆ ಮಥನವ ಮಾಡುವಾತನೆ ಜಾತ
ಮಾತಿಗೆ ಮೊದಲ ಕಂಡಾತನೆ ಅಜಾತ

ಕಾತರಕ್ಕೆ ಕಂಗೆಟ್ಟು ಕಳವಳಿಸದಿಪ್ಪನೆ ಪರಮಾತ್ಮ
ನೀತಿ ನಿಜ ನೆಲೆಗೊಂಡಾತನೆ ಜಗನ್ನಾಥ
ಇವೇತರೊಳಗು ಸಿಕ್ಕದಿಪ್ಪಾತನೆ ಗುರುನಾಥ
ಬಸವಪ್ರಿಯ ಕೂಡಲಚೆನ್ನಬಸವಣ್ಣಾ

**೮೪೫**

ಮಾತುಳ್ಳನ್ನಕ್ಕ ದೇಹ ಹಿಂಗದು
ನೆನಹುಳ್ಳನ್ನಕ್ಕ ಪ್ರಾಣ ಸೂತಕ ಬಿಡದು
ಕಾಯದ ಜೀವದ ಹೊಲಿಗೆಯ ಸಂದ ಬಿಚ್ಚಲರಿಯದು
ಆನು ನಿರ್ದೇಹಿ ಎಂದಡೆ ನಗರೆ ನಿಮ್ಮ ಪ್ರಮಥರು.
ಎನ್ನ ಅಂತರಂಗದಲುಳ್ಳ ಅವಗುಣವ ಹಿಂಗಿಸಿ
ನಿಮ್ಮಂತೆ ಮಾಡಿದಡಾನುಳಿವೆನಲ್ಲದೆ
ಬೇರೆ ಗತಿಯ ಕಾಣೆ
ನೋಡಾ
ಅಯ್ಯಾ ಕಪಿಲಸಿದ್ಧಮಲ್ಲಿನಾಥಾ

**೮೪೬**

ಮಾತೆಂಬುದು ಜ್ಯೋತಿರ್ಲಿಂಗ
ಸ್ವರವೆಂಬುದು ಪರತತ್ತ್ವ
ತಾಳೋಷ್ಠ ಸಂಪುಟವೆಂಬುದೇ ನಾದಬಿಂದುಕಳಾತೀತ
ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ [ಕೇಳಾ ಮರುಳೆ]

**೮೪೭**

ಮಾರ್ಜಾಲನ ಹೃದಯದಲ್ಲಿ ಮೂಷಕ ಮನೆಯ ಮಾಡಿ ಇದಿತ್ತು
ಅದಕ್ಕೆ ಮಣಿಮಾಡಂಗಳಿಂದ ಆಶ್ರಯವೊಂದು ಬಾಗಿಲು ಬೇರೆ
ಅದಕ್ಕೆ ಹೋಗಿ ಆಡುವ ನಾಟಕಸಾಲೆ
ಪವನನೆಂಬ ಸೂಳೆ ಅಘಟದಿಂದ ಆಡುತ್ತಿರಲಾಗಿ ಕಾಲುಜಾರಿ
ನೆಲಕ್ಕೆ ಬಿದ್ದಳು
ಬಿದ ಘಾತಕ್ಕೆ ಯೋನಿ ಒಡೆಯಿತ್ತು
ಮೊಲೆ ಹರಿದು ಕಿವಿ ಕಿತ್ತು ಕಣ್ಣು ಹಿಂಚುಮುಂಚಾಯಿತ್ತು

ನೋಡುವ ಅಣ್ಣಗಳ ಬಯಕೆ ಹರಿಯಿತ್ತು
ಯೋನಿ ಕಿತ್ತಲ್ಲಿ ಕೂಟಕ್ಕೆ ಸುಖವಿಲ್ಲ ನೋಟಕ್ಕೆ ಬೆಂಬಳಿಯಿಲ್ಲ
ಪವನನ ಅಘಟ ಹೋಯಿತ್ತು ಕಾಲನ ಕಮಟಕ್ಕೆ
ನೀ ಅಲೇಖನಾದ ಶೂನ್ಯ
ಇವರಾಟದ ಬೆಂಬಳಿಯ ಬಿಡಿಸು
ಕಲ್ಲಿನೊಳಗಿಂದ ಇತ್ತ ಬಾರಯ್ಯಾ

**೮೪೮**

ಮೀಂಬುಲಿಗನ ಹಕ್ಕಿಯಂತೆ ನೀರ ತಡಿಯಲಿದ್ದು
ಮೂಗ ಹಿಡಿದು ಧ್ಯಾನಮಾಡುವರಯ್ಯಾ
ಬಿಟ್ಟ ಮಂಡೆವೆರಸಿ ಬಾಯ ಮಿಡುಕಿಸುತ
ಕಣ್ಣ ಮುಚ್ಚಿ ಬೆರಳನೆಣಿಸುವರಯ್ಯಾ
ನಿಮ್ಮ ಕೈಯಲಿ ಕಟ್ಟಿದ ದರ್ಭೆಯ ಹುಲ್ಲು
ಕೂಡಲಸಂಗನನರಿಯದೆ ಮೊರೆಯಿಡುವಂತೆ

**೮೪೯**

ಮುಂಗೈಯಲ್ಲಿ ವೀರಗಂಕಣವಿಕ್ಕಿ
ಮುಂಗಾಲಲ್ಲಿ ತೊಡರು ಬಾವುಲಿಯ ಕಟ್ಟಿದೆ
ಗಂಡುಡಿಗೆಯನುಟ್ಟೆನೆಂಬ ಮಾತಿನ ಬಿರಿದ ನುಂಗಿದೆನು
ಚೆನ್ನಮಲ್ಲಿಕಾರ್ಜುನಾ
ನಿಮ್ಮಾಣೆಗೆ ಊಣೆಯವ ತಂದೆನಾದಡೆ
ನಿಮ್ಮ ತೊತ್ತಿನ ಮಗಳಲ್ಲಯ್ಯಾ

**೮೫೦**

ಮುಖವಿಲ್ಲದ ಕನ್ನಡಿಯ ನೋಡಲು
ಆ ಕನ್ನಡಿಯ ರೂಪಿನೊಳಗೆ ಸಂಗಯ್ಯನ ರೂಪು ಕಾಣಬಂದಿತ್ತು
ಆ ರೂಪನರಿದು ಪರಿಣಾಮವಕಂಡು ಬದುಕಿದೆನಯ್ಯಾ
ಪ್ರಸನ್ನದವಳಾಗಿ ಪ್ರಭಾಪರಿಣಾಮಿಯಾದೆನು
ಗಮನದಸಂಗ ನಿಸ್ಸಂಗವಾಗಿ ಎನಗಿರಪರವಿಲ್ಲವಯ್ಯಾ
ಸಂಗಯ್ಯಾ

೮೫೧

ಮುಟ್ಟಿತ್ತು ಕೆಟ್ಟತ್ತೆಂದಡೆ
ಇನ್ನರಸುವ ಠಾವಾವುದಯ್ಯಾ
ತನುವ ಮರೆದಡೆ ನೆನಹಿನೊಳಗದೇನೊ
ಹಾವು ಪರೆಗಳೆದಡೆ ವಿಷ ನಾಶವಪ್ಪುದೆ
ಶರಣನು ಕಾಯವೆಂಬ ಕಂಥೆಯ ಕಳೆದಡೆ ಗತ ಮೃತವಹನೆ
ಅರಿವು ಲಿಂಗದಲ್ಲಿ ಪ್ರತಿಷ್ಠೆಯಾಗಿ ನಿರ್ಲೇಪನಾಗಿ
ಮಹಾಲಿಂಗ ಕಲ್ಲೇಶ್ವರನಲ್ಲಿ ಲೀಯವಾದ ಶರಣ

೮೫೨

ಮುತ್ತು ನೀರಲಾಯಿತ್ತು
ವಾರಿಕಲ್ಲು ನೀರಲಾಯಿತ್ತು
ಉಪ್ಪು ನೀರಲಾಯಿತ್ತು
ಉಪ್ಪು ಕರಗಿತ್ತು ವಾರಿಕಲ್ಲು ಕರಗಿತ್ತು
ಮುತ್ತು ಕರಗಿದುದನಾರೂ ಕಂಡವರಿಲ್ಲ
ಈ ಸಂಸಾರಿ ಮಾನವರು
ಲಿಂಗವಮುಟ್ಟಿ ಭವಭಾರಿಗಳಾದರು
ನಾ ನಿಮ್ಮ ಮುಟ್ಟಿ ಕರಿಗೊಂಡೆನಯ್ಯಾ
ಚೆನ್ನಮಲ್ಲಿಕಾರ್ಜುನಯ್ಯಾ

೮೫೩

ಮುತ್ತು ನೀರೊಳಗೆ ಹುಟ್ಟಿ ಮರಳಿ ನೀರಾಗದಂತೆ
ತಿಳಿಯ ಕಾಸಿದ ತುಪ್ಪ ಕ್ಷೀರವಾಗದಂತೆ
ತೊಟ್ಟುಬಿಟ್ಟ ಹಣ್ಣು ಹೂಮಿಡಿಯಾಗದಂತೆ
ಸಂಸಾರದಲ್ಲಿ ಹುಟ್ಟಿ ಅದ ಹೊದ್ದದೆ
ಸ್ವಯಂಪ್ರಕಾಶ ಲಿಂಗದ ಬೆಳಗಿನಲ್ಲಿ ಬೆಳೆದು
ತಲ್ಲೀಯವಾಗಿರ್ದರಯ್ಯಾ
ಸೌರಾಷ್ಟ್ರ ಸೋಮೇಶ್ವರಾ ನಿಮ್ಮ ಶರಣರು

೮೫೪

ಮುತ್ತು ಮೊಲೆಯ ನುಂಗಿತ್ತು
ಮೊಲೆ ಅಬಲೆಯ ನುಂಗಿತ್ತು

ಅಬಲೆಯ ಬಲೆಯಲ್ಲಿ ಬಲವಂತರೆಲ್ಲರು ಸಿಕ್ಕಿದರು
ಸುಂಕಕ್ಕಡಹಿಲ್ಲ ಬಂಕೇಶ್ವರಲಿಂಗಾ

೮೫೫
ಮುದ್ದ ನೋಡಿ ಮುಖವ ನೋಡಿ
ಮೊಲೆಯ ನೋಡಿ ಮುಡಿಯ ನೋಡಿ
ಕರಗಿ ಕೊರಗುವುದೆನ್ನ ಮನ
ಲಿಂಗದೇವನ ಧ್ಯಾನವೆಂದಡೆ
ಕರಗಿ ಕೊರಗದೆನ್ನ ಮನ
ಆನು ಭಕ್ತನೆಂಬಡೆ ಲಜ್ಜೆಯಿಲ್ಲ ನೋಡಯ್ಯಾ
ಎನ್ನ ತಂದೆ ಕೂಡಲಸಂಗಮದೇವಯ್ಯ
ಒಲಿದು ಒಪ್ಪಗೊಂಡನಾದಡೆ
ಆನು ಚೆಂಗಳೆಯ ಬಸುರಲ್ಲಿ ಬಾರದಿಹೆನೆ

೮೫೬
ಮುನ್ನೂರರುವತ್ತು ದಿನ ಶ್ರವವ ಮಾಡಿ
ಕಳನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ
ಎನಿಸು ಕಾಲ ಲಿಂಗಾರ್ಚನೆಯ ಮಾಡಿ
ಏವೆನಯ್ಯಾ ಮನದಲ್ಲಿ ದೃಢವಿಲ್ಲದನ್ನಕ್ಕ
ಕೊಡನ ತುಂಬಿದ ಹಾಲ ಕೆಡಹಿ
ಉಡುಗಲೆನ್ನಳವೆ
ಕೂಡಲಸಂಗಮದೇವಾ

೮೫೭
ಮೂರು ಕೋಲ ಬ್ರಹ್ಮಂಗೆ ಅಳದು ಕೊಟ್ಟೆ
ನಾಲ್ಕು ಕೋಲ ವಿಷ್ಣುವಿಂಗೆ ಅಳದು ಕೊಟ್ಟೆ
ಐದು ಕೋಲ ರುದ್ರಂಗೆ ಅಳದು ಕೊಟ್ಟೆ
ಆರು ಕೋಲ ಈಶ್ವರಂಗೆ ಅಳದು ಕೊಟ್ಟೆ
ಒಂದು ಕೋಲ ಸದಾಶಿವಂಗೆ ಅಳದು ಕೊಟ್ಟೆ
ಇಂತೀ ಐವರು ಕೋಲಿನ ಒಳಗು ಹೊರಗಿನಲ್ಲಿ
ಅಳಲುತ್ತ ಬಳಲುತ್ತ ಒಳಗಾದರು

ಇಂತೀ ಒಳ ಹೊರಗ ಶೋಧಿಸಿಕೊಂಡು
ಅಳಿವು ಉಳಿವಿನ ವಿವರವನರಿಯಬೇಕು
ಧಾರೇಶ್ವರಲಿಂಗವನರಿವುದಕ್ಕೆ

**೮೫೮**

ಮೂರುವರ್ಣದ ಬೊಟ್ಟುಗ
ಆರು ವರ್ಣದ ಅಳಗ
ಐದು ವರ್ಣದ ಸಂಚಿಗ
ಇವರೊಳಗಾದ ನಾನಾ ವರ್ಣದ
ಅಜಕುಲ ಕುರಿವರ್ಗ
ಕೊಲುವ ತೋಳನ ಕುಲ
ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟದೆ
ಮೂರ ಮುಟ್ಟದೆ ಆರ ತಟ್ಟದೆ
ಐದರ ಬಟ್ಟೆಯ ಮೆಟ್ಟದೆ
ಒಂದೇ ಹೊಲದಲ್ಲಿ ಮೇದು
ಮಂದೆಯಲ್ಲಿ ನಿಂದು ಸಂದೇಹ ಕಳೆದು
ಉಳಿಯದ ಸಂದೇಹವ ತಿಳಿದು
ವೀರಬೀರೇಶ್ವರಲಿಂಗದಲ್ಲಿಗೆ ಹೋಗುತ್ತಿರಬೇಕು

**೮೫೯**

ಮೆಲ್ಲಮೆಲ್ಲನೆ ಭಕ್ತ
ಮೆಲ್ಲಮೆಲ್ಲನೆ ಮಾಹೇಶ್ವರ
ಮೆಲ್ಲಮೆಲ್ಲನೆ ಪ್ರಸಾದಿ
ಮೆಲ್ಲಮೆಲ್ಲನೆ ಪ್ರಾಣಲಿಂಗಿ
ಮೆಲ್ಲಮೆಲ್ಲನೆ ಶರಣ
ಮೆಲ್ಲಮೆಲ್ಲನೆ ಐಕ್ಯರಾದೆವೆಂಬರು
ನಿಮ್ಮ ಶರಣರು
ತಾವೇನು ಮರುಜವಣಿಯ ಕೊಂಡರೇ
ಅಮೃತಸೇವನೆಯ ಮಾಡಿದರೇ
ಆವ ಸ್ಥಲದಲ್ಲಿ ನಿಂದಡೆಯೂ

ಆ ಸ್ಥಲದಲ್ಲಿ ಷಡುಸ್ಥಲ ಅಳವಡದಿದ್ದರೆ
ಆ ಭಕ್ತಿಯ ಬಾಯಲ್ಲಿ ಹುಡಿಯ ಹೊಯ್ದು ಹೋಗುವೆನೆಂದ
ಕೂಡಲಚೆನ್ನಸಂಗಮದೇವ

೮೬೦
ಮಳೆಯ ಮೇಲಣ ಕಲ್ಲು
ಜಗದೆರೆಯನಾಗಬಲ್ಲುದೆ
ಮಳೆ ಶಿವಭಕ್ತನಾಗಬಲ್ಲುದೆ
ನಿಮ್ಮ ತನುಮನಧನವರಿಯದಿದ್ದಡೆ
ಸದುಭಕ್ತರಹರೆ
ರಾಮನಾಥ

೮೬೧
ಮಳೆಯ ಮೇಲೆ ಕಲ್ಲನಿಕ್ಕಿದಡೆ
ಮಳೆ ಭಕ್ತನಾಗಬಲ್ಲುದೆ
ಮೇಹನಿಕ್ಕಿ ಮೆಯ್ಯನೊರಸಿದಡೆ
ಪಶುಗಳೆಲ್ಲ ಮೆಚ್ಚುವವು
ಅನ್ನವನಿಕ್ಕಿ ಹಿರಣ್ಯವ ಕೊಟ್ಟಡೆ
ಜಗವೆಲ್ಲ ಹೊಗಳುವುದು
ಒಳಗನರಿದು ಹೊರಗೆ ಮರೆದವರ
ಎನಗೆ ತೋರಿಸಾ
ಸಕಳೇಶ್ವರದೇವಾ

೮೬೨
ಮೇರುವ ಸಾರಿದ ಕಾಗೆ ಹೊಂಬಣ್ಣವಾಗದಿದ್ದರೆ
ಆ ಮೇರುವಿಂದತ್ತಣ ಹುಲುಮೊರಡಿಯ ಸಾಲದೆ
ದೇವ ನಿಮ್ಮ ಪೂಜಿಸಿ ದಾವತಿಗೊಂಬಡೆ
ಆ ದಾವತಿಯಿಂದ ಮುನ್ನಿನ ವಿಧಿಯೇ ಸಾಲದೆ
ಗುಹೇಶ್ವರ
ನಿಮ್ಮ ಪೂಜಿಸಿ ಸಾವಡೆ
ನಿಮ್ಮಿಂದ ಹೊರಗಣ ಜವನೆ ಸಾಲದೆ

೮೬೩
ಮೇಲನರಿತಲ್ಲಿ ಕೀಳಿಲ್ಲ
ಕೀಳನರಿತಲ್ಲಿ ಮೇಲಿಲ್ಲ
ಮೇಲು ಕೀಳೆಂಬ ಬೋಳು ಮಾಡಿ
ಧೂಳಾಗಬಲ್ಲರೆ ಹೇಳಲಿಲ್ಲ ಕೇಳಲಿಲ್ಲ
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ
ಮಿಗೆ ಮಿಗೆ ಬಯಲು

೮೬೪
ಮೇಲಾಗಲೊಲ್ಲೆನು ಕೀಳಾಗಲಲ್ಲದೆ
ಕೀಳಿಂಗಲ್ಲದೆ ಹಯನು ಕರೆವುದೆ
ಮೇಲಾಗಿ ನರಕದಲೋಲಾಡಲಾರೆನು
ನಿಮ್ಮ ಶರಣರ ಪಾದಕ್ಕೆ ಕೀಳಾಗಿರಿಸು
ಮಹಾದಾನಿ ಕೂಡಲಸಂಗಮದೇವಾ

೮೬೫
ಮೈಗೆ ಕಾಹ ಹೇಳುವರಲ್ಲದೆ
ಮನಕ್ಕೆ ಕಾಹ ಹೇಳುವರೆ
ಅಣಕದ ಮಿಂಡನ ಹೊಸ ಪರಿಯ ನೋಡಾ
ಕೂಡಲಸಂಗಮದೇವನೆನ್ನ ಮನವ ನಂಬದೆ
ತನ್ನಲ್ಲಿದ್ದ ಲೇಸ ಕಾಹ ಹೇಳಿದನು

೮೬೬
ಮೊದಲು ಬೀಜ ಬಲಿದು
ಕಡೆಯಲ್ಲಿ ಬೀಜ ಅಳಿದಲ್ಲದೆ ಅಂಕುರವಾಗದು
ಕ್ರೀಯಲ್ಲಿ ಆಚರಿಸಿ ಅರಿವಿನಲ್ಲಿ ವಿಶ್ರಮಿಸಿ
ತುರೀಯ ಆತುರ ಸಮನವೆಂಬ
ತ್ರಿವಿಧ ಲೇಪವಾಗಿ ಕಂಡ ಉಳುಮೆ
ಅರ್ಕೇಶ್ವರಲಿಂಗನ ಅರಿಕೆ

೮೬೭
ಮೊನೆ ತಪ್ಪಿದ ಬಳಿಕ ಅಲಗೇನ ಮಾಡುವುದು
ವಿಷ ತಪ್ಪಿದ ಬಳಿಕ ಹಾವೇನ ಮಾಡುವುದು
ಭಾಷೆ ತಪ್ಪಿದ ಬಳಿಕ ದೇವಾ
ಬಲ್ಲಿದ ಭಕ್ತನೇನ ಮಾಡುವನು
ಭಾಷೆ ತಪ್ಪಿದ ಬಳಿಕ
ಪ್ರಾಣದಾಸೆಯನು ಹಾರಿದಡೆ
ಮೀಸಲನು ಸೊಣಗ ಮುಟ್ಟಿದಂತೆ
ಕೂಡಲಸಂಗಮದೇವಾ

೮೬೮
ಮೊಲೆ ಬಿದ್ದು ಮುಡಿ ಸಡಿಲಿ ಗಲ್ಲ ಬತ್ತಿ ತೋಳು ಕಂದಿದವಳ
ಎನ್ನನೇಕೆ ನೋಡುವಿರಿ ಎಲೆ ಅಣ್ಣಗಳಿರಾ
ಕುಲವಳಿದು ಛಲವಳಿದು ಭವಗೆಟ್ಟು ಭಕ್ತೆಯಾದವಳ
ಎನ್ನನೇಕೆ ನೋಡುವಿರಿ ಎಲೆ ತಂದೆಗಳಿರಾ
ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದು ಛಲವಳಿದವಳು

೮೬೯
ಮೊಲೆ ಮುಡಿ ಬಂದಡೆ ಹೆಣ್ಣೆಂಬರು
ಗಡ್ಡ ಮೀಸೆ ಬಂದಡೆ ಗಂಡೆಂಬರು
ನಡುವೆ ಸುಳಿವ ಆತ್ಮನು
ಹೆಣ್ಣೂ ಅಲ್ಲ ಗಂಡು ಅಲ್ಲ ಕಾಣಾ
ರಾಮನಾಥ

೮೭೦
ಮೊಲೆ ಮುಡಿ ಮುದ್ದು ಮುಖದ ಅಸಿಯ ನಡುವಿನವಳ ಕಂಡಡೆ
ಬ್ರಹ್ಮಚಾರಿಯಾದಡೇನು ಮನದಿ ಅಳುಪದಿಪ್ಪನೆ
ತನುವಿನ ಮೇಲೆ ಬ್ರಹ್ಮಚಾರಿತ್ರವಳವಟ್ಟಡೇನು
ಮನದ ಮೇಲೆ ಬ್ರಹ್ಮಚಾರಿತ್ರವಳವಡದನ್ನಕ್ಕ
ಸಕಲೇಶ್ವರದೇವ ನೀ ಅರ್ಧನಾರಿಯಲ್ಲವೆ

೮೭೧

ರತ್ನದ ಸಂಕೋಲೆಯಾದಡೆ ತೊಡರಲ್ಲವೆ
ಮುತ್ತಿನ ಬಲೆಯಾದಡೆ ಬಂಧನವಲ್ಲವೆ
ಚಿನ್ನದ ಕತ್ತಿಯಲ್ಲಿ ತಲೆಹೊಯ್ದಡೆ ಸಾಯದಿರ್ಪ್ಪರೆ
ಲೋಕದ ಭಜನೆಯ ಭಕ್ತಿಯಲ್ಲಿ ಸಿಲುಕಿದಡೆ
ಜನನ ಮರಣ ಬಿಡುವುದೆ ಚೆನ್ನಮಲ್ಲಿಕಾರ್ಜುನಾ

೮೭೨

ರೂಪನೆ ಕಂಡರು
ನಿರೂಪನೆ ಕಾಣರು
ತನುವನೆ ಕಂಡರು
ಅನುವನೆ ಕಾಣರು
ಆಚಾರವನೆ ಕಂಡರು
ವಿಚಾರವನೆ ಕಾಣರು
ಗುಹೇಶ್ವರ
ನಿಮ್ಮ ಕುರುಹನೆ ಕಂಡು
ಕೂಡಲರಿಯದೆ ಕೆಟ್ಟರು

೮೭೩

ರೂಪಿಂಗೆ ಕೇಡುಂಟು
ನಿರೂಪಿಂಗೆ ಕೇಡಿಲ್ಲ
ರೂಪ ನಿರೂಪಿನೊಳೊಡಗೂಡುವ ಪರಿಯೆಂತು ಹೇಳಾ
ಸಂಬಂಧ ಅಸಂಬಂಧವಾಗಿದೆ
ಪಂಚೇಂದ್ರಿಯವೆಂಬ ಜಾತಿಸೂತಕವಿರಲು
ಗುಹೇಶ್ವರಲಿಂಗವ ಮುಟ್ಟ ಬಾರದು [ಕೇಳವ್ವಾ]

೮೭೪

ರೂಪಿಂಗೆ ನಿರೂಪೆಂದು ಕುರುಹಿಟ್ಟುಕೊಂಡಿಪ್ಪರು
ರೂಪಿನೊಳಗೆ ತಿರುಗಾಡುವ ನಿರೂಪೆಂದರಿಯದೆ
ರೂಪಡಗಿದಲ್ಲಿ ಹಿಡಿದೆ ಬಿಟ್ಟೆನೆಂಬ ಸಂದೇಹವಡಗಿತ್ತು
ಅಡಗುವನ್ನಬರ ತಾನೆ ಕುರುಹೆ

ಬೇವಿಂಗೆ ಕಹಿ ಬೆಲ್ಲಕೆ ಸಿಹಿ ಇವ ಎರಡಳಿದಲ್ಲಿ
ನಾನೀನೆಂಬನ್ನಕ್ಕ ಏನೂ ಎನಲಿಲ್ಲ
ಅದು ನಾಮ ನಷ್ಟವಾಗೆ ಆದಲ್ಲಿ
ಅದೆ ಕಳೆಬೆಳಗು ತೋರುತ್ತದೆ
ಸದಾಶಿವಮೂರ್ತಿಲಿಂಗದಲ್ಲಿ

೮೭೫
ರೇಖೆ ರೇಖೆ ಕೂಡಿದಲ್ಲಿ ಅಕ್ಷರವಾದುವು
ಅಕ್ಷರಾಕ್ಷರ ಕೂಡಿದಲ್ಲಿ ಶಬ್ದವಾಯಿತ್ತು
ಶಬ್ದ ಶಬ್ದ ಕೂಡಿದಲ್ಲಿ ಗ್ರಂಥಾನ್ವಯವಾಯಿತ್ತು
ಅಕ್ಷರದಲ್ಲಿಲ್ಲ ಶಬ್ದದಲ್ಲಿಲ್ಲ ಗ್ರಂಥಾನ್ವಯದಲ್ಲಿಲ್ಲ
ಏನೆಂಬುದಿಲ್ಲ ಮೊದಲೆ ಇಲ್ಲ
ಇಲ್ಲೆಂಬುವ ಅಹುದೆಂಬುವ ಉಭಯ ಶಬ್ದಕ್ಕೆ ಲೋಪವಿಲ್ಲ
ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ ಮಹಾಮಹಿಮನು

೮೭೬
ಲಕ್ಷದ ಮೇಲೆ ತೊಂಬತ್ತಾರು ಸಾವಿರ ವಚನ
ನಿತ್ಯಭಂಡಾರಕ್ಕೆ ಸಂದಿತ್ತಯ್ಯಾ
ಬೆಟ್ಟಕ್ಕೆ ಬಳ್ಳು ಬಗುಳಿದಂತಾಯಿತ್ತಯ್ಯ
ಕರೆದುಕೊಳ್ಳಯ್ಯಾ
ಕರೆದುಕೊಳ್ಳಯ್ಯಾ
ಓ ಎನ್ನಯ್ಯಾ
ಓ ಎನ್ನಯ್ಯಾ
ಕೂಡಲ ಸಂಗಮದೇವ

೮೭೭
ಲತೆ ಹಲವು ಶಾಖೆಯಲ್ಲಿ ಹರಿದು ಸುತ್ತಿದಡೆ
ಮೂಲವ ಕಿತ್ತಲ್ಲಿಯೆ ಹಲವು ಬಳ್ಳಿ ಒಣಗುವಂತೆ
ಸ್ಥಲ ಕುಳಂಗಳು ಭಿನ್ನಭಾವವಾಗಿ ತೋರುವ ಇರವು
ಅರಿತಲ್ಲಿಯೇ ನಷ್ಟವಾಯಿತ್ತು
ಏಣಾಂಕಧರ ಸೋಮೇಶ್ವರಲಿಂಗ ತಾನು ತಾನೆ

೮೭೮
ಲಿಂಗ ಒಳಗೋ ಹೊರಗೋ
ಬಲ್ಲಡೆ ನೀವು ಹೇಳಿರೆ
ಲಿಂಗ ಎಡನೋ ಬಲನೋ
ಬಲ್ಲಡೆ ನೀವು ಹೇಳಿರೆ
ಲಿಂಗ ಮುಂದೋ ಹಿಂದೋ
ಬಲ್ಲಡೆ ನೀವು ಹೇಳಿರೆ
ಲಿಂಗ ಸ್ಥೂಲವೋ ಸೂಕ್ಷ್ಮವೋ
ಬಲ್ಲಡೆ ನೀವು ಹೇಳಿರೆ
ಲಿಂಗ ಪ್ರಾಣವೋ ಪ್ರಾಣ ಲಿಂಗವೋ
ಬಲ್ಲಡ ನೀವು ಹೇಳಿರೆ ಗುಹೇಶ್ವರಲಿಂಗವನು

೮೭೯
ಲಿಂಗವಿಡಿದು ಅರಿದರಿವು ಅರಿವಲ್ಲ
ಗುರುವಿಡಿದು ಅರಿದರಿವು ಅರಿವಲ್ಲ
ಗುರುವಿಡಿದು ಲಿಂಗ ಉಂಟೆಂಬುದು ಕಲ್ಪಿತ
ತನ್ನಿಂದ ತಾನಹುದಲ್ಲದೆ
ಗುಹೇಶ್ವರಲಿಂಗದಲ್ಲಿ ಹಂಗು ಹರಿಯದನ್ನಕ್ಕರ
ತಾನಾಗಬಾರದು ಕಾಣಾ [ಚೆನ್ನಬಸವಣ್ಣ]

೮೮೦
ಲೇಸ ಕಂಡು ಮನ ಬಯಸಿ ಬಯಸಿ ಆಸೆ ಮಾಡಿದಡಿಲ್ಲ
ಕಂಡಯ್ಯಾ
ತಾಳಮರಕ್ಕೆ ಕೈಯ ನೀಡಿ
ಮೇಲೆ ನೋಡಿ ಗೋಣು ನೊಂದುದಯ್ಯಾ
ಕೂಡಲಸಂಗಮದೇವಾ
ಕೇಳಯ್ಯಾ
ನೀನೀವ ಕಾಲಕ್ಕಲ್ಲದಿಲ್ಲ
ಕಂಡಯ್ಯಾ

೮೮೧
ಲೋಕ ತನ್ನೊಳಗಾದ ಬಳಿಕ
ಲೋಕದ ಸೊಮ್ಮುತನಗೇಕಯ್ಯಾ
ಪರುಷ ತಾನಾದ ಬಳಿಕ
ಸುವರ್ಣದ ಸೊಮ್ಮು ತನಗೇಕಯ್ಯಾ
ಧೇನು ತಾನಾದ ಬಳಿಕ
ಅನ್ಯಗೋವಿನ ಸೊಮ್ಮು ತನಗೇಕಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ

೮೮೨
ಲೋಕದ ಚೇಷ್ಟೆಗೆ ರವಿ ಬೀಜವಾದಂತೆ
ಕರಣಂಗಳ ಚೇಷ್ಟೆಗೆ ಮನವೇ ಬೀಜ
ಎನಗುಳ್ಳುದೊಂದು ಮನ
ಆ ಮನ ನಿಮ್ಮಲ್ಲಿ ಸಿಲುಕಿದ ಬಳಿಕ
ಎನಗೆ ಭವವುಂಟೆ ಚೆನ್ನಮಲ್ಲಿಕಾರ್ಜುನಾ

೮೮೩
ಲೋಕದ ಡೊಂಕ ನೀವೇಕೆ ತಿದ್ದುವಿರಿ
ನಿಮ್ಮ ನಿಮ್ಮ ತನುವ
ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ
ಸಂತೈಸಿಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ
ಕೂಡಲಸಂಗಮದೇವ

೮೮೪
ಲೋಕದವರನೊಂದು ಭೂತ ಹಿಡಿದರೆ
ಆ ಭೂತದಿಚ್ಛೆಯಲ್ಲಿ ನುಡಿವುತ್ತಿಪ್ಪರು
ಲಾಂಛನಧಾರಿ ವೇಷವ ಧರಿಸಿ
ಆಶೆಯಿಂದ ಘಾಸಿಯಾಗಲೇಕಯ್ಯ
ಆನೆಯ ಚೋಹವ ತೊಟ್ಟು

ನಾಯಾಗಿ ಬೊಗಳುವ
ಮಾನವರನೇನೆಂಬೆ
ಗುಹೇಶ್ವರ

**೮೮೫**

ಲೋಕವ ತಾ ಹೇಸಿದ ಬಳಿಕ
ತನ್ನ ಲೋಕ ಹೇಸುವಂತಿರಬೇಕು
ಲೋಕದ ಚಾರಿತ್ರ ಶೃಂಗಾರವ ತಾ ಹೇಸಿದ ಬಳಿಕ
ತನ್ನ ಚಾರಿತ್ರ ಶೃಂಗಾರವ ಲೋಕ ಕಂಡು ಹೇಸುವಂತಿರಬೇಕು
ದೇಹಗುಣರಹಿತವಾದ ವಿರಕ್ತಿ
ಜ್ಞಾನಕ್ಕೆ ಇದೇ ಯುಕ್ತಿ
ಈ ಯುಕ್ತಿಯ ತಿಳಿದಡೆ ಅದೇ ಮುಕ್ತಿ
ಸಿಮ್ಮಲಿಗೆಯ ಚೆನ್ನರಾಮಾ

**೮೮೬**

ಲೋಕವ ಹಿಡಿದು ಲೋಕದ ಸಂಗದಂತಿಪ್ಪೆ
ಆಕಾರವಿಡಿದು ಸಾಕಾರಸಹಿತ ನಡೆವೆ
ಹೊರಗೆ ಬಳಸಿ ಒಳಗೆ ಮರದಿಪ್ಪೆ
ಬೆಂದನುಲಿಯಂತೆ ಹುರಿಗುಂದದಿಪ್ಪೆ
ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಾ
ಹತ್ತರೊಳಗೆ ಹನ್ನೊಂದಾಗಿ ನೀರತಾವರೆಯಂತಿಪ್ಪೆ

**೮೮೭**

ಲೋಕಾಂತವಳಿದು ಏಕಾಂತ ಉಳಿದಲ್ಲಿ
ಏಕೈಕಮೂರ್ತಿಯ ಸಂಗ ಸಮನಿಸಿತ್ತೆನಗೆ
ಎನ್ನ ನುಡಿ ಆತನ ಕಿವಿಗೆ ಇನಿದಾಯಿತ್ತು
ಆತನ ನುಡಿ ಎನ್ನ ಕಿವಿಗೆ ಇನಿದಾಯಿತ್ತು
ಇಬ್ಬರ ನುಡಿಯೂ ಒಂದೇಯಾಗಿ ನಿಶ್ಶಬ್ದ ವೇಧಿಸಿತ್ತು
ಈ ಸುಖದ ಸೋಂಕಿನ ಪುಣ್ಯದ ಫಲದಿಂದ
ಅನುಪಮಚರಿತ್ರ ಪ್ರಭುದೇವರ ನಿಲವ ಕಂಡು
ನಾನು ಧನ್ಯನಾದೆನು ಕಾಣಾ
ಏಕಾಂತ ವೀರಸೊಡ್ಡಳಾ

೮೮೮

ವಚನದಲ್ಲಿ ನಾಮಾಮೃತ ತುಂಬಿ
ನಯನದಲ್ಲಿ ಮೂರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ
ಕಿವಿಯಲ್ಲಿ ಕೀರುತಿ ತುಂಬಿ
ಕೂಡಲಸಂಗಮದೇವಾ
ನಿಮ್ಮ ಚರಣಕಮಲದೊಳಗಾನು ತುಂಬಿ

೮೮೯

ವಚನರಚನೆಯ ಅನುಭಾವವ ಬಲ್ಲೆವೆಂದೆಂಬರು
ವಚನವಾವುದು ರಚನೆಯಾವುದು ಅನುಭಾವವಾವುದು
ಹೇಳಿರಣ್ಣಾ
ವಚನ
ಆತ್ಮತುಷ್ಟಿಯನರಿಯ ಬಲ್ಲಡೆ
ರಚನೆ
ಸ್ಥಾವರ ಜಂಗಮದಲ್ಲಿ ದಯವಾಗಿರಲ್ಲಡೆ
ಅನುಭಾವ
ಇಂತಲ್ಲದೆ
ಅರಿಷಡ್ವರ್ಗಂಗಳ ಇಚ್ಛೆಗೆ ಹರಿಯದಿರಬಲ್ಲಡೆ
ನಾಲ್ಕು ವೇದಶಾಸ್ತ್ರಂಗಳ ಬಲ್ಲೆನೆಂದು ನುಡಿವಾತನನುಭಾವಿಯೆ
ಅಲ್ಲ ಅವು ಬ್ರಹ್ಮನೆಂಜಲು
ಇದನರಿಯದೆ ವಿದ್ಯಾಭ್ಯಾಸವ ಬಲ್ಲೆನೆಂದು
ನುಡಿವಾತನನುಭಾವಿಯೆ
ಅಲ್ಲ ಆತನು ಇದಿರ ನಂಬಿಸಿ ಉಂಬ ಉದರಪೋಷಕನಯ್ಯಾ
ಕೂಡಲಚೆನ್ನಸಂಗಮದೇವಾ

೮೯೦

ವಚನಾನುಭವ ವಾಗ್ರಚನೆಯಲ್ಲ ಮನವೆ
ವಚನಾನುಭವ ವಾಗ್ರಚನೆಯಲ್ಲ
ವಚನಾನುಭವೋ ವಚೋ ನ
ಎಂಬುದು ಶ್ರುತಿಸಿದ್ಧ ನೋಡಾ
ಕಪಿಲಸಿದ್ಧಮಲ್ಲಿಕಾರ್ಜುನ

೮೯೧
ವಚನಾರ್ಥವ ಕಂಡಹರೆಂದು
ರಚನೆಯ ಮರೆಮಾಡಿ ನುಡಿಯಲೇತಕ್ಕೆ
ದಾರಿಯಲ್ಲಿ ಸರಕು ಮರೆಯಲ್ಲದೆ
ಮಾರುವಲ್ಲಿ ಮರೆ ಉಂಟೆ
ತಾನರಿವಲ್ಲಿ ಮರೆಯಲ್ಲದೆ
ಬೋಧೆಗೆ ಮರೆಯಿಲ್ಲ ಎಂದನಂಬಿಗ ಚೌಡಯ್ಯ

೮೯೨
ವನದ ಕೋಗಿಲೆ ಮನೆಗೆ ಬಂದಡೆ
ತನ್ನ ವನವ ನೆನೆವುದ ಮಾಣ್ಬುದೆ
ಮಲೆಯ ಗಜ ಮನೆಗೆ ಬಂದಡೆ
ತನ್ನ ಮಲೆಯ ನೆನೆವುದ ಮಾಣ್ಬುದೆ
ಕೂಡಲಸಂಗನ ಶರಣರು ಮರ್ತ್ಯಕ್ಕೆ ಬಂದಡೆ
ತಮ್ಮ ಆದಿಮಧ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೇ

೮೯೩
ವನವೆಲ್ಲಾ ನೀನೆ
ವನದೊಳಗಣ ದೇವತರುವೆಲ್ಲಾ ನೀನೆ
ತರುವಿನೊಳಗಾಡುವ ಖಗಮೃಗವೆಲ್ಲಾ ನೀನೆ
ಚೆನ್ನಮಲ್ಲಿಕಾರ್ಜುನಾ ಸರ್ವಭರಿತನಾಗಿ
ಎನಗೇಕೆ ಮುಖದೋರೆ

೮೯೪
ವಸುಧೆಯಿಲ್ಲದ ಬೆಳಸು
ರಾಜಾನ್ನದ ಹೆಸರಿಲ್ಲದ ಓಗರ
ವೃಷಭ ಮುಟ್ಟದ ಹಯನು
ಬೆಣ್ಣೆಯ ಹೊಸೆವರಿಲ್ಲದೆ ಕಂಡುಂಡೆ
ಶಿಶು ಕಂಡ ಕನಸಿನಂತೆ
ಗುಹೇಶ್ವರನೆಂಬುದು ಹೆಸರಿಲ್ಲದ ಬಯಲು

೮೯೫

ವಸ್ತುಕ ವರ್ಣಕ ತ್ರಿಸ್ಥಾನದ ಮೇಲೆ ನುಡಿವ ನುಡಿಗಳು
ಇತ್ತಿತ್ತಲಲ್ಲದೆ ಅತ್ತತ್ತಲಾರು ಬಲ್ಲರು
ಇವರೆತ್ತಲೆಂದರಿಯರು ಗಿಳಿವಿಂಡುಗೆಡೆವರು
ನಿಮ್ಮನೆತ್ತ ಬಲ್ಲರು ಗುಹೇಶ್ವರ

೮೯೬

ವಾದ್ಯಕ್ಕೆ ಬಂಧವಲ್ಲದೆ
ನಾದಕ್ಕೆ ಬಂಧವುಂಟೆ
ಅರಿವಿಂಗೆ ಬಂಧವಲ್ಲದೆ
ಅರುಹಿಸಿಕೊಂಬವಂಗುಂಟೆ ಬಂಧ
ಅರಿದೆಹೆನೆಂಬ ಭ್ರಮೆ
ಅರುಹಿಸಿಕೊಂಡೆಹೆನೆಂಬ ಕುರುಹು
ಉಭಯನಾಸ್ತಿಯಾಗಿಯಲ್ಲದೆ ಭಾವಶುದ್ಧವಿಲ್ಲ
ಕಾಮಧೂಮ ಧೂಳೇಶ್ವರಾ

೮೯೭

ವಾಯದ ಪಿಂಡಿಗೆ ಮಾಯದ ದೇವರಿಗೆ
ವಾಯಕ್ಕೆ ಕಾಯವ ಬಳಲಿಸದೆ ಪೂಜಿಸಿರೋ
ಕಟ್ಟುಗುಂಟಕ್ಕೆ ಬಂದ ದೇವರ ಪೂಜಸಿಲು
ಸೂಜಿಯ ಪೋಣಿಸಿ ದಾರವ ಮರದಡೆ
ಹೊಲಿಗೆ ಬಿಚ್ಚಿತ್ತು
ಗುಹೇಶ್ವರ

೮೯೮

ವಾಯದ ರಾಸಿಗೆ ಮಾಯದ ಕೊಳಗ
ಅಳೆವುದು ನೆಳಲು ಹೊಯಿವುದು ಬಯಲು
ತುಂಬಿಹೆನೆಂದಡೆ ತುಂಬಲು ಬಾರದು
ತುಂಬಿದ ರಾಸಿಯ ಕಾಣಲು ಬಾರದು
ಅಳತೆಗೆ ಬಾರದು ಹೊಯ್ಲಿಗೊಳಗಾಗದು
ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ
ಮಿಗೆ ಬಯಲು

೯೯೯

ವಾಯು ಬಯಲೆಂದಡೆ
ತರುಗಿರಿಗಳೊದರುವ ಪರಿಯಿನ್ನೆಂತೊ
ನಾದ ಬಯಲೆಂದಡೆ ಶಬ್ದ ಬಯಲಹ ಪರಿಯಿನ್ನೆಂತೊ
ತನ್ಮಯವೆಲ್ಲವೂ ರೂಪು
ಏಣಾಂಕಧರ ಸೋಮೇಶ್ವರಲಿಂಗ ಸ್ವರೂಪಾಗಿ
ಜಗದಲ್ಲಿ ಇಹನ್ನಬರ

೯೦೦

ವಿಚಾರವೆಂಬುದು ಸಂದೇಹಕ್ಕೊಳಗು
ನೋಡಾ
ವಿಚಾರಿಸುವನ್ನಕ್ಕರ ನೀ ನಾನೆಂಬುದನೆತ್ತ ಬಲ್ಲೆ
ಮರುಳೆ
ವಾಙ್ಮನೋತೀತವಾದ ಘನವು ವಿಚಾರಕ್ಕೆ ನಿಲುಕುವುದೇ
ಗೊಹೇಶ್ವರಲಿಂಗವು ತನ್ನ ತಿಳಿದು
ನೋಡಿಹೆನೆಂಬವರ ವಿಚಾರವೆಂಬ ಬಲೆಯಲ್ಲಿ ಕೆಡಹಿದನು

೯೦೧

ವಿಶ್ವಮಯ ರೂಪು ನೀನಾಗಿ ಅರಿವ ಆತ್ಮ ಒಬ್ಬನಲ್ಲಿಯೇ ಅಡಗಿದೆಯಲ್ಲಾ
ಬೀಗದ ಎಸಳು ಹಲವಾದಡೇನು
ಒಂದು ದ್ವಾರದಲ್ಲಿ ಅಡಗಿ ಓತಂತೆ ಇಪ್ಪ ತೆರ ನೀನಾಗಿ
ಭಕ್ತರ ಚಿತ್ತದಲ್ಲಿ ನಿಶ್ಚಯನಾದೆ
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೆ

೯೦೨

ವಿಷ ಕೊಲುವಲ್ಲಿ ಹಾವೇನ ಮಾಡುವುದು
ಉಂಬ ಅನ್ನ ನಂಜಾಗಿಹಲ್ಲಿ ಇಕ್ಕಿದವಳಿಗೆ ಅಂಜಿಕೆಯುಂಟೆ
ತನ್ನ ಇಂದ್ರಿಯ ತನ್ನ ತಿಂಬಲ್ಲಿ
ವಸ್ತುವಿನ ಮೇಲೆ ಹಂಗ ಹಾಕುವ ಭಂಡರಿಗೆ ಇಲ್ಲಾ ಎಂದೆ
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಲಿಂಗವು

೯೦೩

ವಿಷಕ್ಕೆ ಅಂಜುವರಲ್ಲದೆ
ಸರ್ಪಂಗೆ ಅಂಜುವರುಂಟೆ
ಕೊಲುವ ವ್ಯಾಘ್ರಂಗೆ ಅಂಜುವರಲ್ಲದೆ
ಸುಲಿದ ಬಣ್ಣಕ್ಕೆ ಅಂಜುವರುಂಟೆ
ಅರಿವು ಸಂಪನ್ನರಲ್ಲಿ ಇದಿರೆಡೆಯಡಗಬೇಕಲ್ಲದೆ
ಬರುಕಾಯದ ದರುಶನ ಬಿರುಬರಲ್ಲಿ ಉಂಟೆ
ನೆರೆಯರಿವಿನ ಹೊಲಬು ಕಾಯಕಾಂಡ ಕರ್ಮಕಾಂಡಿಗಳಲ್ಲಿ
ಜ್ಞಾನಹೀನ ಪಾಷಂಡಿಗಳಲ್ಲಿ ಆವ ಭಾವದ ಮಾರ್ಗವನು
ನಿಧಾನಿಸಿ ಉಪೇಕ್ಷಿಸಲಿಲ್ಲ
ಗೋರಕ್ಷಪಾಲಕ ಮಹಾಪ್ರಭು
ಸಿದ್ಧಸೋಮನಾಥ ಲಿಂಗವನರಿದವರಲ್ಲಿಯಲ್ಲದೆ

೯೦೪

ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸಿದೆಯಯ್ಯಾ
ಪಶುವೇನ ಬಲ್ಲುದು
ಹಸುರೆಂದೆಳಸುವುದು
ವಿಷಯರಹಿತನ ಮಾಡಿ
ಭಕ್ತಿರಸವ ದಣಿಯೆ ಮೇಯಿಸಿ
ಸುಬುದ್ಧಿಯೆಂಬ ಉದಕವನೆರೆದು
ನೋಡಿ ಸಲಹಯ್ಯಾ
ಕೂಡಲಸಂಗಮದೇವಾ

೯೦೫

ವೀರನಾದಡೆ
ಅಲಗಿನ ಮೊನೆಯಲ್ಲಿ ಕಾಣಬಹುದು
ಧೀರನಾದಡೆ
ತನ್ನ ಸೋಂಕಿದಲ್ಲಿ ಅರಿಯಬಹುದು
ಭಕ್ತನಾದಡೆ
ತಾಗು ನಿರೋಧದಲ್ಲಿ ಅರಿಯಬಹುದು

ಕೂಡಲಚೆನ್ನಸಂಗಯ್ಯಾ
ಸುಜ್ಞಾನಿಯಾದರೆ
ಸುಳುಹಿನಲ್ಲಿ ಅರಿಯಬಹುದು

೯೦೬

ವೃಕ್ಷ ಎಲೆಗಳೆವುದಲ್ಲದೆ
ತರುವಿನ ಸಲೆ ನೆಲೆ ಸಾರಗಳದು ಫಲಿಸುವುದುಂಟೆ
ಅಂಗದಲ್ಲಿ ಸೋಂಕಿದ ಮರವೆಯ ಕಳೆಯಬಹುದಲ್ಲದೆ
ಮನ ವಚನ ಕಾಯ ತ್ರಿಕರಣದಲ್ಲಿ ವೇಧಿಸಿದ
ಮರವೆಯ ಹರಿವ ಪರಿಯಿನ್ನೆಂತೊ
ಉರಿ ವೇಧಿಸಿದ ತರುವಿನಂತೆ ಅದಕ್ಕೆ ಪರಿಹರವಿಲ್ಲ
ಅರಿದು ಮಾಡುವ ದೋಷಕ್ಕೆ ಪಡಿಪುಚ್ಚವಿಲ್ಲ
ಆ ಭೇದವನರಿದು ಹರಿಯಬೇಕು
ಚನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗದಲ್ಲಿ

೯೦೭

ವೇದ ಪ್ರಮಾಣಲ್ಲ ಶಾಸ್ತ್ರ ಪ್ರಮಾಣಲ್ಲ
ಶಬ್ದ ಪ್ರಮಾಣಲ್ಲ ಕಾಣಿಭೋಲಿಂಗಕ್ಕೆ
ಅಂಗಸಂಗದ ಮಧ್ಯದಲ್ಲಿದ್ದುದ
ಬೈಚಿಟ್ಟು ಬಳಸಿದ ಗುಹೇಶ್ವರ ನಿಮ್ಮ ಶರಣ

೯೦೮

ವೇದ ವೇಧಿಸಲರಿಯದೆ ಕೆಟ್ಟವು
ಶಾಸ್ತ್ರ ಸಾಧಿಸಲರಿಯದೆ ಕೆಟ್ಟವು
ಪುರಾಣ ಪೂರೈಸಲರಿಯದೆ ಕೆಟ್ಟವು
ಹಿರಿಯರು ತಮ್ಮ ತಾವರಿಯದೆ ಕೆಟ್ಟರು
ತಮ್ಮ ಬುದ್ಧಿ ತಮ್ಮನೆ ತಿಂದಿತ್ತು
ನಿಮ್ಮನೆತ್ತ ಬಲ್ಲರು ಗುಹೇಶ್ವರ

೯೦೯

ವೇದ ಶಾಸ್ತ್ರ ಆಗಮ ಪುರಾಣಗಳೆಲ್ಲವು
ಕೊಟ್ಟಣವ ಕುಟ್ಟಿದ ನುಚ್ಚು ತೌಡು

ಕಾಣಿಭೋ
ಇವ ಕುಟ್ಟಲೇಕೆ ಕುಸುಕಲೇಕೆ
ಅತ್ತಲಿತ್ತ ಹರಿವ ಮನದ ಶಿರವನರಿದಡೆ
ಬಚ್ಚಬರಿಯ ಬಯಲು ಚೆನ್ನಮಲ್ಲಿಕಾರ್ಜುನ

೯೧೦
ವೇದ ಶಾಸ್ತ್ರಕ್ಕೆ ಹಾರುವನಾಗಿ
ವೀರ ವಿತರಣಕ್ಕೆ ಕ್ಷತ್ರಿಯನಾಗಿ
ಸರ್ವವನಾರೈದು ನೋಡುವಲ್ಲಿ
ವೈಶ್ಯನಾಗಿ ವ್ಯಾಪಾರದೊಳಗಾಗಿ
ಕೃಷಿಯ ಮಾಡುವುದಕ್ಕೆ ಶೂದ್ರನಾಗಿ
ಇಂತೀ ಜಾತಿಗೋತ್ರದೊಳಗಾದ ನೀಚ ಶ್ರೇಷ್ಠವೆಂಬ
ಎರಡು ಕುಲವಲ್ಲದೆ
ಹೊಲೆ ಹದಿನೆಂಟುಜಾತಿಯೆಂಬ ಕುಲವಿಲ್ಲ
ಬ್ರಹ್ಮವನರಿದಲ್ಲಿ ಬ್ರಾಹ್ಮಣ
ಸರ್ವಜೀವಹತ ಕರ್ಮಕ್ಕೊಳಗಾಗಿದ್ದಲ್ಲಿ ಸಮಗಾರ
ಈ ಉಭಯವನರಿದು ಮರೆಯಲಿಲ್ಲ
ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ
ಅರಿ ನಿಜಾತ್ಮ ರಾಮ ರಾಮನಾ

೯೧೧
ವೇದ ಶಾಸ್ತ್ರವನೋದುವುದಕ್ಕೆ ಹಾರುವನಲ್ಲ
ಇರಿದು ಮೆರೆವುದಕ್ಕೆ ಕ್ಷತ್ರಿಯನಲ್ಲ
ವ್ಯವಹರಿಸುವುದಕ್ಕೆ ವೈಶ್ಯನಲ್ಲ
ಉಳುವ ಒಕ್ಕಲಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯಾ
ಕಾಮಭೀಮ ಜೀವಧನದೊಡೆಯ ನೀನೆ ಬಲ್ಲೆ

೯೧೨
ವೇದ ಹುಟ್ಟುವುದಕ್ಕೆ ಮುನ್ನವೆ ಓದಿದವರಾರು
ಶಾಸ್ತ್ರ ಹುಟ್ಟುವುದಕ್ಕೆ ಮುನ್ನವೆ ಕಲಿತವರಾರು
ಪುರಾಣ ಹುಟ್ಟುವುದಕ್ಕೆ ಮುನ್ನವೆ ಕೇಳಿದವರಾರು

ಉತ್ಪತ್ತಿ ಸ್ಥಿತಿ ಲಯಕ್ಕೆ ಮುನ್ನವೆ ನಾನೆಂಬವರಾರು
ಮನಸಂದ ಮಾರೇಶ್ವರಾ

೯೧೩
ವೇದಕ್ಕೆ ಒರೆಯ ಕಟ್ಟುವೆ
ಶಾಸ್ತ್ರಕ್ಕೆ ನಿಗಳವನಿಕ್ಕುವೆ
ತರ್ಕದ ಬೆನ್ನ ಬಾರನೆತ್ತುವೆ
ಆಗಮದ ಮೂಗ ಕೊಯಿವೆ
ನೋಡಯ್ಯಾ
ಮಹಾದಾನಿ ಕೂಡಲಸಂಗಮದೇವಾ
ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯಾ

೯೧೪
ವೇದವೆಂಬುದು ಓದಿನ ಮಾತು
ಶಾಸ್ತ್ರವೆಂಬುದು ಸಂತೆಯ ಸುದ್ದಿ
ಪುರಾಣವೆಂಬುದು ಪುಂಡರ ಗೋಷ್ಠಿ
ತರ್ಕವೆಂಬುದು ತಗರ ಹೋರಟೆ
ಭಕ್ತಿ ಎಂಬುದು ತೋರುಂಬ ಲಾಭ
ಗುಹೇಶ್ವರನೆಂಬುದು ಮೀರಿದ ಘನವು

೯೧೫
ವೇಷವ ತೊಟ್ಟಡೆ
ಜಗಕ್ಕಳುಕಲ್ಲದೆ ಎನಗಳುಕಿಲ್ಲ
ನೀ ಲಿಂಗವ ಕೊಟ್ಟಡೆ
ನೀ ನಿನ್ನನರಿದು
ನೀ ಭವಪಾಶಕ್ಕೆ ಹೊರಗಾಗಿ
ಎನ್ನ ಹೊರಗು ಮಾಡಬೇಕಲ್ಲದೆ
ಕುರುಡನ ಕಯ್ಯ ಕೋಲ ಕುರುಡಹಿಡಿದಂತೆ
ನೀ ಕರ್ತನಲ್ಲ
ನಾ ಭೃತ್ಯನಲ್ಲ
ನೀ ಮುಕ್ತನಲ್ಲ

ನಾ ಸತ್ಯನಲ್ಲ
ನಿಮ್ಮಯ ಚಿತ್ತ ನೊಂದಡೆ
ನಿಮ್ಮಲ್ಲಿಯೆ ಇರಲಿ
ಎನಗಾ ನೋವಿಲ್ಲ
ನೀನರಿದು ಬದುಕು
ಸದಾಶಿವಮೂರ್ತಿಲಿಂಗವಾಗಬಲ್ಲಡೆ

೯೧೬
ವ್ಯವಹಾರವ ಮಾಡಿದಲ್ಲಿ ಲಾಭವ ಕಾಣದಿರ್ದಡೆ
ಆ ವ್ಯವಹಾರವೇತಕ್ಕೆ
ಗುರುಲಿಂಗ ಜಂಗಮಕ್ಕೆ ಖ್ಯಾತಿಗೆ ಮಾಡಿದಡೆ
ಮೊದಲು ತಪ್ಪಿ ಲಾಭವನರಸುವಂತೆ
ಕಾಮಹರಪ್ರಿಯ ರಾಮನಾಥಾ

೯೧೭
ವ್ಯಾಧನ ಚಿತ್ತದಂತೆ
ಸಾಧನೆಯಯ್ಯನ ಮೈ ಲಾಗಿನಂತೆ
ಭೇದಿಸಿಯೈದುವ ಪನ್ನಗನಂತೆ
ಇಡುವ ತೊಡುವ ಕೊಡುವ ಕೊಂಬಲ್ಲಿ ಲಿಂಗಪ್ಪನ
ಒಡಗೂಡಬೇಕು
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ ಬೆಚ್ಚಂತಿರಬೇಕು

೯೧೮
ವ್ಯಾಧನೊಂದು ಮೊಲನ ತಂದಡೆ
ಸಲುವ ಹಾಗಕ್ಕೆ ಬಿಲಿವರಯ್ಯಾ
ನೆಲನಾಳ್ವನ ಹೆಣನೆಂದಡೆ
ಒಂದಡಕೆಗೆ ಕೊಂಬವರಿಲ್ಲ
ನೋಡಯ್ಯಾ
ಮೊಲನಿಂದ ಕರಕಷ್ಟ ನರನ ಬಾಳುವೆ
ಸಲೆ ನಂಬೊ ನಮ್ಮ ಕೂಡಲಸಂಗಮದೇವನ

೯೧೯

ವ್ಯಾಸ ಬೋಯಿತಿಯ ಮಗ
ಮಾರ್ಕಂಡೇಯ ಮಾತಂಗಿಯ ಮಗ
ಮಂಡೋದರಿ ಕಪ್ಪೆಯ ಮಗಳು
ಕುಲವನರಸದಿರಿಂ ಭೋ
ಕುಲದಿಂದ ಮುನ್ನೇನಾದಿರಿಂ ಭೋ
ಸಾಕ್ಷಾತ್ ಅಗಸ್ತ್ಯ ಕಬ್ಬಿಲ
ದುರ್ವಾಸ ಮುಚ್ಚಿಗ
ಕಶ್ಯಪ ಕಮ್ಮಾರ
ಕೌಂಡಿನ್ಯನೆಂಬ ಋಷಿ
ಮೂರು ಭುವನರಿಯದೆ ನಾವಿದ ಕಾಣಿ ಭೋ
ನಮ್ಮ ಕೂಡಲಸಂಗನ ವಚನವಿಂತೆಂದುದು
ಶ್ವಪಚೋಪಿಯಾದಡೇನು ಶಿವಭಕ್ತನೆ ಕುಲಜಂ ಭೋ

೯೨೦

ವ್ರತವೆಂಬ ಸೀಮೆಯ ವಿವರವೆಂತುಟೆಂದಡೆ
ಬೀಗಿ ಬೆಳೆದ ಹೊಲಕ್ಕೆ ಬೇಲಿಯ ಕಟ್ಟಿದಡೆ ಚೇಗೆಯುಂಟೆ
ಹಾವ ಪಶುವಿಂಗೆ ಮಾಣಿಸಿದಡೆ ದೋಷ ಉಂಟೆ
ಗಾವಿಲಂಗೆ ಭಾವದ ಬುದ್ಧಿಯ ಹೇಳಿದವಂಗೆ ನೋವುಂಟೆ
ಬೇವ ನೋವ ಕಾಯಕ್ಕೆ ಜೀವವೆಂಬ ಬೆಳಗೇ ವ್ರತ
ಭಾವವೆಂಬ ಬೇಲಿಯ ಸಾಗಿಸಿಕೊಳ್ಳಿ
ಲೂಟಿಗೆ ಮೊದಲೆ ಬಸವ ಚೆನ್ನಬಸವಣ್ಣ ಪ್ರಭುದೇವ ಮೊದಲಾಗಿ
ಶಂಕೆಗೆ ಮುನ್ನವೆ ಹೋದೆಹೆನೆಂಬ ಭಾವ ತೋರುತ್ತಿದೆ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ
ಏಲೇಶ್ವರದ ಗೊತ್ತು ಕೆಟ್ಟಿತ್ತು

೯೨೧

ವ್ರತವೆಂಬುದೇನು
ಮನವಿಕಾರಿಸುವುದಕ್ಕೆ ಕಟ್ಟಿದ ಗೊತ್ತು
ಜಗದ ಕಾಮಿಯಂತೆ ಕಾಮಿಸದೆ
ಜಗದ ಕ್ರೋಧಿಯಂತೆ ಕ್ರೋಧಿಸದೆ

ಜಗದ ಲೋಭಿಯಂತೆ ಲೋಭಿಸದೆ
ಮಾಯಾಮೋಹಂಗಳು ವರ್ಜಿತವಾಗಿ
ಮನಬಂದಂತೆ ಆಡದೆ ತನುಬಂದಂತೆ ಕೂಡದೆ
ವ್ರತದಂಗಕ್ಕೆ ಸಂಗವಾಗಿ ನಿಂದ ಸದ್ಭಕ್ತನ ಅಂಗವೆ
ಆಚಾರವೆ ಪ್ರಾಣವಾದ ರಾಮೇಶ್ವರಲಿಂಗದಂಗ

೯೨೨

ವ್ರತವೆಂಬುದೇನು ವಸ್ತುವ ಕಾಂಬುದಕ್ಕೆ ನಿಚ್ಚಣಿಕೆ
ವ್ರತವೆಂಬುದೇನು ಇಂದ್ರಿಯಗಳ ಸಂದಮುರಿವ ಕುಲಕುಠಾರ
ವ್ರತವೆಂಬುದೇನು ಸಕಲ ವ್ಯಾಪಕಕ್ಕೆ ದಾವಾನಳ
ವ್ರತವೆಂಬುದೇನು ಸರ್ವದೋಷನಾಶನ
ವ್ರತವೆಂಬುದೇನು ಚಿತ್ತಸುಯಿಧಾನದಿಂದ
ವಸ್ತುವ ಕಾಂಬುದಕ್ಕೆ ಕಟ್ಟಿದ ಗುತ್ತಗೆ
ವ್ರತವೆಂಬುದೇನು ಆಚಾರವೆ ಪ್ರಾಣವಾದ ರಾಮೇಶ್ವರಲಿಂಗವು
ಅವರಿಗೆ ತತ್ತಲಮಗನಾಗಿಪ್ಪನು

೯೨೩

ಶಬ್ದಸಂಭ್ರಮದಲ್ಲಿ ಹಿಂದುಗಾಣರು ಮುಂದುಗಾಣರು
ತಮ್ಮ ತಾವರಿಯರು
ಇದು ಕಾರಣ
ಮೂರು ಲೋಕವೆಲ್ಲವು ಬರುಸೂರೆವೋಯಿತ್ತು
ಗುಹೇಶ್ವರ

೯೨೪

ಶಬ್ದಿಯಾದಾತ ತರುಗಳ ಹೋತ
ನಿಶ್ಶಬ್ದಿಯಾದಾತ ಪಾಷಾಣದ ಹೋತ
ಕೋಪಿಯಾದಾತ ಅಗ್ನಿಯ ಹೋತ
ಶಾಂತನಾದಾತ ಜಲವ ಹೋತ
ಬಲ್ಲೆ ಬಲ್ಲೆನೆಂಬಾತ ಇಲ್ಲವೆಯ ಹೋತ
ಅರಿಯೆನೆಂಬಾತ ಪಶುವ ಹೋತ

ಇದು ಕಾರಣ ಅರಿಯೆನೆನ್ನದೆ ಬಲ್ಲೆನೆನ್ನದೆ
ಅರಿವಿನ ಕುರುಹನಳಿದುಳಿದು
ಗುಹೇಶ್ವರನೆಂಬ ಲಿಂಗವ ಹೋತವರನಾರನೂ ಕಾಣೆ

೯೨೫
ಶರಣ ತನ್ನ ಪ್ರಾರಬ್ಧಕರ್ಮ ತೀರಿದ ವಿಸ್ತಾರವನರಿದು
ಪ್ರಕಾಶಿಸುತ್ತಿದ ಕಾರಣ
ಶ್ವಾನ ಜಂಗಮರೂಪೆನಬೇಕಾಯಿತ್ತು
ಗಜ ಮಲೆಯಿಂದ ಪುರದಲ್ಲಿಗೆ ಬಂದು
ಆ ಪುರದಲ್ಲಿ ಎಷ್ಟು ಸುಖವಾಗಿದ್ದರೂ
ಮಿಗೆಮಿಗೆ ತನ್ನ ಮಲೆಯನೆ ನೆನೆವುತಿಪ್ಪುದು
ಆ ಜಂಗಮ ಮೊದಲು ಪರಬ್ರಹ್ಮದಿಂದ ದೇಹವಿಡಿದನಾಗಿ
ಆ ದೇಹದಲ್ಲಿ ಎಷ್ಟು ಸುಖವಾಗಿದ್ದರೆಯೂ
ಮಿಗೆಮಿಗೆ ಆ ಪರಬ್ರಹ್ಮವನೆ ನೆನೆವುತಿಹನು
ಇದು ಕಾರಣ ಶ್ವಾನ ಗಜ ಇವೆರಡೂ ಶರಣಂಗೆ
ಜಂಗಮಸ್ವರೂಪೆನಬೇಕಾಯಿತ್ತು
ಮನವೆ ಮರ್ಕಟ ಅರಿವೆ ಪಿಪೀಲಿಕ
ಮಹಾಜ್ಞಾನವೆ ವಿಹಂಗ
ನಿತ್ಯ ಎಚ್ಚರವೆ ಕುಕ್ಕುಟ
ತನ್ನ ತಾನರಿವುದೆ ಶ್ವಾನ
ತನ್ನ ಬುದ್ಧಿಯೆ ಗಜ
ಇಂತೀ ಷಡ್ವಿಧವ ಬಲ್ಲಾತನೆ ಬ್ರಹ್ಮಜ್ಞಾನಿ
ನಿಮ್ಮಾಣೆ ನಿಮ್ಮ ಪ್ರಮಥರಾಣೆ
ಗೊಹೇಶ್ವರಪ್ರಿಯ ಬಂಕಣ್ಣ ನಿಟ್ಟ ಮುಂಡಿಗೆಯನೆತ್ತುವರಿಲ್ಲ
ಬಸವಪ್ರಿಯ ಮಹಾಪ್ರಭುವೆ

೯೨೬
ಶರಣ ಸತಿ ಲಿಂಗ ಪತಿ ಎಂಬರು
ಶರಣ ಹೆಣ್ಣಾದ ಪರಿಯಿನ್ನೆಂತು
ಲಿಂಗ ಗಂಡಾದ ಪರಿಯಿನ್ನೆಂತು
ನೀರು ನೀರು ಕೂಡಿ ಬೆರೆದಲ್ಲಿ

ಭೇದಿಸಿ ಬೇರೆ ಮಾಡಬಹುದೆ
ಗಂಡು ಹೆಣ್ಣು ಯೋಗವಾದಲ್ಲಿ
ಆತುರ ಹಿಂಗೆ ಘಟ ಬೇರಾಯಿತ್ತು
ಇದು ಕಾರಣ
ಶರಣ ಸತಿ ಲಿಂಗ ಪತಿ ಎಂಬ ಮಾತು ಮೊದಲಿಂಗೆ
ಮೋಸ ಲಾಭಕ್ಕಧೀನವುಂಟೆ ಎಂದನಂಬಿಗ ಚೌಡಯ್ಯ

೯೨೭

ಶರೀರವುಳ್ಳನ್ನಕ್ಕ ನೆಳಲಿಲ್ಲದಿರಬಾರದು
ಭೂಮಿಯುಳ್ಳನ್ನಕ್ಕ ಆಕಾಶವಿಲ್ಲದಿರಬಾರದು
ನಾನುಳ್ಳನ್ನಕ್ಕ ನೀನಿಲ್ಲದಿರಬಾರದು
ಗುಹೇಶ್ವರಲಿಂಗವು ಶಕ್ತಿಗೊಳಗಾಯಿತ್ತಾಗಿ
ಬಚ್ಚಬರಿಯ ಬಯಲೆಂಬುದಕ್ಕೆ ಉಪಮಾನವಿಲ್ಲ

೯೨೮

ಶಾಸ್ತ್ರ ಪ್ರಮಾಣವೆಂಬ ಬೆಟ್ಟದಲ್ಲಿ
ವಾಚಾರಚನೆಯೆಂಬ ಹುಲಿ ಹುಟ್ಟಿ
ಅರಿದೆನೆಂಬ ಹಿರಿದಪ್ಪ ಬೆಟ್ಟದಲ್ಲಿ
ಗೆಲ್ಲ ಸೋಲವೆಂಬ ಮತ್ತಗಜ ಹುಟ್ಟಿ
ಮೊನೆ ಮುಂಬರಿದು ಹರಿದ ಬೆಟ್ಟದಲ್ಲಿ
ಪರಿಭ್ರಮಣದ ತೋಳ ಹುಟ್ಟಿ
ಹುಲಿ ಹುಲ್ಲೆಯ ಕೋಡಿನಲ್ಲಿ ಸತ್ತು
ಗಜ ಅಜದ ಮೆಲುಕಿನಲ್ಲಿ ಸಿಕ್ಕಿ
ತೋಳ ಉಡುವಿನ ಕಣ್ಣಿನೊಳಡಗಿತ್ತು
ತುರುವಿನ ಮುಂದೆ ಬರಿಕೆಯಿವುತ್ತಿದೆ
ಗೋಪತಿನಾಥ ವಿಶ್ವೇಶ್ವರಲಿಂಗವನರಿತೆಹೆನೆಂದು

೯೨೯

ಶಾಸ್ತ್ರವೆ ಅಡ್ಡಣಿಗೆಯಾಗಿ ಆಗಮವೆ ಹರಿವಾಣವಾಗಿ
ಪುರಾಣವೆ ಓಗರವಾಗಿ ಉಂಬಾತ ವೇದವಾಗಿ
ಸಕಲ ರುಚಿಯನರಿದು ಭೋಗಿಸುವ ಪ್ರಣವ ತಾನಾಗಿ

ಅದರ ಭೇದ ಏತರಿಂದ ಅಳಿವು ಉಳಿವು ನಿನ್ನ ನೀನರಿ
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ

೯೩೦
ಶಿಖಿ ಬ್ರಾಹ್ಮಣ ನಯನ ಕ್ಷತ್ರಿಯ
ನಾಶಿಕ ಬಣಜಿಗ ಅಧರ ಒಕ್ಕಲಿಗ
ಕರ್ಣ ಗೊಲ್ಲ ಕೊರಳು ಕುಂಬಾರ
ಬಾಹು ಪಂಚಾಳ ಅಂಗೈ ಉಪ್ಪಾರ
ನಖ ನಾಯಿಂದ ಒಡಲು ಡೊಂಬ
ಬೆನ್ನು ಅಸಗ ಚರ್ಮ ಬೇಡ
ಪೃಷ್ಠಸ್ಥಾನ ಕಬ್ಬಿಲಿಗ ಒಳದೊಡೆ ಹೊಲೆಯ
ಮೊಣಕಾಲು ಈಳಿಗ ಕಣಕಾಲು ಸಮಗಾರ
ಮೇಗಾಲು ಮಚ್ಚಿಗ ಚಲಪಾದವೆಂಬ ಅಂಗಾಲು ಶುದ್ಧ ಮಾದಿಗ
ಕಾಣಿರೊ
ಇಂತೀ ಹದಿನೆಂಟುಜಾತಿ ತನ್ನಲಿ ಉಂಟು
ಇವು ಇಲ್ಲಾಯೆಂದು ಜಾತಿಗೆ ಹೋರುವ ಅಜ್ಞಾನಿಗಳ
ನಮ್ಮ ಸೊಡ್ಡಳದೇವರು ಮೆಚ್ಚನಯ್ಯಾ

೯೩೧
ಶಿಲೆ ಕಮ್ಮಾರನ ಹಂಗು
ಮಾತು ಮನಸ್ಸಿನ ಹಂಗು
ಮನಸ್ಸು ಆಕಾಶದ ಹಂಗು
ಆಕಾಶ ಬಯಲ ಹಂಗು
ಕುರುಹುವಿಡಿದು ಇನ್ನೇತರಿಂದರಿವೆ
ಅರಿವುದಕ್ಕೆ ಸ್ವಯಂಭುವಿಲ್ಲ
ತ್ರಿಪುರಾಂತಕ ಲಿಂಗದಲ್ಲಿ ಗಾವುದಿ ಮಾಚಯ್ಯ
ಹೇಳಿದುದೆ ದಿಟವೆಂಬೆ

೯೩೨
ಶಿಲೆಯೊಳಗಣ ಪಾವಕನಂತೆ
ಉದಕದೊಳಗಣ ಪ್ರತಿಬಿಂಬದಂತೆ

ಬೀಜದೊಳಗಣ ವೃಕ್ಷದಂತೆ
ಶಬ್ದದೊಳಗಣ ನಿಶ್ಯಬ್ದದಂತೆ
ಗುಹೇಶ್ವರ ನಿಮ್ಮ ಶರಣ ಸಂಬಂಧ

೯೩೨
ಶೀಲವಂತನಾದಡೆ
ಜಾತಿಯ ಬಿಡಬೇಕು
ಶಿವಜ್ಞಾನಿಯಾದಡೆ
ಈ ಸಮಯವ ಬಿಡಬೇಕು
ಹೀಂಗಲ್ಲದೆ
ಜಗದಲ್ಲಿ ನಡೆವ ಭ್ರಾಂತರ ಸುದ್ದಿಯೇಕೆ
ನಿಭ್ರಾಂತನಾದ ಶರಣಂಗೆ ಅಮುಗೇಶ್ವರಾ

೯೩೪
ಸಂಗದಿಂದಲ್ಲದೆ ಅಗ್ನಿ ಹುಟ್ಟದು
ಸಂಗದಿಂದಲ್ಲದೆ ಬೀಜ ಮೊಳೆದೋರದು
ಸಂಗದಿಂದಲ್ಲದೆ ಹೂವಾಗದು
ಸಂಗದಿಂದಲ್ಲದೆ ಸರ್ವಸುಖದೋರದು
ಚೆನ್ನಮಲ್ಲಿಕಾರ್ಜುನಯ್ಯಾ
ನಿಮ್ಮ ಮಹಾನುಭಾವಿಗಳ ಸಂಗದಿಂದಲಾನು
ಪರಮಸುಖಿಯಾದೆನಯ್ಯಾ

೯೩೫
ಸಂಜೆಯ ಮಂಜಿನ ಕಪ್ಪು
ಅಂಜಿದಡೆ ಶಂಕೆ ತದ್ರೂಪವಾಗಿ ನಿಂದಿತ್ತು
ತನ್ನ ಭಾವದ ನಟನೆ ನಡೆವನ್ನಕ್ಕ ನಡೆಯಿತ್ತು
ಅದು ನಿಂದಲ್ಲಿಯೇ ನಿಂದಿತ್ತು
ಅದರಂತುವನರಿದಡೆ
ಹಿಂದೆ ಹುಸಿ
ಮುಂದೆ ಕೂಡಲಸಂಗಮದೇವನ ನಿಲವು ತಾನೆ

೯೩೬

ಸಂತವಿದ್ದ ಮನೆಗೆ ಕೊಂತವ ತಂದಂತೆ
ಇದನೆಂತು ಸಂತೈಸುವೆನು
ಸಂತೆಯ ಗುಡಿಲ ಸೂಳೆಗೆ ಕೊಂತವಳವಡುವುದೆ
ಕೂಡಲಸಂಗಮದೇವರ ಮಹತ್ತು
ಆರಿಗೆಯೂ ಅಳವಡದು

೯೩೭

ಸಂತೆಗೆ ಬಂದವರೆಲ್ಲ ಸಾವಧಾನಿಯಾಗಬಲ್ಲರೆ
ಪಸರವ ಹರಡುವರೆಲ್ಲ ರತ್ನದ ಬೆಲೆಯ ಬಲ್ಲರೆ
ಕುದುರೆಯ ಹಿಡಿದವರೆಲ್ಲ ರಾವುತಿಕೆಯ ಮಾಡಬಲ್ಲರೆ
ಅಮುಗೇಶ್ವರಾ

೯೩೮

ಸಂಸಾರವೆಂಬ ಸಾಗರವ ದಾಂಟುವಡೆ
ಅರಿವೆಂಬ ಹರುಗೋಲನಿಕ್ಕಿ ಜ್ಞಾನವೆಂಬ ಅಂಬಿಗ
ಹರುಗೋಲದಲ್ಲಿ ಕುಳ್ಳಿರ್ದು
ಸುಜ್ಞಾನವೆಂಬ ಘಾತದ ಗಳೆಯ ಪಿಡಿದು
ನಾನೀ ಹೊಳೆಯ ಕಂಡು ಅಂಬಿಗನು ಕೇಳಿದಡೆ
ನಾನು ಹಾಸಿಕೊಟ್ಟೆಹೆನೆಂದನು
ನಾನು ನಿನ್ನ ನಂಬಿ ಹರುಗೋಲನೇರಿದೆನು ಕಾಣಾ
ಅಂಬಿಗರಣ್ಣಾಯೆಂದು
ನಾನು ಹರುಗೋಲದಲ್ಲಿ ಕುಳ್ಳಿರ್ದು ಹೊಳೆಯೊಳಗೆ ಹೋಗಲಿಕೆ
ಕಾಮವೆಂಬ ಕೊರಡು ಅಡ್ಡಬಿದ್ದಿತ್ತು
ಕ್ರೋಧವೆಂಬ ಸುಳುಹಿನೊಳಗೆ
ಅಹಂಕಾರವೆಂಬ ಮೀನು ಬಂದು ನಿಂದಿತ್ತು
ಮಾಯೆಯೆಂಬ ಮೊಸಳೆ ಬಂದು ಬಾಯಬಿಡುತ್ತಿದ್ದಿತ್ತು
ಮೋಹವೆಂಬ ನೊರೆತೆರೆಗಳು ಹೆಚ್ಚಿ ಬರುತ್ತಿದ್ದಿತ್ತು
ಲೋಭವೆಂಬ ಕಾಳ್ಗಡಲು ಎಳೆದೊಯ್ಯುತ್ತಿದ್ದಿತ್ತು
ಮರವೆಂಬ ಮೊರಹು ನೂಕುತ್ತಲಿದ್ದಿತ್ತು
ಮತ್ಸರವೆಂಬ ಗಾಳಿ ತಲೆಕೆಳಗು ಮಾಡುತ್ತಿದ್ದಿತ್ತು

ಇವೆಲ್ಲವನೂ ಪರಿಹರಿಸಿ
ಎನ್ನ ಹೊಳೆಯ ದಾಂಟಿಸಿದನು ಅಂಬಿಗರಣ್ಣನು
ಈ ಹೊಳೆಯ ದಾಂಟಿಸಿದ ಕೂಲಿಯ ನನ್ನ ಬೇಡಿದಡೆ
ಕೂಲಿಯ ಕೊಡುವಡೇನೂ ಇಲ್ಲೆಂದಡೆ
ಕೈಸೆರೆಯಾಗಿ ಎನ್ನನೆಳದೊಯ್ದನಯ್ಯಾ
ಅರುವೆಯ ಕೊಟ್ಟ ಕೂಲಿಗೆ ತನ್ನ ಕರುವ ಕಾಯಿಸಿಕೊಂಡನಯ್ಯಾ
ಅರಿಯದೆ ಹರುಗೋಲವ ನೆರೆತೊರೆಯ ದಾಂಟಿಸಿದ ಕೂಲಿಗೆ
ಕರುವ ಕಾಯಿದೆನು ಕಾಣಾ
ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ
ಶಾಂತಚೆನ್ನಮಲ್ಲಿಕಾರ್ಜುನದೇವಯ್ಯಾ
ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ

೯೩೯

ಸಂಸಾರವೆಂಬ ಹಗೆಯಯ್ಯಾ ಎನ್ನ ತಂದೆ
ಎನ್ನ ವಂಶವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯಾ
ಎನ್ನುವನರಸಿಯರಸಿ ಹಿಡಿದು ಕೊಲುತ್ತಿದೆಯಯ್ಯಾ
ನಿನ್ನ ನಾ ಮರೆಹೊಕ್ಕೆ ಕಾಯಯ್ಯಾ
ಎನ್ನ ಬಿನ್ನಪವನವಧರಿಸಾ
ಚೆನ್ನಮಲ್ಲಿಕಾರ್ಜುನಾ

೯೪೦

ಸಂಸಾರವೆಂಬುದೊಂದು ಗಾಳಿಯ ಸೊಡರು
ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ
ಇದ ನಚ್ಚಿ ಕೆಡಬೇಡ ಸಿರಿಯೆಂಬುದ
ಮರೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ

೯೪೧

ಸಂಸಾರಸಾಗರದ ತೆರೆ ಕೊಬ್ಬಿ ಮುಖದ ಮೇಲೆ ಅಲೆವುತ್ತಲಿದೆ
ಸಂಸಾರಸಾಗರ ಉರದುದ್ದವೆ ಹೇಳಾ
ಸಂಸಾರಸಾಗರ ಕೊರಳುದ್ದವೆ ಹೇಳಾ
ಸಂಸಾರಸಾಗರ ಶಿರದುದ್ದವಾದ ಬಳಿಕ

ಏನ ಹೇಳುವೆನಯ್ಯಾ
ಅಯ್ಯಾ ಅಯ್ಯಾ
ಎನ್ನ ಹುಯ್ಯಲ ಕೇಳಯ್ಯಾ
ಕೂಡಲಸಂಗಮದೇವಾ
ನಾನೇವೇನೇವೆನಯ್ಯಾ

೯೪೨
ಸಗಣೆಯ ಬೆನಕನ ಮಾಡಿ
ಸಂಪಗೆಯರಳಲ್ಲಿ ಪೂಜಿಸಿದಡೆ
ರಂಜನೆಯಹುದಲ್ಲದೆ ಅದರ ಗಂಜಳ ಬಿಡದಣ್ಣಾ
ಮಣ್ಣ ಪುತ್ಥಳಿಯ ಮಾಡಿ
ಜಲದಲ್ಲಿ ತೊಳೆದಡೆ
ನಿಚ್ಚಕೆ ನಿಚ್ಚ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣಾ
ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟಡೆ
ಕೆಟ್ಟವನೇಕೆ ಸದ್ಭಕ್ತನಹನು
ಕೂಡಲಸಂಗಮದೇವಾ

೯೪೩
ಸಣ್ಣ ನನೆಯೊಳಗಣ ಪರಿಮಳವ
ಹೊರಸೂಸಿ ಇದಿರಿಂಗೆ ಅರುಹಿಸಬಲ್ಲುದೆ ವಾಯು
ಕೊಡಗೂಸಿನೊಳಗಣ ಮೊಲೆ ಮುಡಿಯ
ಹಡೆದ ತಾಯಿ ತಂದೆಗಳೆಂದಡೆ
ಕಾಣಿಸಿಕೊಡಬಲ್ಲರೆ ಕಾಬವರ ಕಣ್ಣಿಗೆ
ಪಕ್ವಕ್ಕಲ್ಲದೆ ಪರಿಣಾಮ ಕಾಣಿಸದು
ರಾಮನಾಥ

೯೪೪
ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ
ಸತಿಪತಿಗಳೊಂದಾಗದವನ ಭಕ್ತಿ
ಅಮೃತದೊಳು ವಿಷ ಬೆರೆದಂತೆ ಕಾಣಾ
ರಾಮನಾಥ

೯೪೫

ಸತಿಯ ಗುಣವ ಪತಿ ನೋಡಬೇಕಲ್ಲದೆ
ಪತಿಯ ಗುಣವ ಸತಿ ನೋಡಬಹುದೆ ಎಂಬರು
ಸತಿಯಿಂದ ಬಂದ ಸೋಂಕು ಪತಿಗೆ ಕೇಡಲ್ಲವೆ
ಪತಿಯಿಂದ ಬಂದ ಸೋಂಕು ಸತಿಗೆ ಕೇಡಲ್ಲವೆ
ಒಂದಂಗದ ಕಣ್ಣು ಉಭಯದಲ್ಲಿ ಒಂದು ಹಿಂಗಲಿಕ್ಕೆ
ಭಂಗವಾರಿಗೆಂಬುದ ತಿಳಿದಲ್ಲಿಯೆ
ಕಾಲಾಂತಕ ಭೀಮೇಶ್ವರಲಿಂಗಕ್ಕೆ ಸಲೆ ಸಂದಿತ್ತು

೯೪೬

ಸತ್ತಾತನೊಬ್ಬ ಹೊತ್ತಾತನೊಬ್ಬ
ಈ ಇಬ್ಬರನೊಯ್ದು ಸುಟ್ಟಾತನೊಬ್ಬ
ಮದವಣಿಗನಾರೋ ಮದವಳಿಗೆ ಯಾರೋ
ಮದುವೆಯ ನಡುವೆ ಮರಣವಡ್ಡ ಬಿದ್ದಿತ್ತಲ್ಲಾ
ಹಸೆಯಳಿಯದ ಮುನ್ನ ಮದವಣಿಗನಳಿದ
ಗುಹೇಶ್ವರ ನಿಮ್ಮ ಶರಣನೆಂದೂ ಅಳಿಯ

೯೪೭

ಸತ್ಯವನೊಳಕೊಂಡ ಮಿಥ್ಯಕ್ಕೆ ಭಂಗ
ಮಿಥ್ಯವನೊಳಕೊಂಡ ಸತ್ಯಕ್ಕೆ ಭಂಗ
ಸತ್ಯಮಿಥ್ಯವನೊಳಕೊಂಡ ಮನಕ್ಕೆ ಭಂಗ
ಮನವನೊಳಕೊಂಡ ಜ್ಞಾನಕ್ಕೆ ಭಂಗ
ಜ್ಞಾನವನೊಳಕೊಂಡ ನಿಜಕ್ಕೆ ಭಂಗವುಂಟೇ ಗುಹೇಶ್ವರ

೯೪೮

ಸತ್ಯವುಳ್ಳಲ್ಲಿ ಶಬುದ ಹಿಂಗದು
ಭಾವವುಳ್ಳಲ್ಲಿ ಭಕ್ತಿ ಹಿಂಗದು
ಮೂರುಲೋಕದ ಹಂಗಿನ ಶಬುದವೇನಯ್ಯಾ
ಮುಕುತಿಯನೇವೆನಯ್ಯಾ
ಎನ್ನ ಯುಕುತಿಯ ಮುಕುತಿಯ ಬಕುತಿಯಪದವನು ಕಂಡು
ನಾಚಿದನಜಗಣ್ಣತಂದೆ

೯೪೯

ಸಮಯಕ್ಕೆ ಹೋರಬೇಕು
ಜ್ಞಾನದಲ್ಲಿ ಸುಮ್ಮನಿರಬೇಕು
ಹೋರದಿದ್ದಡೆ ರುದ್ರಂಗೆ ದೂರ
ಹೋರಿದಡೆ ಪದವಸ್ತುವಿಗೆ ದೂರ
ಇದರಿಂದ ಬಂದುದು ಬರಲಿ
ಮನೊಯೊಳಗಿದ್ದು ಮನೆಯ ಸುಟ್ಟವರುಂಟೆ
ನಾರಾಯಣಪ್ರಿಯ ರಾಮನಾಥಾ

೯೫೦

ಸಮುದ್ರ ಘನವೆಂಬೆನೆ
ಧರೆಯ ಮೇಲಡಗಿತ್ತು
ಧರೆ ಘನವೆಂಬೆನೆ
ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು
ನಾಗೇಂದ್ರನ ಘನವೆಂಬೆನೆ
ಪಾರ್ವತಿಯ ಕಿರುಕುಣಿಕೆಯ ಮುದ್ರಿಕೆಯಾಯಿತ್ತು
ಅಂತಹ ಪಾರ್ವತಿ ಘನವೆಂಬೆನೆ
ಪರಮೇಶ್ವರನ ಅರ್ಧಾಂಗಿಯಾದಳು
ಅಂತಹ ಪರಮೇಶ್ವರ ಘನವೆಂಬೆನೆ
ನಮ್ಮ ಕೂಡಲಸಂಗನ ಶರಣರ
ಮನದ ಕೊನೆಯ ಮೊನೆಯ ಮೇಲಡಗಿದನು

೯೫೧

ಸರವರದ ಮಂಡೂಕನು ತಾವರೆಯ ನೆಳಲ ಸಾರಿದಡೆ
ಪರಿಮಳವದಕೆ ಅಯ್ಯಾ
ಆ ಅರಿಯಬಾರದು
ಪರಿಮಳವದಕೆ ಅಯ್ಯಾ
ಆ ಅರಿಯಬಾರದು ಮದಾಳಿಗಲ್ಲದೆ
ಸಕಳೇಶ್ವರದೇವಾ ನಿಮ್ಮ ವೇದಿಸಿದ ವೇದ್ಯಂಗಲ್ಲದೆ
ನಿಮ್ಮ ನಿಲವನರಿಯಬಾರದು

೯೫೨

ಸರ್ಪನಲ್ಲಿ ವಿಷ ಇದ್ದಿತ್ತೆಂದಡೆ
ಸರ್ವಾಂಗದಲ್ಲಿ ವಿಷ ತಪ್ಪದಿಪ್ಪುದೆ ವಿಷವಿಪ್ಪ ಠಾವು ಒಂದಲ್ಲದೆ
ಪೃಥ್ವಿಯಲ್ಲಿ ನಿಕ್ಷೇಪವಿದ್ದಿತ್ತೆಂದಡೆ
ಅಲ್ಲಲ್ಲಿ ಎಲ್ಲಾ ಠಾವಿನಲ್ಲಿ ಅಡಗಿಪ್ಪುದೆ
ಸಮಯಕುಲದಲ್ಲಿ ವಸ್ತು ಪರಿಪೂರ್ಣವೆಂದಡೆ
ದರ್ಶನಪಾಷಂಡಿಗಳಲ್ಲಿ ವಸ್ತುಪರಿಪೂರ್ಣನಾಗಿಪ್ಪನೆ
ಇಪ್ಪ ಸತ್ಯಸನ್ಮುಕ್ತರಲ್ಲಿಯಲ್ಲದೆ ಪರಮವಿರಕ್ತನಲ್ಲಿಯಲ್ಲದೆ
ನೆಲದಲ್ಲಿದ್ದ ನಿಧಾನವನರಿದು ಅಗಿವುದು
ವಿಷವಿದ್ದ ಬಾಯ ಮುಚ್ಚಿಹಿಡಿವುದು
ನೆರೆ ವಸ್ತುವಿದ್ದ ಠಾವನರಿದು ಪೂಜಿಸುವುದು
ಇಂತೀ ಬಯಕೆಗೆ ಬಯಕೆ ಸಮೂಹಕ್ಕೆ ತ್ರಿವಿಧಮಲ
ಖ್ಯಾತಿ ಲಾಭಕ್ಕೆ ಭೂತಹಿತ
ಅರಿವುಳ್ಳವರಲ್ಲಿ ಎರವಿಲ್ಲದ ಕೂಟ
ಇಂತಿವು ಜಗದಲ್ಲಿ ಅರಿದು ಮಾಡುವನ ಪರಿತೋಷ
ಗಾರುಡೇಶ್ವರಲಿಂಗದಲ್ಲಿ ಎರಡಳಿದವನ ಕೂಟ

೯೫೩

ಸರ್ವವೂ ಶಿವನಿಂದ ಉದ್ಭವಿಸುವವೆಂದಡೆ
ಉದ್ಭವಿಸುವವೆಲ್ಲವೂ ಶಿವನೆ
ಸಕಲ ಬೀಜವ ಬಿತ್ತುವನೊಕ್ಕಲಿಗನೆಂದಡೆ
ಆ ಬೆಳೆ ತಾನೊಕ್ಕಲಿಗನೆ
ಮಡಕೆಯ ಮಾಡುವವ ಕುಂಬಾರನೆಂದಡೆ
ಆ ಮಡಕೆ ತಾ ಕುಂಬಾರನೆ
ಕಬ್ಬುನವ ಮಾಡುವವ ಕಮ್ಮಾರನೆಂದಡೆ
ಆ ಕಬ್ಬುನ ತಾ ಕಮ್ಮಾರನೆ
ಈ ಪರಿಯಲಿ ಸಕಲಚರಾಚರವನು ಮಾಡುವವ ಶಿವನೆಂದಡೆ
ಆ ಸಚರಾಚರವು ಶಿವನೆ
ಅಹಂಗಾದರೆ
ಅಷ್ಟಾದಶವರ್ಣವೇಕಾದವು
ಚೌರಾಸಿಲಕ್ಷ ಜೀವಂಗಳೇಕಾದವು

ಉತ್ತಮ ಮಧ್ಯಮ ಕನಿಷ್ಠಂಗಳೇಕಾದವು
ಪುಣ್ಯ ಪಾಪ ಸ್ವರ್ಗ ನರಕಂಗಳೇಕಾದವು
ಭವಿಭಕ್ತರೆಂದೇಕಾದರು
ಇದು ಕಾರಣ
ಸದಾಚಾರ ಸದ್ಭಕ್ತಿಯಲ್ಲಿಪ್ಪಾತನೆ ಶಿವನಲ್ಲದೆ
ಸರ್ವವೂ ಶಿವನೆಂದಡೆ
ಅಘೋರ ನರಕ ಕೂಡಲಚೆನ್ನಸಂಗಯ್ಯಾ

೯೫೪
ಸರ್ವಸಂಗಪರಿತ್ಯಾಗಿಯೆಂದಡೆ
ಭೋಗಕ್ಕೆ ಮರುಗಿಸುವೆ
ಪಾಕನೇಮಿಯೆಂದಡೆ
ಷಡುರಸಾನ್ನಕ್ಕೆರಗಿಸುವೆ
ಮೌನವ್ರತಿಯೆಂದಡೆ
ಸನ್ನೆಯಲ್ಲಿ ಬೇಡಿಸುವೆ
ಬ್ರಹ್ಮಚಾರಿಯೆಂದಡೆ
ಅಂಗನೆಯರಿಗೆರಗಿಸುವೆ
ಸಕಳೇಶ್ವರದೇವಾ
ಎನ್ನನಾಳವಾಡಿ ಕಾಡುವೆ

೯೫೫
ಸಸಿಗೆ ನೀರೆರೆದಡೆ ಎಳಕುವುದಲ್ಲದೆ
ನಷ್ಟಮೂಲಕ್ಕೆ ಹೊತ್ತು ನೀರ ಹೊಯಿದಡೆ ಎಳಕುವುದೆ
ಮಾರಯ್ಯಾ
ನಿನ್ನ ವಿರಕ್ತಿ ನಷ್ಟವಾಗದ ಮುನ್ನವೆ
ಮಾರಯ್ಯಪ್ರಿಯ ಅಮಲೇಶ್ವರಲಿಂಗವನರಿಯಿರಯ್ಯಾ

೯೫೬
ಸಸಿಯ ಮೇಲೆ ಸಾಗರವರಿದಂತಾಯಿತ್ತಯ್ಯಾ ಎನ್ನ ಭಕ್ತಿ
ಆನಂದದಿಂದ ನಲಿನಲಿದಾಡುವೆನು

ಆನಂದದಿಂದ ಕುಣಿಕುಣಿದಾಡುವೆನು
ಕೂಡಲಸಂಗನ ಶರಣರು ಬಂದಡೆ
ಉಬ್ಬಿ ಕೊಬ್ಬಿ ಹರುಷದಲೋಲಾಡುವೆ

೯೫೭
ಸಾಂಖ್ಯ ಶ್ವಪಚ ಅಗಸ್ತ್ಯ ಕಬ್ಬಿಲ
ದೂರ್ವಾಸ ಮಚ್ಚಿಗ ದಧೀಚಿ ಕೀಲಿಗ
ಕಶ್ಯಪ ಕಮ್ಮಾರ ರೋಮಜ ಕಂಚುಗಾರ
ಕೌಂಡಿಲ್ಯ ನಾವಿದನೆಂಬುದನರಿದು
ಮತ್ತೆ ಕುಲವುಂಟೆಂದು ಛಲಕ್ಕೆ ಹೋರಲೇತಕ್ಕೆ
ಇಂತೀ ಸಪ್ತಋಷಿಯರುಗಳೆಲ್ಲರೂ
ಸತ್ಯದಿಂದ ಮುಕ್ತರಾದುದನರಿಯದೆ
ಅಸತ್ಯದಲ್ಲಿ ನಡೆದು ವಿಪ್ರರು ನಾವು ಘನವೆಂದು
ಹೋರುವ ಹೊತ್ತುಹೋಕರ ಮಾತೇತಕ್ಕೆ
ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ
ಅರಿ ನಿಜಾತ್ಮ ರಾಮ ರಾಮನಾ

೯೫೮
ಸಾಕ್ಷಿ ಸತ್ತಿತ್ತು
ಪತ್ರ ಬೆಂದಿತ್ತು
ಲೆಕ್ಕ ತುಂಬಿತ್ತು
ಜೀವ ಜೀವಿತದ ಆಸೆ ನಿಂದುದು
ಭಾಷೆ ಹೋಯಿತ್ತು
ದೇಶವೆಲ್ಲರಿಯೆ ಎನ್ನ ದೇವ ಚೆನ್ನಮಲ್ಲಿಕಾರ್ಜುನನ ನಂಬಿ
ಹಂಬಲ ಮರೆದೆನಾಗಿ

೯೫೯
ಸಾಗರದ ತಡಿಯಲ್ಲಿ ಒಂದು ಆರವೆ
ಆರವೆಯ ಬೇರಿನಲ್ಲಿ ಮೂರುಲೋಕ
ಲೋಕದೊಳಗೆ ಹೊತ್ತು ಬೆವಹಾರ ಮಾಡುವ ಅಣ್ಣಗಳೆಲ್ಲರೂ
ಹೇರಿನ ಮೂಲೆಗೆ ತೋಳಕೊಟ್ಟು

ಅಳೆವ ಕೊಳಗಕ್ಕೆ ಕೈಯನಿಕ್ಕಿದರು
ಗಡಿವಾಡದ ಸುಂಕವ ಕದ್ದು ಹೋಗಲರಿಯದೆ
ಬಂಕೇಶ್ವರಲಿಂಗವನರಿಯಿರಣ್ಣಾ

೯೬೦

ಸಾಗರದೊಳಗಣ ಕಿಚ್ಚಿನ ಸಾಕಾರದಂತೆ
ಸಸಿಯೊಳಗಣ ಫಲಪುಷ್ಪ ರುಚಿಯ ಪರಿಮಳದಂತೆ
ಮನದ ಮರೆಯ ಮಾತು
ನೆನಹಿನಲ್ಲಿ ಅರಿದು ನಾಲಗೆಯ ನುಡಿವಾಗಲಲ್ಲದೆ
ಕಾಣಬಾರದು ಕೇಳಬಾರದು
ಒಂದಂಗದೊಳಗಡಗಿದ ನೂರೊಂದರ ಪರಿ
ರಾಮನಾಥ

೯೬೧

ಸಾಗರದೊಳಗಿಪ್ಪ ಪ್ರಾಣಿಗಳು ಮತ್ತೊಂದೆಡೆಯಲ್ಲಿ ಇರಬಲ್ಲವೆ
ಭವಸಾಗರದೊಳಗಿಪ್ಪ ಜೀವಿಗಳಿಗೆ ಅದೇ ಗತಿಯಲ್ಲದೆ
ಬೇರೆ ಮತ್ತೊಂದೆಡೆಯುಂಟೆ
ಗೊಹೇಶ್ವರನ ಲೀಲೆ ಜಗನ್ಮಯವಾದಡೆ
ನಾನು ಬೆರಗಾದೆನು

೯೬೨

ಸಾವ ಜೀವಕ್ಕೆ ಗುರು ಬೇಡ
ಸಾಯದ ಜೀವಕ್ಕೆ ಗುರು ಬೇಡ
ಗುರುವಿಲ್ಲದೆ ಕೂಡಲಿಕ್ಕೆ ಬಾರದು
ಇನ್ನಾವ ಠಾವಿಂಗೆ ಗುರು ಬೇಕು
ಸಾವುಜೀವಸಂಬಂಧದ ಠಾವ ತೋರಬಲ್ಲಾತನೇ
ಗುರುಗುಹೇಶ್ವರನು

೯೬೩

ಸಾವನ್ನಕ್ಕರ ಸರವ ಮಾಡಿದರೆ
ಇನ್ನು ಕಾದುವ ದಿನವಾವುದು

ಬಾಳುವನ್ನಕ್ಕರ ಭಜಿಸುತ್ತಿದ್ದರೆ
ತಾನಹ ದಿನವಾವುದು
ಅರ್ಥವುಳ್ಳನ್ನಕ್ಕರ ಅರಿವುತ್ತಿದ್ದರೆ
ನಿಜವನೈದುವ ದಿನವಾವುದು
ಕಾರ್ಯಕ್ಕೆ ಬಂದು ಕಾರ್ಯ ಕೈಸಾರಿದ ಬಳಿಕ
ಇನ್ನು ಮರ್ತ್ಯಲೋಕದ ಹಂಗೇಕೆ
ತನಿರಸ ತುಂಬಿದ ಅಮೃತಫಲ ಒಮ್ಮೆಗೆ ತೊಟ್ಟು ಬಿಡುವುದು
[ನೋಡಿರೆ ದೃಷ್ಟಾಂತವ
ಬಸವಣ್ಣ ಚೆನ್ನಬಸವಣ್ಣ ಮೊದಲಾದ ಪ್ರಮಥರು]
ಗೊಹೇಶ್ವರಲಿಂಗದಲ್ಲಿ ನಿಜವನೈದಿ ನಿಶ್ಚಿಂತರಾಗಿರಯ್ಯ

೯೬೪
ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ
ನಾನೊಲಿದೆ
ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗೆ
ನಾನೊಲಿದೆ
ಎಲೆ ಅವ್ವಗಳಿರಾ
ಭವವಿಲ್ಲವ ಭಯವಿಲ್ಲವ ನಿರ್ಭಯ ಚೆಲುವಂಗೊಲಿದೆ
ನಾನು ಸೀಮೆಯಿಲ್ಲದ ನಿಸ್ಸೀಮಂಗೊಲಿದೆ
ನಾನು ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ
ಮಿಗೆ ಮಿಗೆ ಒಲಿದೆ ಎಲೆ ಅವ್ವಗಳಿರಾ

೯೬೫
ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ
ನೋಡಾ ಬೇಟವ ಮಾಡಿಹನೆಂಬ ಪರಿಯ ನೋಡಾ
ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂದಡೆ
ಬಿನ್ನಾಣ ತಪ್ಪಿತ್ತು ಗುಹೇಶ್ವರ

೯೬೬
ಸಿಂಹದ ಮುಂದೆ ಜಿಂಕೆಯ ಜಿಗಿದಾಟವೆ
ಪ್ರಳಯಾಗ್ನಿಯ ಮುಂದೆ ಪತಂಗದಾಟವೆ

ಸೂರ್ಯನ ಮುಂದೆ ಕೀಟದಾಟವೆ
ನಿಮ್ಮ ಮುಂದೆ ಎನ್ನಾಟವೆ ಕಲಿದೇವರದೇವಾ

೯೬೭

ಸಿಡಿಲುಹೊಯ್ದ ಬಾವಿಗೆ ಸೋಪಾನವುಂಟೆ
ಷಡುವರ್ಣರಹಿತಂಗೆ ಬಣ್ಣವುಂಟೆ
ಕಡಲದಾಂಟಿದವಂಗೆ ಹರುಗೋಲುಂಟೆ
ಬಿಡದೆ ಕಟ್ಟಿದ ಒರೆಗೆ ಸಂಧಾನವುಂಟೆ
ಒಡಲಿಲ್ಲದವಂಗೆ ಒಡವೆಯುಂಟೆ
ನುಡಿಯುಂಟೆ ಎಮ್ಮ ಅಜಗಣ್ಣದೇವಂಗೆ

೯೬೮

ಸಿಡಿಲೊಡನೆ ಕಾದುವಂಗೆ ಕೊಡೆಯೊಂದು ಮರೆಯೆ
ಪರ್ವತದ ಹೊರುವಂಗೆ ಸಿಂಬೆಯೊಂದು ಸಹಾಯವೆ
ಸಕ್ಕರೆಯ ಸವಿವುದಕ್ಕೆ ಬೇವೊಂದು ಪದಾರ್ಥವೇ
ಗೋಗೇಶ್ವರನನರಿವುದಕ್ಕೆ ಕುರುಹು ಮುನ್ನೇಕೆ

೯೬೯

ಸೀಮೋಲ್ಲಂಘನವೆಂಬುದ ನಾನರಿಯೆ ನೀವೆ ಬಲ್ಲಿರಿ
ಇದ್ದ ಮನೆಯ ಬಿಡಲಾರದೆ ತೊಟ್ಟಿದ್ದ ತೊಡಿಗೆಯ
ಅಳಿಯಲಾರದೆ
ಇದ್ದ ಠಾವ ಬಿಟ್ಟು ಹೋಗೆನೆಂಬುದು ಛಲವೆ
ಅದು ತನ್ನ ಸೀಮೆಯೊ ಜಗದ ಸೀಮೆಯೊ ಎಂಬುದ
ತಾನರಿಯಬೇಕು
ತನ್ನ ಸೀಮೆಯಲ್ಲಿ ಬಂದಂಗವ ಜಗದ ಸೀಮೆಯಲ್ಲಿ
ಅಳಿಯಬಹುದೆ
ತನ್ನಂಗಕ್ಕೆ ಕಂಟಕ ನೇಮ ತಪ್ಪಿ ಬಂದಲ್ಲಿ
ಅಂಗವ ಲಿಂಗದಲ್ಲಿ ಬೈಚಿಟ್ಟು ಕೂಡಿದ ಅಂಗ ಸೀಮೋಲ್ಲಂಘನ
ಇಂತೀ ನೇಮ ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ
ಸಂದಿತ್ತು

೯೭೦
ಸುಖದ ಸುಖಿಗಳ ಸಂಭಾಷಣೆಯಿಂದ ದುಃಖ ವಿಶ್ರಾಮವಾಯಿತ್ತು
ಭಾವಕ್ಕೆ ಭಾವ ತಾರ್ಕಣೆಯಾದಲ್ಲಿ ನೆನಹಕ್ಕೆ ವಿಶ್ರಾಮವಾಯಿತ್ತು
ಬೆಚ್ಚು ಬೆರಸಲೊಡನೆ ಮಚ್ಚು ಒಳಕೊಂಡಿತ್ತು
ಚೆನ್ನಬಂಕನಾಥನ ಮಾಹೇಶ್ವರಂಗೆ

೯೭೧
ಸುಖದುಃಖಾದಿಗಳ ಮೀರುವ ಎನ್ನವರ ಕಾಣೆ
ಸುಖದುಃಖಾದಿಗಳ ಮೀರುವ ನಿನ್ನವರ ಕಾಣೆ
ಇನ್ನೇನು ಹೇಳುವೆ ನಡುಹೊಳೆಯಲ್ಲಿ ಹರುಗೋಲ ಹರಿದಂತೆ
ಅಂಬಿಗನ ಕೊರಳ ಸುತ್ತಿ ಬಂದವರೆಲ್ಲರೂ
ಉಭಯವು ಹೊಂದಿದಂತಾಯಿತ್ತು
ನೀ ಎನ್ನ ಬಟ್ಟೆ ನಾ ನಿನ್ನ ಬಟ್ಟೆ
ಉಭಯವು ಬಂದ ಬಟ್ಟೆಯಾದೆವಲ್ಲ
ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವೆ

೯೭೨
ಸುಖವ ನಿಶ್ಚೈಸಲಿಲ್ಲ ಅದು ದುಃಖಕ್ಕೆ ಬೀಜ
ದುಃಖವ ನಿಶ್ಚೈಸಲಿಲ್ಲ ಸುಖದೊಡಲು
ಸುಖದುಃಖವೆರಡು ಕಾಲನ ಸುಂಕಕ್ಕೆ ಒಳಗು
ಬಂಕೇಶ್ವರಲಿಂಗದೊಳಗೆ ಒಬ್ಬರೂ ಇಲ್ಲ

೯೭೩
ಸುಖವ ಬಲ್ಲಾತ ಸುಖಿಯಲ್ಲ
ದುಃಖದ ಬಲ್ಲಾತ ದುಃಖಿಯಲ್ಲ
ಸುಖದುಃಖವೆರಡನೂ ಬಲ್ಲಾತ ಜ್ಞಾನಿಯಲ್ಲ
ಹುಟ್ಟದ ಮುನ್ನ ಸತ್ತವರ ಕುರುಹ ಬಲ್ಲಡೆ ಬಲ್ಲ
ಗುಹೇಶ್ವರ

೯೭೪
ಸುಖವನನುಭವಿಸಿ ಆನು-
ಸುಖದ ಹದನನು ಕಂಡೆ

ದುಃಖವನನುಭವಿಸಿ ಆನು
ದುಃಖದ ಹದನನು ಕಂಡೆ
ಸಾಕೆಂದು ನಿಂದೆ ನಿಃಭ್ರಾಂತನಾಗಿ
ಸಾಕೆಂದು ನಿಂದೆ ನಿಶ್ಚಿಂತನಾಗಿ
ಸಾಕೆಂದು ನಿಂದೆ
ಸಕಳೇಶ್ವರದೇವನಲ್ಲದೆ ಪೆರತೇನೂ ಇಲ್ಲೆಂದು
ಸಾಕೆಂದು ನಿಂದೆ

೯೭೫

ಸುಖವನರಿಯದ ಹೆಣ್ಣು ಸೂಳೆಯಾದಳು
ಲಿಂಗವನರಿಯದಾತ ಶೀಲವಂತನಾದ
ಸುಖವಿಲ್ಲ ಸೂಳೆಗೆ ಪಥವಿಲ್ಲ ಶೀಲಕ್ಕೆ
ಮಾಡಲಾಗದು ನೇಮವ ನೋಡಲಾಗದು ಶೀಲವ
ಸತ್ಯಸಹಜವೇ ಸತ್‌ಶೀಲ ಗುಹೇಶ್ವರನನರಿಯಬಲ್ಲವಂಗೆ

೯೭೬

ಸುಡಲೀ ಮನವೆನ್ನನುಡುಹನ ಮಾಡಿತ್ತು
ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು
ಬೆಡಗಿನ ಕೀಲು ಕಳೆದು ಕೆಡೆದ ಬಳಿಕ
ಕಡುಗೂರ್ಪ ಮಡದಿ ತಾ ಮುಟ್ಟಲಮ್ಮಳು
ಒಡಲನುರಿಕೊಂಬುದು ಒಡವೆಯನರಸ ಕೊಂಬ
ಕಡುಗೂರ್ಪ ಮಡದಿಯ ಮತ್ತೊಬ್ಬ ಚೆನ್ನಿಗ ಕೊಂಬ
ಮುನ್ನ ಮಾಡಿದುದು ತನ್ನ ಬೆನ್ನ ಬಿಡದನ್ನಕ್ಕ
ಇನ್ನು ನಿಮ್ಮ ನೆನಹು ಬಯಸಿದಡುಂಟೆ
ಕೂಡಲಸಂಗಮದೇವಾ

೯೭೭

ಸುಳಿಯ ಬಲ್ಲಡೆ ಸುಳುಹೆ ಲೇಸಯ್ಯ
ಗಮನವಿಲ್ಲದೆ ಸುಳಿಯ ಬಲ್ಲಡೆ
ನಿರ್ಗಮನಿಯಾಗಿ ನಿಲಬಲ್ಲಡೆ

ಅದಕ್ಕದೆ ಪರಿಣಾಮ
ಅದಕ್ಕದೆ ಸಂತೋಷ ಗುಹೇಶ್ವರಲಿಂಗದಲ್ಲಿ
ಅವರ ಜಗದಾರಾಧ್ಯರೆಂಬೆನು

೯೭೮
ಸುಳಿವ ಅನಿಲಂಗೆ ಮೈಯೆಲ್ಲ ಕೈ
ಸುಡುವ ಅನಲಂಗೆ ಭಾವವೆಲ್ಲ ಬಾಯಿ
ಹರಿವ ನೀರಿಂಗೆ ತನ್ಮಯವೆಲ್ಲ ಅಡಿ
ಅರಿಯದೆ ಮರೆಯದೆ ಮುಟ್ಟಿಹಂಗೆ
ಕಡೆ ನಡು ಮೊದಲೆಂದು ಅರ್ಪಿತವಿಲ್ಲ
ಇಲ್ಲಾ ಎಂಬ ಸೂತಕಕ್ಕೆ ಮುನ್ನವೆ ಇಲ್ಲ
ಕಾಮಧೂಮ ಧೂಳೇಶ್ವರನು

೯೭೯
ಸುಳಿವ ಸುತ್ತುವ ಮನದ ವ್ಯವಹರಣೆಯುಳ್ಳನ್ನಕ್ಕರ
ಅರಿಯೆನರಿಯ ನೆರೆ ಶಿವಪಥವ
ಗುಹೇಶ್ವರಲಿಂಗದ ನಿಜವನರಿದ ಬಳಿಕ
ಅರಿಯೆನರಿಯೆ ಲೋಕದ ಬಳಕೆಯ

೯೮೦
ಸೂಳೆಗೆ ಹುಟ್ಟಿದ ಕೂಸಿನಂತೆ
ಆರನಾದಡೆಯೂ ಅಯ್ಯಾ ಅಯ್ಯಾ ಎನಲಾರೆ
ಚೆನ್ನಯ್ಯನೆಮ್ಮಯ್ಯನು ಚೆನ್ನಯ್ಯನ ಮಗ ನಾನು
ಕೂಡಲಸಂಗನ ಮಹಾಮನೆಯಲಿ
ಧರ್ಮಸಂತಾನ ಭಂಡಾರಿ ಬಸವಣ್ಣನು

೯೮೧
ಸ್ತ್ರೀಲಿಂಗ ನಾಸ್ತಿಯಾಗಿರಬೇಕು ಗುರುವಿನಿರವು
ಪುಲ್ಲಿಂಗ ನಾಸ್ತಿಯಾಗಿರಬೇಕು ಲಿಂಗದಿರವು
ನಪುಂಸಕಲಿಂಗ ನಾಸ್ತಿಯಾಗಿರಬೇಕು ಜಂಗಮದಿರವು
ತ್ರಿವಿಧಬಿಂದು ಲಿಂಗ ನಾಸ್ತಿ

ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗವು
ನಾದ ಬಿಂದು ಕಳೆಗೆ ಹೊರಗಾಯಿತ್ತು

೯೮೨

ಸ್ಥಲಂಗಳನರಿದಿಹೆನೆಂದಡೆ ತ್ರಿವಿಧಸ್ಥಲ ಎನಗಿಲ್ಲ
ಷಡುಸ್ಥಲವ ಮುನ್ನವೆ ಅರಿಯೆ
ತತ್ವವನರಿದಿಹೆನೆಂದಡೆ ಇಪ್ಪತ್ತೈದರ ಗೊತ್ತಿನವನಲ್ಲ
ಮಿಕ್ಕಾದ ಸತ್ಕ್ರೀಯದಲ್ಲಿ ನಡೆದಿಹೆನೆಂದಡೆ
ಭಕ್ತಿ ಜ್ಞಾನ ವೈರಾಗ್ಯ ತ್ರಿವಿಧ ಲಕ್ಷ್ಯವಿಧ ನಾನಲ್ಲ
ನಿಷ್ಠೆಯಲ್ಲಿ ದೃಷ್ಟವ ಕಂಡಿಹನೆಂದಡೆ ವಿಶ್ವಾಸ ಎನಗಿಲ್ಲ
ವಿರಕ್ತಿಯಲ್ಲಿ ವೇಧಿಸಿಹೆನೆಂದಡೆ
ತ್ರಿವಿಧ ಮಲದ ಮೊತ್ತದೊಳಗೆ ಮತ್ತನಾಗಿದೇನೆ
ಮತ್ತೆ ನಿಶ್ಚಯವನರಿದಿಹೆನೆಂದಡೆ
ಆತ್ಮಂಗೆ ಲಕ್ಷವಿಡುವದೊಂದು ಗೊತ್ತ ಕಾಣೆ
ಇಂತೀ ಕಷ್ಟತನುವಿನಲ್ಲಿ ಬಂದು ಧೂರ್ತನಾಗಿ
ಕೆಟ್ಟುಹೋಗುತ್ತಿದೇನೆ
ಗುಡಿಸಿದ ಹಿಕ್ಕೆಯಲ್ಲಿ ಬಂದು ತನ್ನ ನಿಷ್ಠೆಯ ತೋರಿ
ಎನಗೆ ಸದ್ಭಕ್ತಿಯ ಬೀರಿ ವಿಶ್ವಾಸಿಗಳಿಗೆಲ್ಲಕ್ಕೆ ಕೃತ್ಯದೊಳಗಾಗಿ
ನಿತ್ಯನೇಮಂಗಳಲ್ಲಿ ಅಜ್ಯೋತಿದಂತಿರು
ನೀನೆ ಮುಕ್ತನಹೆ ನಿಜನಿತ್ಯನಹೆ ಜಗಕೆ ಕರ್ತೃವಹೆ
ಎನ್ನ ಹಿಕ್ಕೆಗೆ ಬಂದು ಸಿಕ್ಕಿದೆಯಲ್ಲಾ
ಮಹಾಮಹಿಮ ವೀರಬೀರೇಶ್ವರಾ

೯೮೩

ಸ್ಥಳ ಕುಳವನರಿಯಬೇಕೆಂಬರು
ಭಕ್ತನಾಗಿ ಮಾಹೇಶ್ವರನಾಗಬೇಕೆಂಬರು
ಮಾಹೇಶ್ವರನಾಗಿ ಪ್ರಸಾದಿಯಾಗಬೇಕೆಂಬರು
ಪ್ರಸಾದಿಯಾಗಿ ಪ್ರಾಣಲಿಂಗಿಯಾಗಬೇಕೆಂಬರು
ಪ್ರಾಣಲಿಂಗಿಯಾಗಿ ಶರಣಾಗಬೇಕೆಂಬರು
ಶರಣನಾಗಿ ಐಕ್ಯನಾಗಬೇಕೆಂಬರು
ಐಕ್ಯ ಏತರಿಂದ ಕೂಟ ನಾನರಿಯೆ

ಒಳಗಣ ಮಾತು ಹೊರಹೊಮ್ಮಿಯಲ್ಲದೆ ಎನಗೆ ಅರಿಯಬಾರದು
ಎನಗೆ ಐಕ್ಯನಾಗಿ ಶರಣಾಗಬೇಕು
ಶರಣನಾಗಿ ಪ್ರಾಣಲಿಂಗಿಯಾಗಬೇಕು
ಪ್ರಾಣಲಿಂಗಿಯಾಗಿ ಪ್ರಸಾದಿಯಾಗಬೇಕು
ಪ್ರಸಾದಿಯಾಗಿ ಮಾಹೇಶ್ವರನಾಗಬೇಕು
ಮಾಹೇಶ್ವರನಾಗಿ ಭಕ್ತನಾಗಬೇಕು
ಭಕ್ತನಾಗಿ ಸಕಲಯುಕ್ತಿಯಾಗಬೇಕು
ಯುಕ್ತಿ ನಿಶ್ಚಯವಾದಲ್ಲಿಯೆ
ಐಕ್ಯಸ್ಥಲ ಒಳಹೊರಗಾಯಿತ್ತು
ಅಲೇಖ ಲೇಖವಾಯಿತ್ತು
ಎನಗೆ ಕಾಣಬಂದಿತ್ತು
ಅಲೇಖನಾದ ಶೂನ್ಯ ಶಿಲೆಯ ಹೊರಹೊಮ್ಮಿ
ಕಂಡೆ ನಿನ್ನನ್ನು

**೯೮೪**

ಸ್ಥಾವರಭಕ್ತಂಗೆ ಸೀಮೆಯಲ್ಲದೆ
ಘನಲಿಂಗಜಂಗಮಕ್ಕೆ ಸೀಮೆಯೆಲ್ಲಿಯದು
ಅಂಬುಧಿಗೆ ಸೀಮೆಯಲ್ಲದೆ
ಹರಿವ ನದಿಗೆ ಸೀಮೆಯೆಲ್ಲಿಯದು
ಭಕ್ತಂಗೆ ಸೀಮೆಯಲ್ಲದೆ
ಜಂಗಮಕ್ಕೆ ಸೀಮೆಯುಂಟೆ
ಕೂಡಲಸಂಗಮದೇವಾ

**೯೮೫**

ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಕಂಬವ ನೆಟ್ಟು
ಆಗುಚೇಗೆಯೆಂಬ ದಡಿಗೋಲಿನಲ್ಲಿ
ಅಗಡದ ಎಮ್ಮೆಯ ಚರ್ಮವ ತೆಗೆದು
ಉಭಯನಾಮವೆಂಬ ನಾರಿನಲ್ಲಿ ತಿತ್ತಿಯನೊಪ್ಪವ ಮಾಡಿ
ಭಾವವೆಂಬ ತಿಗುಡಿನಲ್ಲಿ
ಸರ್ವಸಾರವೆಂಬ ಖಾರದ ನೀರ ಹೊಯಿದು
ಅಟ್ಟೆಯ ದುರ್ಗುಣ ಕೆಟ್ಟು

ಮೆಟ್ಟಡಿಯವರಿಗೆ ಮುಟ್ಟಿಸಬಂದೆ
ಮೆಟ್ಟಡಿಯ ತಪ್ಪಲ ಕಾಯದೆ
ಮೆಟ್ಟಡಿಯ ಬಟ್ಟೆಯ ನೋಡಿಕೊಳ್ಳಿ
ಕೈಯುಳಿ ಕತ್ತಿ ಅಡಿಗೂಂಟಕ್ಕಡಿಯಾಗಬೇಡ
ಅರಿ ನಿಜಾತ್ಮ ರಾಮ ರಾಮನಾ

೯೮೬

ಸ್ವತಂತ್ರ ಪರತಂತ್ರಕ್ಕೆ ಆವುದು ಚಿಹ್ನ ನೋಡಾ
ತಾನೆಂಬುದಳಿದು ಇದಿರೆಂಬುದ ಮರೆದು
ಭಾವದಗ್ಧವಾಗಿರಬಲ್ಲಡೆ ಅದು ಸ್ವತಂತ್ರ
ನೀನೆಂಬುದ ಧಿಃಕರಿಸಿ ತಾನೆಂಬುದ ನಿಃಕರಿಸಿ
ಉಭಯಭಾವದಲ್ಲಿ ಸನ್ನಿಹಿತವಾಗಿರಬಲ್ಲಡೆ ಪರತಂತ್ರ
ಸ್ವತಂತ್ರ ಪರತಂತ್ರವೆಂಬೆರಡನೂ ವಿವರಿಸದೆ
ತನ್ನ ಮರೆದಿಪ್ಪನೆ ಉಪಮಾತೀತನು
ಗೊಹೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆ[ಂಬುದು
ಇಂದನೆಗೆ ಕಾಣಬಂದಿತ್ತು ನೋಡಾ ಸಿದ್ಧರಾಮಯ್ಯ]

೯೮೭

ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೆ
ಎಂದೆಂದೂ ಅಳಿಯೆನೆಂದು ಗುಡಿಗಟ್ಟಿದೆಯಲ್ಲಾ ನಿನ್ನ ಮನದಲ್ಲಿ
ಮಾಯಾಮಂಜರ ಕೊಲುವಡೆ ನಿನ್ನ ಹಂಜರ ಕಾವುದೆ
ಕೂಡಲಸಂಗಮದೇವನಲ್ಲದೆ

೯೮೮

ಹಂದಿಯೂ ಮದಕರಿಯೂ ಒಂದೇ ದಾರಿಯಲ್ಲಿ ಸಂಧಿಸಿದಡೆ
ಹಂದಿಗಂಜಿ ಮದಕರಿ ಕೆಲಕ್ಕೆ ಸಾರಿದಡೆ
ಈ ಹಂದಿಯದು ಕೇಸರಿಯಪ್ಪುದೆ
ಚೆನ್ನಮಲ್ಲಿಕಾರ್ಜುನಾ

೯೮೯

ಹಂಸಪತಿ ಗರುಡಪತಿ ವೃಷಭಪತಿ
ಮೊದಲಾದ ಸರ್ವಜೀವಾಧಿಪತಿ

ದೇವರಾಯ ಮಹಾರಾಯನ ಅರಸುತನ ಹೊಸತು
ಓಲಗಕ್ಕೆ ಬಾರ
ಸಿಂಹಾಸನದಲ್ಲಿ ಕುಳ್ಳಿರ
ಸ್ತ್ರೀಲಂಪಟನಾಗಿ ಅಂತಃಪುರವ ಬಿಟ್ಟು ಹೊರವಂಡ
ಕಪ್ಪಕಾಣಿಕೆಯನೊಪ್ಪಿಸಿಕೊಂಬವರಿಲ್ಲ
ಗುರುವೆಂಬ ತಳವಾರನ ಆಜ್ಞೆ ಕೆಟ್ಟಿತ್ತು
ತೆರೆದ ಬಾಗಿಲ ಮುಚ್ಚುವರಿಲ್ಲ
ಮುಚ್ಚಿದ ಬಾಗಿಲ ತೆರೆವವರಿಲ್ಲ
ಹಂಪೆಯ ವಿರುಪಯ್ಯನ ಅರಸುತನ ಕೆಟ್ಟಿತ್ತು
ಭಕ್ತರೆಂಬವರಿನ್ನು ಬದುಕಲೇ ಬಾರದು

೯೯೦
ಹಗಲಿನ ಕೂಟಕ್ಕೆ ಹೋರಿ ಬೆಂಡಾದೆ
ಇರುಳಿನ ಕೂಟದಲ್ಲಿ ಇಂಬರಿದು ಹತ್ತಿದೆ
ಕನಸಿನಲ್ಲಿ ಮನಸಂಗವಾಗಿ ಮೈಮರೆದಿರ್ದೆ
ಮನಸ್ಸಿನಲ್ಲಿ ಮೈಮರೆದು ಒರಗಿದೆ
ಚನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆ

೯೯೧
ಹಗಲು ಮನಸಿಗಂಜಿ
ಇರುಳು ಕನಸಿಗಂಜಿ
ಧ್ಯಾನ ಮೋನಿಯಾಗಿರ್ದಳವ್ವೆ
ಸಖಿ ಬಂದು ಬೆಸಗೊಂಡಡೆ
ಏನೆಂದು ಹೇಳುವಳವ್ವೆ
ಏನೆಂದು ನುಡಿವಳವ್ವೆ
ಸಾಕಾರದಲ್ಲಿ ಸವೆಸವೆದು
ನಿರಾಕಾರದಲರ್ಪಿಸಿದಡೆ
ಮಹಾಲಿಂಗ ಗಜೇಶ್ವರನುಮೇಶ್ವರನಾಗಿರ್ದನವ್ವೆ

೯೯೨
ಹಗಲು ಹಸಿವಿಂಗೆ ಕುದಿದು
ಇರುಳು ನಿದ್ರೆಗೆ ಕುದಿದು

ಉಳಿದಾದ ಹೊತ್ತೆಲ್ಲಾ ಅಶನ ವ್ಯಸನಕ್ಕೆ ಕುದಿದು
ಅಯ್ಯಾ ನಿಮ್ಮನರಿಯದ ಪಾಪಿ ನಾನಯ್ಯಾ
ಅಯ್ಯಾ ನಿಮ್ಮನರಿಯದ ಕರ್ಮಿ ನಾನಯ್ಯಾ
ಮಹಾಲಿಂಗ ಗಜೇಶ್ವರದೇವಾ
ಅಸಗ ನೀರಡಸಿದಂತಾಯಿತ್ತೆನ್ನ ಸಂಸಾರ

೯೯೩

ಹಣ್ಣು ಮೆದ್ದ ಬಳಿಕ ಆ ಮರನನಾರು ತರಿದಡೇನು
ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿದಡೇನು
ಮಣ್ಣು ಬಿಟ್ಟ ಬಳಿಕ ಆ ಕೆಯ್ಯನಾರುತ್ತರೇನು
ಚನ್ನಮಲ್ಲಿಕಾರ್ಜುನನರಿಯದ ಬಳಿಕ
ಆ ಕಾಯವ ನಾಯಿ ತಿಂದಡೇನು
ನೀರು ಕುಡಿದಡೇನು

೯೯೪

ಹತ್ತಿ ಕದಿರು ರಾಟಿ ಮೊದಲಿಲ್ಲ ನೂಲುಂಟು
ಸೆಲದಿಯ ಹೃದಯದಲ್ಲಿ ಲಿಂಗವುಂಟು
ಭಕ್ತರ ಭಾವದಲ್ಲಿ ಲಿಂಗವುಂಟು
ರೇಕಣ್ಣಪ್ರಿಯ ನಾಗಿನಾಥನ
ಶರಣರ ಮನದ ಕೊನೆಯನೆತ್ತಿದಡೆ ಲಿಂಗದ ಗೊಂಚಲುಂಟು

೯೯೫

ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ
ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ
ಅರಿಯದುದು ಹೋಗಲಿ ಅರಿದು ಬೆರೆದೆನಾದಡೆ
ಕಾದ ಕತ್ತಿಯಲ್ಲಿ ಕಿವಿಯ ಕೊಯ್ವರಯ್ಯಾ
ಒಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ

೯೯೬

ಹಬ್ಬಕ್ಕೆ ತಂದ ಹರಕೆಯ ಕುರಿ
ತೋರಣಕ್ಕೆ ತಂದ ತಳಿರ ಮೇಯಿತ್ತು

ಕೊಂದಹರೆಂಬುದನರಿಯದೆ
ಬೆಂದ ಒಡಲ ಹೊರೆಯಹೋಯಿತ್ತು
ಅದಂದೆ ಹುಟ್ಟಿತ್ತು ಅದಂದೆ ಹೊಂದಿತ್ತು
ಕೊಂದವರುಳಿವರೆ
ಕೂಡಲಸಂಗಮದೇವಾ

೯೯೭
ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರದು ನೋಡುವ ಮಿಸುನಿಯ ಚಿನ್ನದಂತೆ
ಅರದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇರ್ದಡೆ
ಕರವಿಡಿದೆತ್ತಿಕೊಂಬ
ನಮ್ಮ ರಾಮನಾಥ

೯೯೮
ಹಗರಣಂಗಳ ನೆರಹಿ ಮಾಡುವ ಮಾಟ
ಉರಿಯನಾಲಗೆ ಕೊರಳನಪ್ಪಿದಂತಾಯಿತ್ತಯ್ಯಾ
ಒಡೆದ ಮಡಕೆಯಲಮೃತವ ತುಂಬಿ
ಮುರುವ ಕುಟ್ಟಿ ಅಟ್ಟುಂಬ ತೆರನಂತಾಯಿತ್ತಯ್ಯಾ
ಭಕ್ತದೇಹಿಕದೇವ ಮನೆಗೆ ಬಂದಡೆ ಮತ್ತೆ ಮಾಡಿಹೆನೆಂಬುದಿಲ್ಲವು
ಮೂಗಿಲ್ಲದ ಮುಖಕ್ಕೆ ಶೃಂಗಾರವ ಮಾಡಿದಂತಾಯಿತ್ತಯ್ಯಾ
ಶರಣಸನ್ನಹಿತ ಸಕಳೇಶ್ವರದೇವನ ಅರಿದೂ ಅರಿಯದಂತಿರ್ದಡೆ
ಮಳಲಗೌರಿಯ ನೋಂತು ನದಿಯಲ್ಲಿ ಬೆರಸಿದಂತಾಯಿತ್ತಯ್ಯಾ

೯೯೯
ಹರಿಗೋಲು ಹರಿದ ಮತ್ತೆ ಹೊಳೆಯೇನು ಮಾಡುವುದು
ಇರಿದವನಿದ್ದಂತೆ ಕೈದೇನ ಮಾಡುವುದು
ಎಚ್ಚವನಿದ್ದಂತೆ ಅಂಬಿಗೆ ಮುನಿವರೆ
ಎನ್ನ ಚಿತ್ತದಲ್ಲಿ ಕಲೆದೋರಿ ನೀನಾಡಿಸಿದಂತೆ ಆಡಿದೆ
ನೀ ಕೊಟ್ಟ ಕಾಯಕವ ಹೊತ್ತೆ ನೀ ಹೇಳಿದ ಬಿಟ್ಟಿಯ ಮಾಡಿದೆ

ಕುಳದವನಾದ ಮತ್ತೆ ಮಾನ್ಯರ ಒಲವರ ಎನಗೊಂದು ಗುಣವಿಲ್ಲ
ನೀನಾಡಿಸಿದಂತೆ ಆಡಿದೆ ಆತುರ ವೈರಿ ಮಾರೇಶ್ವರಾ

೧೦೦೦

ಹರಿವ ನದಿಗೆ ಮೈಯೆಲ್ಲ ಕಾಲು
ಉರಿವ ಕಿಚ್ಚಿಗೆ ಮೈಯೆಲ್ಲ ಬಾಯಿ
ಬೀಸುವ ಗಾಳಿಗೆ ಮೈಯೆಲ್ಲ ಕೈ
ಇದು ಕಾರಣ ಗುಹೇಶ್ವರ
ನಿಮ್ಮ ಶರಣಂಗೆ ಸರ್ವಾಂಗವೆಲ್ಲ ಲಿಂಗಮಯವಯ್ಯ

೧೦೦೧

ಹರಿವ ನೀರಿನ ಅಡಿಯ ಕಾಣಬಹುದಲ್ಲದೆ
ನಿಂದ ಇಂಗಡಲಿನ ಅಡಿಯ ಕಂಡವರುಂಟೆ
ಚಲನೆಯಿಂದ ತೋರಿವ ತೋರಿಕೆಯ ಕಾಣಬಹುದಲ್ಲದೆ
ಶಬ್ದ ಮುಗ್ಧವಾದ ಶರಣನ ಚಿತ್ತವ ಭೇದಿಸಬಹುದೆ
ಅದು ಸರಿಹರಿದ ಸಂಬಂಧ
ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ
ಮಾತುಳಂಗ ಮಧುಕೇಶ್ವರನು

೧೦೦೨

ಹರಿವ ಸಕಟಂಗೆ ಕಡೆಗೀಲು ಕಡೆಯಾದಲ್ಲಿ
ಆ ಗಾಲಿ ಅಡಿಯಿಡಬಲ್ಲುದೆ
ಕುರುಹಿನ ಮೂರ್ತಿಯಲ್ಲಿ ಅರಿವು ಒಡಗೂಡದಿರೆ
ಆ ಜ್ಞಾನ ಹಿಂದ ಮರೆದು ಮುಂದಕ್ಕಡಿಯಿಡಲಿಲ್ಲ
ತಡಿಯಲ್ಲಿ ನಿಂದು ಮಡುವಿನಲ್ಲಿದ್ದ ಹರುಗೋಲಕ್ಕೆ ಅಡಿಯಿಟ್ಟು
ಅದುವೊಡಗೂಡಿ ಎಯ್ದುವಂತೆ
ಕುರುಹಿನ ತಡಿ ಮರವೆಯ ಮಡು
ಮಾಡುವ ವರ್ತಕ ಹರುಗೋಲಾಗಿ
ಅರಿಕೆ ಅಂಬಿಗನಾಗಿ
ಸಂಸಾರ ಸಾಗರವ ದಾಂಟಿ
ಆ ತಡಿಯ ಮರೆಯಲದೆ ನಿಜನೆಮ್ಮುಗೆಯ ಕಳೆಬೆಳಗು
ಬೆಳಗುತ್ತದೆ ಸದಾಶಿವಮೂರ್ತಿಲಿಂಗದಲ್ಲಿ

೧೦೦೩
ಹರಿವ ಹಾವಿಂಗೆ ಕಾಲ ಕೊಟ್ಟು
ಉರಿವ ಕಿಚ್ಚಿಗೆ ಕಯ್ಯನಿಕ್ಕಿ
ಅರಿವ ಆಯುಧಕ್ಕೆ ಕೊರಳ ಕೊಟ್ಟು
ಮತ್ತೆಂತೊ ಅರುಹಿರಿಯರಾದಿರಿರಿ
ಮುಂದಕ್ಕಾತನನರಿಯಬಲ್ಲಡೆ
ಹರಿವ ಚಿತ್ತವ ನಿಲಿಸಿ
ಕುದಿವ ಆಸೆಯ ಕೆಡಿಸಿ
ಸರ್ವವ್ಯಾಪಾರವೆಂಬ ಗೊತ್ತಿಗೆ ಚಿತ್ತವನಿಕ್ಕದೆ ನಿಶ್ಚಯನಾಗಿ
ನಿಂದುದು
ಆತನಿರವೆ ಸದಾಶಿವಮೂರ್ತಿಲಿಂಗವು ತಾನೆ

೧೦೦೪
ಹಲವು ಕೊಂಬಿಂಗೆ ಹಾಯಲುಬೇಡ
ಬರಿಕಾಯಕ್ಕೆ ನೀಡಲುಬೇಡ
ಲೋಗರಿಗೆ ಕೊಟ್ಟು ಭ್ರಮಿತನಾಗಿರಬೇಡ
ಆಚಾರವೆಂಬುದು ಹಾವಸೆಗಲ್ಲು
ಭಾವತಪ್ಪಿದ ಬಳಿಕ ಏಗೈದಡಾಗದು
ಅಂಜದಿರು ಅಳುಕದಿರು ಪರದೈವಕ್ಕೆರಗದಿರು
ಕೂಡಲಸಂಗಯ್ಯನ ಕೈಯಲು ಈಸುವುದೆನ್ನ ಭಾರ

೧೦೦೫
ಹಲವು ಗಿರಿಗಳ ತಪ್ಪಲಲ್ಲಿ
ಮಲೆಯ ಮಂದಿರಗಳಲ್ಲಿ
ಬಳನೆ ಬಳನೆ ಮೇದು
ಮತ್ತೆ ತಮ್ಮ ನೆಲಹೊಲಕ್ಕೆ ತಪ್ಪದೆ ಬಪ್ಪವು ನೋಡಾ
ಆ ಪಶುವಿಂಗೆ ಕಟ್ಟು ಗೊತ್ತಿಲ್ಲ
ಕಾವ ಕಟ್ಟಿಗೆ ಒಳಗಲ್ಲ
ತಮ್ಮ ಠಾವಿಂಗೆ ಬಂದು ಹಾಲ ಕೊಟ್ಟು
ಮತ್ತೆ ತಮ್ಮ ನೆಲೆಯ ಠಾವಿಗೆ ಹೋದ ಮತ್ತೆ
ಕಾವಲು ತಪ್ಪಿಲ್ಲ ಕಾಲಕರ್ಮವಿರಹಿತ ತ್ರಿಪುರಾಂಕ
ಲಿಂಗದೊಳಗಾದವಂಗೆ

೧೦೦೬
ಹಲವು ಚಿತ್ರವ ನೆನೆವ ಮನಕ್ಕೆ ಬೇರೆ ಸಲೆ ವಸ್ತು
ಒಂದೆಂದು ನೆಲೆಯಲ್ಲಿ ನಿಲಬಲ್ಲುದೆ
ಜಲವ ತಪ್ಪಿದ ಮತ್ಸ್ಯ ಬಿಲವ ತಪ್ಪಿದ ಸರ್ಪ
ನೆಲೆಯ ತಪ್ಪಿದ ಆತ್ಮ ಬೇರೊಂದಕ್ಕೆ ಒಲವರವುಂಟೆ
ಕಳನನೇರಿಯಿಳಿದ ಮತ್ತೆ ಒಡೆಯನ ಹೊಲಬಿಲ್ಲಾ ಎಂದೆ
ಕಾಮಧೂಮ ಧೂಳೇಶ್ವರಾ

೧೦೦೭
ಹಲವು ಸಂಸರ್ಗದಿಂದ ಬಂದ ಜಲ ನಿಲವಾಗಿ
ಒಂದು ಠಾವಿನಲ್ಲಿ ನದಿ ನಾಮವಾಯಿತ್ತು
ನಾನಾಭಾವಂಗಳಲ್ಲಿ ನೊಂದು ಬಂದ ಜೀವ
ಒಂದು ನೆಲೆಯಲ್ಲಿ ನಿಂದು ಸಂದೇಹವ ಬಿಡಲಾಗಿ
ಪರಮನಾಯಿತ್ತು
ಪ್ರಕಾಶವ ಕಂಡು ಕಾಲಾಂತಕ ಭೀಮೇಶ್ವರಲಿಂಗವೆಂಬ
ನಾಮವಾಯಿತ್ತು

೧೦೦೮
ಹಸಿವಾದಡೆ ಊರೊಳಗೆ ಭಿಕ್ಷಾನ್ನಗಳುಂಟು
ತೃಷೆಯಾದಡೆ ಕೆರೆ ಹಳ್ಳ ಬಾವಿಗಳುಂಟು
ಅಂಗಶೀತಕ್ಕೆ ಬೀಸಾಟ ಅರಿವೆಗಳುಂಟು
ಶಯನಕ್ಕೆ ಹಾಳು ದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯಾ
ಆತ್ಮಸಂಗಾತಕ್ಕೆ ನೀನೆನಗುಂಟು

೧೦೦೯
ಹಸಿವಿಂಗೆ ಲಯವಿಲ್ಲ
ವಿಷಯಕ್ಕೆ ಕುಲವಿಲ್ಲ
ಮರಣಕ್ಕೆ ಮನ್ನಣೆಯಿಲ್ಲ
ಆಸೆಗೆ ಹವಣಿಲ್ಲ
ವಂಚಕನನಾಮಿಕ ನಾಚಯ್ಯಪ್ರಿಯ ಚೆನ್ನರಾಮಯ್ಯ

೧೦೧೦
ಹಸಿವೆ ನೀನು ನಿಲ್ಲು ನಿಲ್ಲು
ತೃಷೆಯೆ ನೀನು ನಿಲ್ಲು ನಿಲು
ನಿದ್ರೆಯೆ ನೀನು ನಿಲ್ಲು ನಿಲ್ಲು
ಕಾಮವೆ ನೀನು ನಿಲ್ಲು ನಿಲ್ಲು
ಕ್ರೋಧವೆ ನೀನು ನಿಲ್ಲು ನಿಲ್ಲು
ಮೋಹವೆ ನೀನು ನಿಲ್ಲು ನಿಲ್ಲು
ಲೋಭವೆ ನೀನು ನಿಲ್ಲು ನಿಲ್ಲು
ಮದವೆ ನೀನು ನಿಲ್ಲು ನಿಲ್ಲು
ಮಚ್ಚರವೆ ನೀನು ನಿಲ್ಲು ನಿಲ್ಲು
ಸಚರಾಚರವೆ ನೀನು ನಿಲ್ಲು ನಿಲ್ಲು
ನಾನು ಚೆನ್ನಮಲ್ಲಿಕಾರ್ಜುನದೇವರ
ಅವಸರದ ಓಲೆಯನೊಯ್ಯುತ್ತಲಿದ್ದೇನೆ
ಶರಣಾರ್ಥಿ

೧೦೧೧
ಹಸಿವೆಂಬ ಹೆಬ್ಬಾವು ಬಸುರ ಬಂದು ಹಿಡಿದಡೆ
ವಿಷವೇರಿತ್ತಯ್ಯಾ ಆಪಾದಮಸ್ತಕಕ್ಕೆ
ಹಸಿವಿಗನ್ನವನಿಕ್ಕಿ ವಿಷವನಿಳುಹಬಲ್ಲಡೆ
ವಸುಧೆಯೊಳಗೆ ಆತನೆ ಗಾರುಡಿಗ ಕಾಣಾ
ರಾಮನಾಥ

೧೦೧೨
ಹಸುವ ಕಾವಲ್ಲಿ ದೆಸೆಯನರಿತು
ಎತ್ತ ಕಾವಲ್ಲಿ ಪೃಥ್ವಿಯನರಿದು
ಕರುವ ಕಟ್ಟುವಲ್ಲಿ ಗೊತ್ತ ಕಂಡು
ಧನವ ಕಾವಲ್ಲಿ ಸಜ್ಜನನಾಗಿ
ಜೀವಧನವ ಕಂಡಲ್ಲಿ ಮನ ಮುಟ್ಟದೆ
ಇಂತೀ ಭೇದೇಂದ್ರಿಯಂಗಳ ತುರುಮಂದೆಯಲ್ಲಿ
ಕರು ಕಡುಸು ಎತ್ತು ಹಸುವಿನಲ್ಲಿ ಚಿತ್ರದ ವರ್ಣವನರಿಯಬೇಕು
ಗೋಪತಿನಾಥ ವಿಶ್ವೇಶ್ವರಲಿಂಗವನರಿವುದಕ್ಕೆ

೧೦೧೩
ಹಸುವಿಗೆ ಹಾಗ ಎತ್ತಿಗೆ ಹಣವಡ್ಡ
ಕರುವಿಗೆ ಮೂರು ಹಣ
ಎಮ್ಮೆ ಕೋಣಕುಲವ ನಾ ಕಾಯಲಿಲ್ಲ
ಅವು ಎನ್ನ ತುರುವಿಗೆ ಹೊರಗು
ತೊಂಡು ಹೋಗದಂತೆ ಕಾದೊಪ್ಪಿಸುವೆ
ಗೋಪತಿನಾಥ ವಿಶ್ವೇಶ್ವರಲಿಂಗಕ್ಕೆ

೧೦೧೪
ಹಳದಿಯ ಸೀರೆಯನುಟ್ಟು
ಬಳಹದೋಲೆಯ ಕಿವಿಯಲಿಕ್ಕಿ
ಮೊಳಡಂಗೆಯ ಪಿಡಿದು ಗುಲಗಂಜಿ ದಂಡೆಯ ಕಟ್ಟಿ
ತುತ್ತುರುತುರು ಎಂಬ ಕೊಳಲ ಬಾರಿಸುತ
ಅಪಳ ಚಪಳನೆಂಬ ಉಲಿವ ಗಂಟೆಯ ಕಟ್ಟಿ
ತುತ್ತುರು ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ
ಕಾವ ನಮ್ಮ ಶಂಭು ತೆಲುಗೇಶ್ವರನು ಮನೆಯ ಗೋವಳನೀತ

೧೦೧೫
ಹಳೆಗಾಲದಲೊಬ್ಬ ಪುರುಷಂಗೆ
ಎಳೆಯ ಕನ್ನಿಕೆಯ ಮದುವೆಯ ಮಾಡಲು
ಕೆಳದಿಯರೈವರು ನಿಬ್ಬಣ ಬಂದರು
ಹಸೆಯ ಮೇಲೆ ಮದವಣಿಗನ ತಂದು ನಿಲಿಸಲೊಡನೆ
ಶಶಿವದನೆ ಬಂದು ಕೈವಿಡಿದಳು
ಮೇಲುದಾಯದಲೊಬ್ಬ ಸತಿ ಕಣ್ಣು ಸನ್ನೆಯ ಮಾಡುತ್ತಿರಲು
ಕೂಡೆ ಬಂದ ನಿಬ್ಬಣಗಿತ್ತಿಯರೆಲ್ಲಾ ಹೆಂಡಿರಾದರು
ದೂರವಿಲ್ಲದ ಗಮನಕ್ಕೆ ದಾರಿ ಪಯಣ ಹಲವಾಯಿತ್ತು
ಸಾರಾಯ ನಿರ್ಣಯವನೇನೆಂಬೆ ಗುಹೇಶ್ವರ

೧೦೧೬
ಹಳ್ಳದೊಳಗೊಂದು ಹುಳ್ಳಿ ಬರುತ್ತಿರಲು
ನೊರೆತೆರೆಗಳು ತಾಗಿದವಲ್ಲಾ

ಸಂಸಾರವೆಂಬ ಸಾಗರದೊಳಗೆ
ಸುಖದುಃಖಂಗಳು ತಾಗಿದವಲ್ಲಾ
ಇದು ಕಾರಣ ಮೂರ್ತಿಯಾದುದಕ್ಕೆ ಪ್ರಳಯ ತಪ್ಪದು
ಕಾಣಾ ಗುಹೇಶ್ವರ

೧೦೧೭

ಹಾಡುವೆ ನಲ್ಲನ ಬೇಡುವೆ ನಲ್ಲನ
ಕೂಡುವೆ ನಲ್ಲನ ನಿಚ್ಚನಿಚ್ಚ
ನೋಡಾ
ಅವನೆ ಸಖನೆನಗೆ ಅವನೆ ಸುಖವೆನಗೆ ಅವನೆ ಪ್ರಾಣವು
ಕೇಳಲೆ ಕೆಳದಿ
ಉರಿಲಿಂಗದೇವನೆನಗೆ ಸಂಜೀವನ ಕೆಳದಿ

೧೦೧೮

ಹಾದರಕ್ಕೆ ಹೋದಡೆ ಕಳ್ಳದಮ್ಮವಾಯಿತ್ತು
ಹಾಳು ಗೋಡೆಗೆ ಹೋದಡೆ ಚೇಳೂರಿತ್ತು
ಅಬ್ಬರವ ಕೇಳಿ ತಳವಾರ ಉಟ್ಟ ಸೀರೆಯ ಸುಲಿದ
ನಾಚಿ ಹೋದಡೆ ಮನೆಯ ಗಂಡ ಬೆನ್ನ ಬಾರನೆತ್ತಿದ
ಅರಸು ಕೂಡಲಸಂಗಮದೇವ ದಂಡವ ಕೊಂಡ

೧೦೧೯

ಹಾರುವ ಹಕ್ಕಿಯ ಹಿಡಿದೆ
ಬೀಸುವ ಗಾಳಿಯ ಹಿಡಿದೆ
ವೈಶಾಖದ ಬಿಸಿಲ ಹಿಡಿದು ಜಗವ ಹಾಸಿ ಕಟ್ಟಿದೆ
ಒಂದು ತಾರು ಗಂಟು
ಒಂದು ಜಿಗುಳು ಗಂಟು
ಒಂದು ಕುರುಹು ಗಂಟು
ಮೂರರ ಮುದ್ರೆಯ ಮೀರಿ ಹಾರಿತ್ತು ಹಕ್ಕಿ
ಬೀಸಿತ್ತು ಗಾಳಿ
ಹುಯ್ಯಿತ್ತು ಬಿಸಿಲು
ಬಿಸಿಲ ಢಗೆ ತಾಗಿ ವಸುಧೆಯವರೆಲ್ಲರೂ

ಬಾಯಿ ಕಿಸವುತ್ತಿದ್ದರು
ಕಿಸುಕುಳರ ನೋಡಿ
ಶರೀರದ ಗೂಡಿನ ಒಡೆಯ ಗುಮ್ಮಟನ ಪ್ರಾಣ
ಅಗಮ್ಯೇಶ್ವರಲಿಂಗ
ಒಡಗೂಡುತ್ತಿದ್ದ

೧೦೨೦
ಹಾಲ ತೊರೆಗೆ ಬೆಲ್ಲದ ಕೆಸರು ಸಕ್ಕರೆಯ ಮಳಲು
ತವರಾಜದ ನೊರೆ ತೆರೆಯಂತೆ ಆದ್ಯರ ವಚನವಿರಲು
ಬೇರೆ ಬಾವಿಯ ತೋಡಿ ಉಪ್ಪನೀರನುಂಬವನ ವಿಧಿಯಂತೆ
ಆಯಿತ್ತೆನ್ನ ಮತಿ ಕೂಡಲಸಂಗಮದೇವಾ

೧೦೨೧
ಹಾವ ಹಿಡಿವುದ ಹಾವಾಡಿಗ ಬಲ್ಲನಲ್ಲದೆ
ಕಡೆಯಲಿದ್ದ ಜಾವಳಿಗನೆತ್ತ ಬಲ್ಲನು
ನೋವು ಬಂದರೆ ವ್ಯಾಧಿಯಲ್ಲಿ ನರಳುವಾತ ಬಲ್ಲನಲ್ಲದೆ
ಕಡೆಯಲಿಪ್ಪ ದುರುಳನೆತ್ತ ಬಲ್ಲನು
ದೇವ ನಿಮ್ಮ ಶರಣನು ಬೆರೆದಿಪ್ಪ ಭೇದವ
ನೋವುತ್ತ ಬೇವುತ್ತ ಧಾವತಿಗೊಳುತಿಪ್ಪ
ಗಾವಿಲರೆತ್ತ ಬಲ್ಲರು ಲಿಂಗೈಕ್ಯರನುವ
ಬಸವಪ್ರಿಯ ಕೂಡಲಚೆನ್ನಬಸವಣ್ಣಾ

೧೦೨೨
ಹಾವನೂ ಹದ್ದನೂ ಕೂಡೆ ಮೆದ್ದು
ಬೇವನೂ ಬೆಲ್ಲವನೂ ಕೂಡೆ ಕಲಸಿ
ಸಾಗರದಲ್ಲಿ ಸಾಧನೆಯ ಮಾಡುವರ ಬೇಗ ನೋಡಿ
ಅರ್ಕೇಶ್ವರಲಿಂಗನರಿವುದಕ್ಕೆ

೧೦೨೩
ಹಾವಿನ ಡೊಂಕು ಹುತ್ತಕ್ಕೆ ಸಸಿನ
ನದಿಯ ಡೊಂಕು ಸಮುದ್ರಕ್ಕೆ ಸಸಿನ
ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ

೧೦೨೪
ಹಾವಿನ ಬಿಲದಲ್ಲಿ ಕೋಲನಿಕ್ಕಲಾಗಿ
ಕೋಲ ಬೆಂಬಳಿಯಲ್ಲಿ ಹಾಯ್ವ ಹಾವಿನ ತೆರನಂತೆ
ನಿಶ್ಚಯವಸ್ತು
ಇದನರಿವುತ್ತವೆ ನಿಜವಸ್ತುವಿನ ಗುಣ
ಮೋಹದಲ್ಲಿ ಅಚ್ಚೊತ್ತಿದಂತೆ ಎರಡಳಿಯಬೇಕು
ವೀರಶೂರ ರಾಮೇಶ್ವರನಲ್ಲಿ

೧೦೨೫
ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲಡೆ
ಹಾವಿನ ಸಂಗವೆ ಲೇಸು ಕಂಡಯ್ಯಾ
ಕಾಯದ ಸಂಗವ ವಿವರಿಸಬಲ್ಲಡೆ
ಕಾಯದ ಸಂಗವೆ ಲೇಸು ಕಂಡಯ್ಯಾ
ತಾಯಿ ರಕ್ಕಸಿಯಾದಂತೆ ಕಾಯವಿಕಾರವು
ಚೆನ್ನಮಲ್ಲಿಕಾರ್ಜುನಯ್ಯಾ
ನೀನೊಲಿದವರು ಕಾಯಗೊಂಡಿದ್ದರೇನಬೇಡ

೧೦೨೬
ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ
ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕ ಬಿಡಿಸುವಂತೆ
ಹುಲಿಯ ಮೀಸೆಯ ಹಿಡಿದುಕೊಂಡು ಒಲಿದುಯ್ಯಲನಾಡುವಂತೆ
ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದಡೆ
ಸುಣ್ಣಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ

೧೦೨೭
ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು
ನೋಡಯ್ಯಾ ಬಡತನವೆಂಬ ಮಂತ್ರವಾದಿ ಹೊಗಲು
ಒಡನೆ ನುಡಿವರಯ್ಯಾ ಕೂಡಲಸಂಗಮದೇವಾ

೧೦೨೮

ಹಿಂಡನಗಲಿ ಹಿಡಿವಡೆದ ಕುಂಜರ
ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ
ಬಂಧನಕ್ಕೆ ಬಂದ ಗಿಳಿ
ತನ್ನ ಬಂಧುವ ನೆನೆವಂತೆ ನೆನೆವೆನಯ್ಯಾ
ಕಂದಾ ನೀನಿತ್ತ ಬಾ ಎಂದು
ನೀವು ನಿಮ್ಮಂದವ ತೋರಯ್ಯಾ
ಚೆನ್ನಮಲ್ಲಿಕಾರ್ಜುನಾ

೧೦೨೯

ಹಿಂದಣ ಅನಂತವನು ಮುಂದಣ ಅನಂತವನು
ಒಂದು ದಿನ ಒಳಕೊಂಡಿತ್ತು
ನೋಡಾ
ಒಂದು ದಿನವನೊಳಕೊಂಡು ಮಾತನಾಡುವ ಮಹಂತನ ಕಂಡು
ಬಲ್ಲವರಾರಯ್ಯ
ಆದ್ಯರು ವೇದ್ಯರು ಅನಂತ ಹಿರಿಯರು
ಲಿಂಗದಂತುವನರಿಯದೆ ಅಂತೆ ಹೋದರು
ಕಾಣಾ
ಗುಹೇಶ್ವರ

೧೦೩೦

ಹಿಂದಣ ಕಥೆಯ ಮುಂದೆ ಪೇಳುವ ಕಾವ್ಯವಲ್ಲ
ಮುಂದಣ ಕಥೆಯನಿಂದು ಹೇಳುವ ನಾಟಕವಲ್ಲ
ಬಂದ ಶಬ್ದವ ಸಂದಿಲ್ಲದುಸುರುವೆನೆಂಬ ಅಭ್ಯಾಸಿಯಲ್ಲ
ಛಂದ ವಿಚ್ಛಂದಯೆಂಬ ಸಂದೇಹಿಯಲ್ಲ
ಸೌರಾಷ್ಟ್ರ ಸೋಮೇಶ್ವರಾ
ನಿಮ್ಮ ಶರಣರ ಸ್ವಯಾನುಭಾವದ ಪರಿ ಬೇರೆ

೧೦೩೧

ಹಿಂದಣ ಕವಿಗಳೆನ್ನ ತೊತ್ತಿನ ಮಕ್ಕಳು
ಮುಂದಣ ಕವಿಗಳೆನ್ನ ಕರುಣದ ಕಂದಗಳು

ಆಕಾಸದ ಕವಿಗಳೆನ್ನ ತೊಟ್ಟಿಲ ಕೂಸು
ಹರಿಬ್ರಹ್ಮರೆನ್ನ ಕಕ್ಷಕುಳ
ನೀ ಮಾವ ನಾನಳಿಯ ಗುಹೇಶ್ವರ

೧೦೩೨
ಹಿಂದಣ ಸುಖ ಮುಂದಣ ದುಃಖಂಗಳು
ಮುಂದಣ ಸುಖ ಹಿಂದಣ ದುಃಖಂಗಳು
ಇವ ತಾ ಸಂಧಿಸಿ ಅನುಭವಿಸಿದಲ್ಲಿ
ಸಂಚಿತ ಪ್ರಾರಬ್ಧ ಆಗಾಮಿಗಳೆಂದು
ಅಲ್ಲಿಯಲ್ಲಿ ಸಂಕಲ್ಪಿಸಿ ಕೇಳಲೇತಕ್ಕೆ
ಹಿಂದೆ ಅಳಿದವರ ಕೇಳಿ ಮುಂದೆ ಸಾವವರ ಕಂಡು
ಅಂದಂದಿಗೆ ನೂರು ತುಂಬಿತ್ತೆಂದು
ಸಂದೇಹ ನಿವೃತ್ತಿಯಾಗಿರಬೇಕು
ಸಂಗನಬಸವಣ್ಣ ಸಾಕ್ಷಿಯಾಗಿ
ಬ್ರಹ್ಮೇಶ್ವರಲಿಂಗವನರಿವುದಕ್ಕೆ

೧೦೩೩
ಹಿಂದಾದ ದುಃಖವನೂ
ಇಂದಾದ ಸುಖವನೂ ಮರೆದೆಯಲ್ಲಾ
ಯಜಮಾನ
ನೀನು ಮರೆದ ಕಾರಣ ಬಂಧನ ಪ್ರಾಪ್ತಿಯಾಯಿತ್ತಲ್ಲಾ
ಹೇಮ ಭೂಮಿ ಕಾಮಿನಿ ಎಂಬ ಸಂಕಲೆಯಲ್ಲಿ ಬಂಧಿಸಿದರಲ್ಲಾ
ಅರಿಷಡ್ವರ್ಗವೆಂಬ ಬಂಧನದಲ್ಲಿ ದಂಡಿಸಿದರಲ್ಲಾ
ಲಿಂಗವ ಮರೆದಡೆ ಇದೇ ವಿಧಿಯಲ್ಲಾ
ಮರೆದಡೆ ಬಂಧನ ಅರಿದಡೆ ಮೋಕ್ಷ
ಅರಿದ ಯಜಮಾನ ಇನ್ನು ಮರೆಯದಿರು
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನ ಪರಿಯನು

೧೦೩೪
ಹಿಂದೆ ಎಷ್ಟು ಪ್ರಳಯ ಹೋಯಿತ್ತೆಂದರಿಯೆ
ಮುಂದೆ ಎಷ್ಟು ಪ್ರಳವಾಗುವುದೆಂದರಿಯೆ

ತನ್ನ ಸ್ಥಿತಿಯ ತಾನರಿದಡೆ ಅದೇ ಪ್ರಳಯವಲ್ಲಾ
ತನ್ನ ವಚನ ತನಗೆ ಹಗೆಯಾದಡೆ ಅದೇ ಪ್ರಳಯವಲ್ಲಾ
ಇಂಥ ಪ್ರಳಯ ನಿನ್ನಲ್ಲುಂಟೆ ಗುಹೇಶ್ವರ

೧೦೩೫
ಹಿಂದೆ ಬಯಸಿದೆ ಕಾಳುತನದಲ್ಲಿ
ಎನ್ನ ಮಂದಮತಿಯ ನೋಡದಿರಯ್ಯ
ಕೆರೆ ಬಾವಿ ಹೂದೋಟ ಚೌಕ ಛತ್ರಂಗಳ ಮಾಡಿ
ಜೀವಂಗಳ ಮೇಲೆ ಕೃಪೆಯುಂಟೆಂದು ಎನ್ನ ದಾನಿಯೆಂಬರು
ಆನು ದಾನಿಯಲ್ಲವಯ್ಯಾ ನೀ ಹೇಳಿದಂತೆ ನಾ ಮಾಡಿದೆನು
ನೀ ಬರಹೇಳಿದಲ್ಲಿ ಬಂದೆನು ನೀ ಇರಿಸಿದಂತೆ ಇದ್ದೆನು
ನಿನ್ನ ಇಚ್ಛಾಮಾತ್ರವ ಮೀರಿದೆನಾಯಿತ್ತಾದಡೆ
ಫಲಪದ ಜನನವ ಬಯಸಿದೆನಾದಡೆ ನಿಮ್ಮಾಣೆ
ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ
ಭವಕ್ಕೆ ಬರಿಸದಿರಯ್ಯಾ ನಿಮ್ಮ ಧರ್ಮ

೧೦೩೬
ಹಿಡಿವ ಕೈಯ ಮೇಲೆ ಕತ್ತಲೆಯಯ್ಯ
ನೋಡುವ ಕಂಗಳ ಮೇಲೆ ಕತ್ತಲೆಯಯ್ಯ
ನೆನೆವ ಮನದ ಮೇಲೆ ಕತ್ತಲೆಯಯ್ಯ
ಕತ್ತಲೆಯೆಂಬುದು ಇತ್ತಲೆಯಯ್ಯ
ಗುಹೇಶ್ವರನೆಂಬುದು ಅತ್ತಲೆಯಯ್ಯ

೧೦೩೭
ಹುಟ್ಟಿತ್ತಲ್ಲಾ ಉಂಟೆನಿಸಿತ್ತಲ್ಲಾ
ಕರುವಿಟ್ಟಿತ್ತಲ್ಲಾ
ರೂಪಾಯಿತ್ತಲ್ಲಾ
ನೋಡ ನೋಡ ವಾಯುಗುಂದಿತ್ತಲ್ಲಾ
ನೋಡ ನೋಡ ಭಾವಗುಂದಿತ್ತಲ್ಲಾ
ಅರಿವು ವಿಕಾರದಲ್ಲಿ ಆಯಿತ್ತು ಹೋಯಿತ್ತು
ಮಹಾಲಿಂಗ ತ್ರಿಪುರಾಂತಕಾ
ನಿಮಗೆರಗದ ತನು

೧೦೩೮
ಹುಟ್ಟುವರೆಲ್ಲರ ಹುಟ್ಟಬೇಡೆಂದೆನೆ
ಹೊಂದುವರೆಲ್ಲರ ಹೊಂದಬೇಡೆಂದೆನೆ
ಪ್ರಳಯದಲ್ಲಿ ಅಳಿವವರ ಅಳಿಯಬೇಡೆಂದೆನೆ
ಗುಹೇಶ್ವರ ನಿಮ್ಮನರಿದು ನೆರೆದ ಬಳಿಕ
ಧರೆಯ ಮೇಲುಳ್ಳವರನಿರಬೇಡೆಂದೆನೆ

೧೦೩೯
ಹುಟ್ಟುವಾತ ಮದ್ದಳೆಯ ಕಟ್ಟಿದ
ನಡೆವಾತ ತಾಳವನೊತ್ತಿದ
ಬಿಡುವಾತ ಶ್ರುತಿಯನೆತ್ತಿದ
ತತ್ಥಾಥಿತ್ಥಿ ಎಂಬಾಟ ಇತ್ತಲೇ ಉಳಿಯಿತ್ತು
ರೇಕಣ್ಣಪ್ರಿಯ ನಾಗಿನಾಥಾ

೧೦೪೦
ಹುತ್ತಕ್ಕೆ ಏಸು ಬಾಯಾದಡೇನು
ಸರ್ಪನಿಪ್ಪುದು ಒಂದೇ ಸ್ಥಾನ
ಭಾವ ಭಾವಿಸಿ ಭ್ರಮೆಯಳಿದು
ನೋಡಾ
ಆ ಭಾವ ಭಾವಿಸಲು ನಿರ್ಭಾವ
ಕೂಡಲಸಂಗಮದೇವಾ

೧೦೪೧
ಹುತ್ತವ ಬಡಿದಡೆ ಹಾವು ಸಾಯಬಲ್ಲುದೆ
ಅಯ್ಯಾ
ಅಘೋರ ತಪವ ಮಾಡಿದಡೇನು
ಅಂತರಂಗ ಆತ್ಮಶುದ್ಧಿಯಿಲ್ಲದವರನೆಂತು ನಂಬುವನಯ್ಯಾ
ಕೂಡಲಸಂಗಮದೇವ

೧೦೪೨
ಹುಲಿ ಹುತ್ತ ಕಳ್ಳರ ಹಾದಿ ಬಲುಗೈಯರ ತೆಕ್ಕೆ
ಇದು ಬಲವಂತತನದಿಂದ ಆಗದು

ಅವರವರ ಒಲವರದಿಂದಲ್ಲದೆ
ಗೆಲುವ ಮನ ಸೋಲುವ ಕಾಯ
ಈ ಉಭಯದ ಒಲವರದಿರವು
ಶರೀರದ ಸುಂಕ ಬಂಕೇಶ್ವರಲಿಂಗಕ್ಕೆ

೧೦೪೩
ಹುಲ್ಲ ಮನುಷ್ಯನ ಕಂಡು ಹುಲ್ಲೆ ತಾ ಬೆದರುವಂತೆ
ಇಲ್ಲದ ಶಂಕೆಯನುಂಟೆಂಬನ್ನಕ್ಕ
ಅದಲ್ಲಿಯೇ ರೂಪಾಯಿತ್ತು
ಹೇಡಿಗಳನೇಡಿಸಿ ಕಾಡಿತ್ತು
ಸಿಮ್ಮಲಿಗೆಯ ಚೆನ್ನರಾಮನೆಂಬ ಭಾವದ ಗಸಣಿ

೧೦೪೪
ಹುವ್ವಿನ ಮೇರಳ ತುಂಬಿ
ಹುವ್ವ ತಿಂದು ಗಂಧವನುಳುಹಿತ್ತು
ಉಳುಹಿದ ಗಂಧ ತುಂಬಿಯ ತಿಂದು
ತುಂಬಿ ಗಂಧವೊಂದೆಯಾಯಿತ್ತು
ಅದು ನಿರಂಗದಿರವು ಸದಾಶಿವಮೂರ್ತಿಲಿಂಗವು ತಾನೆ

೧೦೪೫
ಹುಸಿಯೆಂಬ ಅಲಗಿಂಗೆ ಒಡಲೆ ಗುರಿಯಾಯಿತ್ತು
ಏನೆಂಬೆನೇನೆಂಬೆ ವಿಧಿ ಮಾಡಿತ್ತ
ಸಮೆದ ಮಾಡಿಗಳು ನೆಲೆಗೊಳ್ಳದೆ ಹೋದವು
ಮಹಾಲಿಂಗ ತ್ರಿಪುರಾಂತಕನ ಶರಣರೆ
ಎನ್ನೊಡೆಯರೆಂದರಿಯದೆ ಇದ್ದ ಕಾರಣ
ತೆರಹು ಮರಹಿನಲ್ಲಿ ತಾವೆಡೆಗೊಂಡವು

೧೦೪೬
ಹೂವ ಕೊಯ್ಯುವರಲ್ಲದೆ
ಹೂವಿನ ಗಂಧವ ಕೊಯ್ವವರುಂಟೆ ಅಯ್ಯಾ
ಮಾತನಾಡುವರಲ್ಲದೆ

ಮಾತಿನ ಭೇದದ ವಾಸನೆಯ ಕಂಡವರುಂಟೆ ಅಯ್ಯಾ
ಇದು ನೀತಿಯ ಒದಗು
ಕ್ರೀಯ ನಿಹಿತವಾಗಿ ಮಾಡುವಲ್ಲಿ ಭಾವಶುದ್ಧವಾಗಿರಬೇಕು
ಮಾತನರಿದಾಡುವಲ್ಲಿ ಮಾತಿನ ರೀತಿಗೆ ತಾ ಒದಗು
ನಿಹಿತವಾಗಿರಬೇಕು
ಅದು ಕೂಟಸ್ಥ
ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಾ

೧೦೪೭
ಹೆಣ್ಣಳಿದ ಬಳಿಕ ಮಣ್ಣಿನ ಹಂಗೇಕಯ್ಯಾ
ಮಣ್ಣಳಿದ ಬಳಿಕ ಹೊನ್ನಿನ ಹಂಗೇಕಯ್ಯಾ
ಮುಕ್ಕಣ್ಣನಾದ ಬಳಿಕ ಮೂರರ ಹಂಗೇಕಯ್ಯಾ
ಕಪಿಲಸಿದ್ಧಮಲ್ಲಿಕಾರ್ಜುನ

೧೦೪೮
ಹೆಣ್ಣು ಹೆಣ್ಣಾದಡೆ ಗಂಡಿನಸೂತಕ
ಗಂಡು ಗಂಡಾದಡೆ ಹೆಣ್ಣಿನಸೂತಕ
ಮನದಸೂತಕ ಹಿಂಗಿದಡೆ
ತನುವಿನ ಸೂತಕಕ್ಕೆ ತೆರಹುಂಟೆ
ಅಯ್ಯಾ
ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ
ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗರುವಂಗೆ
ಜಗವೆಲ್ಲ ಹೆಣ್ಣು ನೋಡಾ ಅಯ್ಯಾ

೧೦೪೯
ಹೆಸರಿಲ್ಲದ ಜವನಿಕೆಯ ಮರೆಯಲ್ಲಿ ಬಂದು
ಅಸುವಿನ ಬಹುರೂಪಮಂ ತೊಟ್ಟು
ಪಶುಪತಿಯ ಅವತಾರವನಾಡುತ್ತಿರಲಾಗಿ
ಪಸುಬೆಯ ತೆರೆಯ ಹರಿದು
ಆ ಅಸು ದೆಸೆಯಲ್ಲಿ ಇಲ್ಲಾ ಎಂದೆ
ರೇಕಣ್ಣಪ್ರಿಯ ನಾಗಿನಾಥನಲ್ಲಿ ಪುರೆಹರೆ ಎನುತಿರ್ದನು

೧೦೫೦
ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು
ಹಸಿವು ಹೋಹುದೇ
ಅಂಗದ ಮೇಲೆ ಲಿಂಗಸ್ವಾಯತವಾದರೇನು
ಭಕ್ತನಾಗಬಲ್ಲನೆ
ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ
ಆ ಕಲ್ಲು ಲಿಂಗವೆ ಆ ಮೆಳೆ ಭಕ್ತನೆ
ಇಟ್ಟಾತ ಗುರುವೆ
ಇಂತಪ್ಪವರ ಕಂಡಡೆ
ನಾಚುವೆನಯ್ಯ ಗುಹೇಶ್ವರ

೧೦೫೧
ಹೊತ್ತಾರೆ ಎದ್ದು ಅಗ್ಘವಣಿ ಪತ್ರೆಯ ತಂದು
ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ
ಹೊತ್ತು ಹೋದ ಬಳಿಕ ನಿನ್ನನಾರು ಬಲ್ಲರು
ಹೊತ್ತು ಹೋಗದ ಮುನ್ನ ಮೃತ್ಯುವೊಯ್ಯದ ಮುನ್ನ
ತೊತ್ತುಗೆಲಸವ ಮಾಡು ಕೂಡಲಸಂಗಮದೇವನ

೧೦೫೨
ಹೊತ್ತಿಂಗೊಂದು ಪರಿಯಹ ಮನವ ಕಂಡು
ದಿನಕ್ಕೊಂದು ಪರಿಯಹ ತನುವ ಕಂಡು
ಅಂದಂದಿಗೆ ಭಯದೋರುತ್ತಿದೆ
ಒಂದು ನಿಮಿಷಕ್ಕನಂತವನೆ ನೆನೆವ ಮನವ ಕಂಡು
ಅಂದಂದಿಂಗೆ ಭಯವಾಗುತ್ತಿದೆ
ಈ ಮನ ನಿಮ್ಮ ನೆನೆಯಲೀಯದು
ಮನ ಹಗೆಯಾದುದಯ್ಯಾ
ಸದ್ಗುರುವೆ ಪುರದ ಮಲ್ಲಯ್ಯಾ

೧೦೫೩
ಹೊನ್ನ ತೂಗಿದ ತ್ರಾಸು ಕಟ್ಟಳೆ ಹೊನ್ನಿಂಗೆ ಸರಿಯಪ್ಪುದೆ
ಸನ್ನಿಹಿತರಾದೆವೆಂಬ ನುಡಿಗೆ ನಾಚರು ನೋಡಾ

ಕನ್ನದಲ್ಲಿ ಸವೆದ ಕಬ್ಬುನದಂತೆ
ಮುನ್ನ ಹೋದ ಹಿರಿಯರು
ಲಿಂಗದ ಸುದ್ದಿಯನರಿಯರು
ಇನ್ನಾರು ಬಲ್ಲರು ಹೇಳಾ ಗುಹೇಶ್ವರ

೧೦೫೪

ಹೊನ್ನ ಬಿಟ್ಟು ಲಿಂಗವನೊಲಿಸಬೇಕೆಂಬರು
ಹೊನ್ನಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ
ಹೆಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು
ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ
ಮಣ್ಣ ಬಿಟ್ಟು ಲಿಂಗವನೊಲಿಸಬೇಕೆಂಬರು
ಮಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ
ಅಂಗವ ಬಿಟ್ಟು ಲಿಂಗವನೊಲಿಸಬೇಕೆಂಬರು
ಅಂಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ
ಇಂದ್ರಿಯಂಗಳ ಬಿಟ್ಟು ಲಿಂಗವನೊಲಿಸಬೇಕೆಂಬರು
ಇಂದ್ರಿಯಂಗಳಿಗೆಯೂ ಲಿಂಗಕ್ಕೆಯೂ ವಿರುದ್ಧವೆ
ಜಗವ ಬಿಟ್ಟು ಲಿಂಗವನೊಲಿಸಬೇಕೆಂಬರು
ಜಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ
ಇದು ಕಾರಣ
ಪರಂಜ್ಯೋತಿ ಪರಮಕರುಣಿ ಪರಮಶಾಂತನೆಂಬ ಲಿಂಗವು
ಕೋಪದ ಮುನಿಸನರಿದಡೆ ಕಾಣಬಹುದು ಮರೆದಡೆ
ಕಾಣಬಾರದು
ಅರಿವಿಂದ ಕಂಡೊದಗಿದ ಸುಖವು ಮಸಣಯ್ಯಪ್ರಿಯ ಗಜೇಶ್ವರಾ

೧೦೫೫

ಹೊನ್ನ ಬಿಟ್ಟು ಹೆಣ್ಣ ಬಿಟ್ಟು ಮಣ್ಣ ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು
ಬಣ್ಣವಿಟ್ಟು ನುಡಿವ ಅಣ್ಣಗಳ ಪರಿಯ ನೋಡಿರೋ
ಹೆಣ್ಣು ಬಿಟ್ಟಡೆಯೂ ಹೊನ್ನ ಬಿಡರಿ
ಹೊನ್ನ ಬಿಟ್ಟಡೆಯೂ ಮಣ್ಣ ಬಿಡರಿ
ಒಂದ ಬಿಟ್ಟಡೆಯೂ ಒಂದ ಬಿಡರಿ

ಬ್ರಹ್ಮಚಾರಿಗಳೆಂತಪ್ಪಿ ಹೇಳಿರಣ್ಣಾ
ಹೆಣ್ಣ ಬಿಟ್ಟು ಬ್ರಹ್ಮಚಾರಿಗಳಾಗಬೇಕೆಂದು
ಅವರೆಂತು ಹೇಳಿದರು
ನೀವೆಂತು ಕೇಳಿದಿರಿ
ಹೆಣ್ಣನು ಹೆಣ್ಣೆಂದರಿವಿರಿ
ಹೊನ್ನನು ಹೊನ್ನೆಂದರಿವಿರಿ
ಮಣ್ಣನು ಮಣ್ಣೆಂದರಿವಿರಿ
ಬ್ರಹ್ಮಚಾರಿಗಳೆಂತಪ್ಪಿರಣ್ಣಾ
ಬಿಟ್ಟಡೆ ಹೆಣ್ಣು ಹೊನ್ನು ಮಣ್ಣು ಈ ಮೂರನು ಬಿಟ್ಟು
ಜ್ಞಾನದಲ್ಲಿ ಸುಳಿಯಲ್ಲಡೆ ಭವಂ ನಾಸ್ತಿ ತಪ್ಪದು
ಹಿಡಿದಡೆ ಹೆಣ್ಣು ಮಣ್ಣು ಹೊನ್ನು ಈ ಮೂರನು ಹಿಡಿದು
ಸದ್ಭಕ್ತಿಯಿಂದ ದಾಸೋಹವ ಮಾಡಬಲ್ಲಡೆ
ಭವಂ ನಾಸ್ತಿ ತಪ್ಪದು
ಅದೆಂತೆಂದಡೆ: ವೀರಾಗಮೇ
ಮಾತರಃ ಪಿತರಶ್ಚೈವ ಸ್ವಪತ್ನೀ ಬಾಲಕಾಸ್ತಥಾ
ಹೇಮ ಭೂಮಿರ್ನಬಂಧಾಕಾಃ ಪ್ರಾಜ್ಞಾನಂ ಬ್ರಹ್ಮಚಾರಿಣಾಂ
ಎಂದುದಾಗಿ
ಹೆಣ್ಣು ಹೊನ್ನು ಮಣ್ಣು ಈ ಮೂರನು ಹಿಡಿದು
ಸದ್ಭಕ್ತಿಯಿಂ ದಾಸೋಹವ ಮಾಡಬಲ್ಲಡೆ ಭವಂ ನಾಸ್ತಿ
ಅಲ್ಲಿ ಇದ್ದಡೆಯೂ ನೀರ ತಾವರೆಯಂತಿಪ್ಪರು
ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ ನಿಮ್ಮ ಶರಣರು

೧೦೫೬
ಹೊನ್ನಿನೊಳಗೊಂದೊರೆಯ
ಸೀರೆಯೊಳಗೊಂದೆಳೆಯ
ಅನ್ನದೊಳಗೊಂದಗುಳ
ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ
ನಿಮ್ಮಾಣೆ ನಿಮ್ಮ ಪುರಾತನರಾಣೆ
ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ
ಕೂಡಲಸಂಗಮದೇವಾ

೧೦೫೭

ಹೊನ್ನು ಭಕ್ತನೆಂಬೆನೆ
ಹೊನ್ನಿನೊಳಗಣ ಮುದ್ರೆ ಭವಿ
ಹೆಣ್ಣು ಭಕ್ತನೆಂಬೆನೆ
ಹೆಣ್ಣಿನೊಳಗಣ ವಿರಹ ಭವಿ
ಮಣ್ಣು ಭಕ್ತನೆಂಬೆನೆ
ಮಣ್ಣಿನೊಳಗಣ ಬೆಳೆಸು ಭವಿ
ಈ ತ್ರಿವಿಧ ಭವಿಯ ಕಳೆದು ಪ್ರಸಾದವ ಮಾಡಿಕೊಳ್ಳಬಲ್ಲಡೆ
ಕೂಡಲಚೆನ್ನಸಂಗನಲ್ಲಿ ಅಚ್ಚಶೀಲವಂತನೆಂಬೆ

೧೦೫೮

ಹೊನ್ನು ಮಾಯೆಯೆಂಬರು
ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯೆಂಬರು
ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯೆಂಬರು
ಮಣ್ಣು ಮಾಯೆಯಲ್ಲ
ಮನದ ಮುಂದಣ ಆಶೆಯೇ ಮಾಯೆ
ಕಾಣಾ ಗುಹೇಶ್ವರ

೧೦೫೯

ಹೊಯಿದ ಹರೆಗೆ ಕುಣಿದಾಡುವರೆಲ್ಲಾ
ಹಾಡಿದ ಗೀತಕ್ಕೆ ತಲೆದೂಗುವರೆಲ್ಲಾ
ಪಂಜರದೊಳಗಣ ಅರಗಿಳಿಯಂತೆ
ಅದು ಆಡುವದು ಹಾಡುವದು
ಸಕಳೇಶ್ವರದೇವರಲ್ಲಿ
ಅಭ್ಯಾಸಕ್ಕೆ ಮಜ್ಜನಕ್ಕೆ ಎರೆವರೆಲ್ಲಾ ಭಕ್ತರೆ

೧೦೬೦

ಹೊರಗಣ ಭವಿಯ ಕಳೆದೆವೆಂಬರು
ಒಳಗಣ ಭವಿಯ ಕಳೆಯಲರಿಯರು

ಕಾಮವೆಂಬುದೊಂದು ಭವಿ
ಕ್ರೋಧವೆಂಬುದೊಂದು ಭವಿ
ಲೋಭವೆಂಬುದೊಂದು ಭವಿ
ಮೋಹವೆಂಬುದೊಂದು ಭವಿ
ಮದವೆಂಬುದೊಂದು ಭವಿ
ಮಚ್ಚರವೆಂಬುದೊಂದು ಭವಿ
ಆಸೆಯೆಂಬುದೊಂದು ಭವಿ
ಆಮಿಷವೆಂಬುದೊಂದು ಭವಿ
ಹೊನ್ನೆಂಬುದೊಂದು ಭವಿ
ಹೆಣ್ಣೆಂಬುದೊಂದು ಭವಿ
ಮಣ್ಣೆಂಬುದೊಂದು ಭವಿ
ಇಂತೀ ಭವಿಯ ಕಳೆದುಳಿದು ನಿಂದ
ಕೂಡಲಚೆನ್ನಸಂಗಾ ನಿಮ್ಮ ಶರಣ

೧೦೬೧
ಹೊರಗಿದ್ದಹನೆಂದು ನಾನು ಮರೆದು ಮಾತನಾಡಿದೆ
ಅರಿಯಲೀಯದೆ ಬಂದೆನ್ನ ಅಂತರಂಗದಲ್ಲಿಪ್ಪನು
ತೆರಹಿಲ್ಲದಭವ ನುಡಿಗೆಡೆಗೊಡನು
ಆತನ ಬಯಲಿಂಗೆ ಬೇಟಗೊಂಡೆನವ್ವಾ
ನಾನೇನ ಮಾಡುವೆನೆಲೆ ತಾಯೆ
ಮರೆದಡೆ ಎಚ್ಚರಿಸುವ ಕುರುಹಿಲ್ಲದ ಗಂಡನು
ತನ್ನನರಿದಡೆ ಒಳ್ಳಿದನವ್ವಾ ನಮ್ಮ ಶಂಭುಜಕ್ಕೇಶ್ವರನು

೧೦೬೨
ಹೊರಿಸಿಕೊಂಡು ಹೋದ ನಾಯಿ ಮೊಲನನೇನ ಹಿಡಿವುದಯ್ಯಾ
ಇರಿಯದ ವೀರ ಇಲ್ಲದ ಸೊಬಗುವ ಹೇಳುವುದೆ ನಾಚಿಕೆ
ಆನು ಭಕ್ತನೆಂತೆಂಬೆನಯ್ಯಾ ಕೂಡಲಸಂಗಮದೇವಾ

೧೦೬೩
ಹೊಲೆಯ ಮಾದಿಗ ಭಕ್ತನಾದಡೆ
ಆತನ ಮನೆಯ ಸೊಣಗಂಗೆ

ಪಂಚಮಹಾವಾದ್ಯದಲಿ ಸನ್ಮಾನವ ಮಾಡೆನೆ
ನೆಲನನುಗ್ಘಡಿಸಿ ಉಘೇ ಚಾಂಗು ಭಲಾ ಎಂದು
ಕುಲಕಧಿಕ ಹಾರುವಂಗೆ ಸಿದ್ಧಿಗಯ್ಯೆಸಲೆ
ನಿಮ್ಮ ಶರಣರ ಮಹಿಮೆ ಘನಕ್ಕೆ ಘನ
ಎಲೆ ಎಲೆ ಕೂಡಲಸಂಗಮದೇವಾ
ನಿಮ್ಮ ನಂಬದವ ಹೊಲೆಯ

೧೦೬೪
ಹೊಲೆಯ ಹೊಲೆಯನೆಂದು ಹೊರಗಿರು ಎಂದೆಂಬರು
ಹೊಲೆಯನೆಂತವನಯ್ಯಾ
ತನ್ನ ಹೊಲೆಯ ತಾನರಿಯದೆ
ಮುನ್ನಿನವರ ಹೊಲೆಯನರಸುವ
ಭ್ರಷ್ಟರಿಗೆ ಏನೆಂಬೆನಯ್ಯಾ
ಮಹಾದಾನಿ ಕೂಡಲ ಚೆನ್ನಸಂಗಮದೇವಾ

೧೦೬೫
ಹೊಲೆಯರ ಬಾವಿಯಲೊಂದು ಎಲುನಟ್ಟಿದ್ದಡೆ
ಹೊಲೆಯೆಂಬುದು ಲೋಕವೆಲ್ಲ
ಹಲವೆಲುವಿದ್ದ ಬಾಯಿ ಒಲವರವ ನುಡಿದಡೆ
ಹೊಲೆಯರ ಬಾವಿಯಿಂದ ಕರಕಷ್ಟ ಕಾಣಾ ರಾಮನಾಥ

೧೦೬೬
ಹೊಳೆವ ಕೆಂಜೆಡೆಗಳ
ಮಣಿಮಕುಟದ ಒಪ್ಪುವ ಸುಲಿಪಲ್ಗಳ
ನಗೆಮೊಗದ ಕಂಗಳ ಕಾಂತಿಯ
ಈರೇಳು ಭುವನವ ಬೆಳಗುವ ದಿವ್ಯಸ್ವರೂಪನ ಕಂಡೆ ನಾನು
ಕಂಡೆನ್ನ ಕಂಗಳ ಬರ ಹಿಂಗಿತ್ತೆನಗೆ
ಗಂಡಗಂಡರೆಲ್ಲರ ಹೆಂಡಿರಾಗಿ ಆಳುವ
ಗರುವನ ಕಂಡೆ ನಾನು
ಜಗದಾದಿ ಶಕ್ತಿಯೊಳು ಬೆರಸಿ ಮಾತನಾಡುವ
ಪರಮಗುರು ಚೆನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು

೧೦೬೭

ಹೋತನ ಕೊಯ್ದು ಕುರಿಯ ಸುಲಿದು
ಮರಿಯ ಕೊರಳನೊತ್ತಿ ಕಾವಲ ಕುನ್ನಿಯ ಕೆಡಹಿ
ತೋಳನ ಕುಲವ ಗೆದ್ದು ಕುರುಬನ ಕುರುಹಿನ ಕುಲವಡಗಿ
ನೆರೆ ಅರಿವಿನ ಕುಲದಲ್ಲಿ ಅಡಗಬೇಕು
ವೀರಬೀರೇಶ್ವರಲಿಂಗವನರಿದ ಶರಣ

೧೦೬೮

ಹೋತು ಹುಸಿ
ಆಡು ಬಹುಮಾತಿನ ನೀತಿ
ಕುರಿ ಸಕಲೇಂದ್ರಿಯದ ನೆಲ ಹೊಲ
ತಗರು ತಥ್ಯಮಿಥ್ಯದ ಹೋರಟೆ
ಹುಲಿ ದ್ವೇಷದಾಗರ
ತೋಳ ಕೊಂದು ತಿಂಬ ಕಾಟ
ಚೋರ ಮೃತ್ಯು ಇಂತಿವು ಮೊದಲಾದ
ಬಹುವಿಧದ ಪ್ರಕೃತಿಗಳಲ್ಲಿ ಕಾಯದ ನೆಲಹೊಲನಲ್ಲಿ
ಸಕಲೇಂದ್ರಿಯವೆಂಬ ಹಿಂಡು ಮಂದೆಯಾಗಿವೇಕೊ
ಇದರ ಸಂಗವ ಬಿಡಿಸು ನಿಮ್ಮ ನಿಜದಂಗವ ತೋರಿ
ಭವಪಾಶದಂಗವ ಹರಿದು ನಿಮ್ಮ ಘನಲಿಂಗದಲ್ಲಿರಿಸು
ನೆರೆ ವೀರಬೀರೇಶ್ವರಾ

# ಅನುಬಂಧಗಳು

## ೧. ವಚನಕಾರರು ಮತ್ತು ಆಯ್ದ ವಚನಗಳ ಸೂಚಿ

**ಅಕ್ಕಮಹಾದೇವಿ (ಚನ್ನಮಲ್ಲಿಕಾರ್ಜುನ)**

**ಅಕ್ಕಮ್ಮ (ಆಚಾರವೆ ಪ್ರಾಣವಾದ ರಾಮೇಶ್ವರಲಿಂಗ)**



**ಅಘ್ಘವಣಿ ಹಂಪಯ್ಯ (ಹಂಪೆಯ ವಿರುಪಯ್ಯ)**

**ಚೆನ್ನ ಬಸವಣ್ಣ (ಕೂಡಲ ಚನ್ನಸಂಗಮ)**

**ಜೇಡರ ದಾಸಿಮಯ್ಯ (ರಾಮನಾಥ)**

**ಮೋಳಿಗೆ ಮಾರಯ್ಯ (ನಿಃಕಳಂಕಮಲ್ಲಿಕಾರ್ಜುನ)**



**ರಾಯಸದ ಮಂಚಣ್ಣ (ಜಾಂಬೇಶ್ವರಾ)**



**ರೇಚದ ಬಂಕಣ್ಣ**



**ಲದ್ದೆಯ ಸೋಮಯ್ಯ (ಲದ್ದೆಯ ಸೋಮ)**



**ವಚನಭಂಡಾರಿ ಶಾಂತರಸ (ಅಲೇಖನಾದಶೂನ್ಯ)**

**ಸಕಳೇಶ ಮಾದರಸ (ಸಕಳೇಶ್ವರ)**

| ೨. ವಚನಕಾರರು | ಅಂಕಿತಗಳು |
| --- | --- |
| ಅಂಗಸೋಂಕಿನ ಲಿಂಗ ತಂದೆ | ಭೋಗಬಂಕೇಶ್ವರಲಿಂಗ |
| ಅಂಬಿಗರ ಚೌಡಯ್ಯ | ಅಂಬಿಗರ ಚೌಡಯ್ಯ |
| ಅಕ್ಕಮಹಾದೇವಿ | ಚನ್ನಮಲ್ಲಿಕಾರ್ಜುನ |
| ಅಕ್ಕಮ್ಮ | ಆಚಾರವೆ ಪ್ರಾಣವಾದ ರಾಮೇಶ್ವರಲಿಂಗ |
| ಅಘವಣಿ ಹಂಪಯ್ಯ | ಹಂಪೆಯ ವಿರುಪಯ್ಯ |
| ಅನಾಮಿಕ ನಾಚಯ್ಯ | ಅನಾಮಿಕ ನಾಚಯ್ಯಪ್ರಿಯ ಚೆನ್ನರಾಮಯ್ಯ |
| ಆಮುಗೆ ರಾಯಮ್ಮ | ಅಮುಗೇಶ್ವರ ಲಿಂಗ |
| ಅರಿವಿನ ಮಾರಿತಂದೆ | ಸದಾಶಿವಮೂರ್ತಿಲಿಂಗ |
| ಅಲ್ಲಮ | ಗುಹೇಶ್ವರ |
| ಅವಸರದ ರೇಕಣ್ಣ | ಸದ್ಯೋಜಾತಲಿಂಗ |
| ಆದಯ್ಯ | ಸೌರಾಷ್ಟ್ರ ಸೋಮೇಶ್ವರ |
| ಆಯ್ದಕ್ಕಿ ಮಾರಯ್ಯ | ಅಮರೇಶ್ವರಲಿಂಗ |
| ಆಯ್ದಕ್ಕಿ ಲಕ್ಕಮ್ಮ | ಮಾರಯ್ಯಪ್ರಿಯ ಅಮಲೇಶ್ವರಲಿಂಗ |
| ಉಗ್ಘಡಿಸುವ ಗುಬ್ಬಿದೇವಯ್ಯ | ಕೂಡಲಸಂಗಮದೇವರಲ್ಲಿ ಬಸವಣ್ಣ |
| ಉಪ್ಪರಗುಡಿ ಸೋಮಿದೇವ | ಗಾರುಡೇಶ್ವರಲಿಂಗ |
| ಉರಿಲಿಂಗದೇವ | ಉರಿಲಿಂಗದೇವ |
| ಉರಿಲಿಂಗಪೆದ್ದಿ | ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ |
| ಉರಿಲಿಂಗಪೆದ್ದಿಗಳ ಪುಣ್ಯ ಸ್ತ್ರೀ ಕಾಳವ್ವೆ | ಉರಿಲಿಂಗಪೆದ್ದಿಗಳರಸ |
| ಎಚ್ಚರಿಕೆ ಕಾಯಕದ ಮುಕ್ತನಾಥಯ್ಯ | ಶುದ್ಧಸಿದ್ಧಪ್ರಸಿದ್ಧಪ್ರಸನ್ನ ಕುಜುಂಗೇಶ್ವರಲಿಂಗ |
| ಏಲೇಶ್ವರ ಕೇತಯ್ಯ | ಏಲೇಶ್ವರಲಿಂಗ |
| ಒಕ್ಕಲಿಗ ಮುದ್ದಯ್ಯ | ಕಾಮಭೀಮ ಜೀವಧನದೊಡೆಯ |
| ಕಂಬದ ಮಾರಿತಂದೆ | ಕದಂಬಲಿಂಗಾ |
| ಕದಿರ ರೆಮ್ಮವ್ವೆ | ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ |
| ಕನ್ನಡಿ ಕಾಯಕದ ಅಮ್ಮಿದೇವಯ್ಯ | ಚೆನ್ನಬಸವಣ್ಣಪ್ರಿಯ ಕಮಳೇಶ್ವರಲಿಂಗ |
| ಕನ್ನದ ಮಾರಿತಂದೆ | ಮಾರನವೈರಿ ಮಾರೇಶ್ವರಾ |
| ಕರುಳ ಕೇತಯ್ಯ | ಶಂಕೇಶ್ವರ |
| ಕಾಮಾಟದ ಭೀಮಣ್ಣ | ಧಾರೇಶ್ವರ |

| | |
|---|---|
| ಕಿನ್ನರಿ ಬೊಮ್ಮಯ್ಯ | ಮಹಾಲಿಂಗ ತ್ರಿಪುರಾಂತಕ |
| ಕೀಲಾರದ ಭೀಮಣ್ಣ | ತ್ರಿಪುರಾಂತಕಲಿಂಗ |
| ಕೂಗಿನ ಮಾರಯ್ಯ | ಮಹಾಮಹಿಮ ಮಾರೇಶ್ವರಾ |
| ಕೊಟ್ಟಣದ ಸೋಮಮ್ಮ | ನಿರ್ಲಜ್ಜೇಶ್ವರಾ |
| ಕೋಲ ಶಾಂತಯ್ಯ | ಪುಣ್ಯಾರಣ್ಯದಪನ ಭೀಮೇಶ್ವರಲಿಂಗ ನಿರಂಗಸಂಗ |
| ಗಂಗಾಂಬಿಕೆ | ಬಸವಣ್ಣಪ್ರಿಯ ಚೆನ್ನಸಂಗಯ್ಯಾ |
| ಗಜೇಶ ಮಸಣಯ್ಯ | ಮಹಾಲಿಂಗ ಗಜೇಶ್ವರ |
| ಗಜೇಶಮಸಣಯ್ಯನ ಪುಣ್ಯಸ್ತ್ರೀ | ಮಸಣಯ್ಯಪ್ರಿಯ ಗಜೇಶ್ವರಾ |
| ಗಾವುದಿ ಮಾಚಯ್ಯ | ತ್ರಿಪುರಾಂತಕ ಲಿಂಗವಲ್ಲಿ ಗಾವುದಿ ಮಾಚಯ್ಯ |
| ಗುಪ್ತ ಮಂಚಣ್ಣ | ನಾರಾಯಣಪ್ರಿಯ ರಾಮನಾಥಾ |
| ಗುರುಪುರದ ಮಲ್ಲಯ್ಯ | ಸದ್ಗುರು ಪುರದ ಮಲ್ಲಯ್ಯಾ |
| ಗೊಗ್ಗವ್ವೆ | ನಾಸ್ತಿನಾಥ |
| ಗೋರಕ್ಷ | ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗ |
| ಘಟ್ಟಿವಾಳಯ್ಯ | ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ |
| ಚಂದಿಮರಸ | ಸಿಮ್ಮಲಿಗೆಯ ಚೆನ್ನರಾಮ |
| ಚನ್ನಬಸವಣ್ಣ | ಕೂಡಲಚನ್ನಸಂಗಮ |
| ಜೇಡರ ದಾಸಿಮಯ್ಯ | ರಾಮನಾಥ |
| ಡಕ್ಕೆಯ ಬೊಮ್ಮಣ್ಣ | ಕಾಲಾಂತಕಭೀಮೇಶ್ವರಲಿಂಗ |
| ಡೋಹರ ಕಕ್ಕಯ್ಯ | ಅಭಿನವ ಮಲ್ಲಿಕಾರ್ಜುನಾ |
| ತಳವಾರ ಕಾಮಿದೇವಯ್ಯ | ಕಾಮಹರಪ್ರಿಯ ರಾಮನಾಥಾ |
| ತುರುಗಾಹಿ ರಾಮಣ್ಣ | ಗೋಪತಿನಾಥ ವಿಶ್ವೇಶ್ವರಲಿಂಗ |
| ತೆಲುಗೇಶ ಮಸಣಯ್ಯ | ತೆಲುಗೇಶ್ವರ |
| ದಾಸೋಹದ ಸಂಗಣ್ಣ | ಮಾತುಳಂಗ ಮಧುಕೇಶ್ವರ |
| ನಗೆಯ ಮಾರಿತಂದೆ | ಆತುರವೈರಿ ಮಾರೇಶ್ವರಾ |
| ನೀಲಮ್ಮ | ಸಂಗಯ್ಯ |
| ನುಲಿಯ ಚಂದಯ್ಯ | ಚಂದೇಶ್ವರ ಲಿಂಗ |
| ಪುರದ ನಾಗಣ್ಣ | ಅಮರಗುಂಡದ ಮಲ್ಲಿಕಾರ್ಜುನದೇವ |
| ಪ್ರಸಾದಿ ಭೋಗಣ್ಣ | ಚನ್ನಬಸವಣ್ಣಪ್ರಿಯ ಭೋಗ ಮಲ್ಲಿಕಾರ್ಜುನಲಿಂಗ |

| | |
|---|---|
| ಬಸವಣ್ಣ | ಕೂಡಲಸಂಗಮ |
| ಬಹುರೂಪಿ ಚೌಡಯ್ಯ | ರೇಕಣಪ್ರಿಯ ನಾಗಿನಾಥ |
| ಬಾಚಿಕಾಯಕದ ಬಸವಣ್ಣ | ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ ರಾಜೇಶ್ವರಲಿಂಗ |
| ಬಾಲ ಬೊಮ್ಮಣ್ಣ | ವೀರಶೂರ ರಾಮೇಶ್ವರಲಿಂಗ |
| ಬಾಹೂರ ಬೊಮ್ಮಣ್ಣ | ಬ್ರಹ್ಮೇಶ್ವರಲಿಂಗ |
| ಬಿಬ್ಬಿ ಬಾಚಯ್ಯ | ಏಣಾಂಕಧರ ಸೋಮೇಶ್ವರಲಿಂಗ |
| ಬೊಕ್ಕಸದ ಚಿಕ್ಕಣ್ಣ | ಬಸವಣ್ಣಪ್ರಿಯ ನಾಗರೇಶ್ವರಲಿಂಗಾ |
| ಭಿಕಾರಿ ಭೀಮಯ್ಯ | ಭಿಕಾರಿ ಭೀಮೇಶ್ವರಲಿಂಗ |
| ಭೋಗಣ್ಣ | ನಿಜಗುರು ಭೋಗೇಶ್ವರಾ |
| ಮಡಿವಾಳ ಮಾಚಯ್ಯ | ಕಲಿದೇವರದೇವ |
| ಮಧುವಯ್ಯ | ಅರ್ಕೇಶ್ವರಲಿಂಗ |
| ಮನಸಂದ ಮಾರಿತಂದೆ | ಮನಸಂದಿತ್ತು ಮಾರೇಶ್ವರಾ |
| ಮರುಳ ಶಂಕರದೇವ | ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತಚೆನ್ನಮಲ್ಲಿಕಾರ್ಜುನದೇವ |
| ಮಾದಾರ ಚೆನ್ನಯ್ಯ | ನಿಜಾತ್ಮ ರಾಮ ರಾಮ |
| ಮಾದಾರ ಧೂಳಯ್ಯ | ಕಾಮಧೂಮ ಧೂಳೇಶ್ವರ |
| ಮಾರೇಶ್ವರೊಡೆಯ | ಮಾರೇಶ್ವರಾ |
| ಮುಕ್ತಾಯಕ್ಕ | ಅಜಗಣ್ಣಾ |
| ಮನುಮುನಿ ಗುಮ್ಮಟದೇವ | ಗೂಡಿನ ಗುಮ್ಮಟನೊಡೆಯ ಅಗಮ್ಯೇಶ್ವರಲಿಂಗ |
| ಮುಳುಬಾವಿಯ ಸೋಮಣ್ಣ | ಮುಳುಬಾವಿಯ ಸೋಮ |
| ಮರೆಮಿಂಡಯ್ಯ | ಐಘಟದೂರ ರಾಮೇಶ್ವರ |
| ಮೈದುನ ರಾಮಯ್ಯ | ಮಹಾಲಿಂಗ ಚೆನ್ನರಾಮೇಶ್ವರ |
| ಮೋಳಿಗೆ ಮಾರಯ್ಯ | ನಿಃಕಳಂಕ ಮಲ್ಲಿಕಾರ್ಜುನ |
| ಮೋಳಿಗೆ ಮಹಾದೇವಿ | ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ |
| ರಾಯಸದ ಮಂಚಣ್ಣ | ಜಾಂಬೇಶ್ವರಾ |
| ರೇಚದ ಬಂಕಣ್ಣ | ಗೊಹೇಶ್ವರಪ್ರಿಯ ಬಂಕಣ್ಣ |
| ಲದ್ದೆಯ ಸೋಮ | ಲದ್ದೆಯ ಸೋಮ |
| ವಚನಭಂಡಾರಿ ಶಾಂತರಸ | ಆಲೇಖನಾದ ಶೂನ್ಯ |
| ವೀರಗೊಲ್ಲಾಳ | ವೀರಬೀರೇಶಲಿಂಗ |

| | |
|---|---|
| ವೀರ ಸೊಡ್ಡಳ | ಏಕಾಂತ ವೀರಸೊಡ್ಡಳಾ |
| ಶಿವಲೆಂಕಮಂಚಣ್ಣ | ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ |
| ಸಂಗಮೇಶ್ವರದ ಅಪ್ಪಣ್ಣ | ಬಸವಪ್ರಿಯ ಕೂಡಲಚೆನ್ನಸಂಗಮದೇವ |
| ಸಕಳೇಶ ಮಾದರಸ | ಸಕಳೇಶ್ವರ |
| ಸಗರದ ಬೊಮ್ಮಣ್ಣ | ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಲಿಂಗ |
| ಸತ್ಯಕ್ಕ | ಶಂಭುಜಕ್ಕೇಶ್ವರ |
| ಸಿದ್ಧರಾಮ | ಕಪಿಲಸಿದ್ಧಮಲ್ಲಿಕಾರ್ಜುನ |
| ಸುಂಕದ ಬಂಕಣ್ಣ | ಸುಂಕದೊಡೆಯ ಬಂಕೇಶ್ವರಲಿಂಗ |
| ಸೂಳೆ ಸಂಕವ್ವೆ | ನಿರ್ಲಜ್ಜೇಶ್ವರಾ |
| ಸೊಡ್ಡಳ ಬಾಚರಸ | ಸೊಡ್ಡಳ |
| ಹಡಪದ ಅಪ್ಪಣ್ಣ | ಬಸವಪ್ರಿಯ ಕೂಡಲಚೆನ್ನಬಸವಣ್ಣ |
| ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ | ಅಪ್ಪಣ್ಣಪ್ರಿಯ ಚನ್ನಬಸವಣ್ಣ |
| ಹಾವಿನಹಾಳ ಕಲ್ಲಯ್ಯ | ಮಹಾಲಿಂಗ ಕಲ್ಲೇಶ್ವರ |
| ಹೆಂಡದ ಮಾರಯ್ಯ | ಧರ್ಮೇಶ್ವರಲಿಂಗ |
| ಹೊಡೆಹುಲ್ಲ ಬಂಕಣ್ಣ | ಕುಂಭೇಶ್ವರಲಿಂಗದಲ್ಲಿದ್ದ ಜಗನ್ನಾಥ |

| ೩. ಅಂಕಿತಗಳು | ವಚನಕಾರರು |
| --- | --- |
| ಅಂಬಿಗರ ಚೌಡಯ್ಯ | ಅಂಬಿಗರ ಚೌಡಯ್ಯ |
| ಅಜಗಣ್ಣಾ | ಮುಕ್ತಾಯಕ್ಕ |
| ಅನಾಮಿಕ ನಾಚಯ್ಯಪ್ರಿಯ ಚೆನ್ನರಾಮಯ್ಯ | ಅನಾಮಿಕ ನಾಚಯ್ಯ |
| ಅಪ್ಪಣ್ಣಪ್ರಿಯ ಚನ್ನಬಸವಣ್ಣ | ಹಡಪದ ಅಪ್ಪಣ್ಣನ ಪುಣ್ಯಸ್ತ್ರೀ ಲಿಂಗಮ್ಮ |
| ಅಭಿನವ ಮಲ್ಲಿಕಾರ್ಜುನಾ | ಡೋಹರ ಕಕ್ಕಯ್ಯ |
| ಅಮರಗುಂಡದ ಮಲ್ಲಿಕಾರ್ಜುನದೇವ | ಪುರದ ನಾಗಣ್ಣ |
| ಅಮರೇಶ್ವರಲಿಂಗ | ಆಯ್ದಕ್ಕಿ ಮಾರಯ್ಯ |
| ಅಮುಗೇಶ್ವರ ಲಿಂಗ | ಆಮುಗೆ ರಾಯಮ್ಮ |
| ಅರ್ಕೇಶ್ವರಲಿಂಗ | ಮಧುವಯ್ಯ |
| ಅಲೇಖನಾದ ಶೂನ್ಯ | ವಚನಭಂಡಾರಿ ಶಾಂತರಸ |
| ಆಚಾರವೆ ಪ್ರಾಣವಾದ ರಾಮೇಶ್ವರಲಿಂಗ | ಅಕ್ಕಮ್ಮ |
| ಆತುರವೈರಿ ಮಾರೇಶ್ವರಾ | ನಗೆಯ ಮಾರಿತಂದೆ |
| ಈಶಾನ್ಯಮೂರ್ತಿ ಮಲ್ಲಿಕಾರ್ಜುನಲಿಂಗ | ಶಿವಲೆಂಕಮಂಚಣ್ಣ |
| ಉರಿಲಿಂಗದೇವ | ಉರಿಲಿಂಗದೇವ |
| ಉರಿಲಿಂಗಪೆದ್ದಿಗಳರಸ | ಉರಿಲಿಂಗಪೆದ್ದಿಗಳ ಪುಣ್ಯ ಸ್ತ್ರೀ ಕಾಳವ್ವೆ |
| ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ | ಉರಿಲಿಂಗಪೆದ್ದಿ |
| ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ | ಮೋಳಿಗೆ ಮಹಾದೇವಿ |
| ಏಕಾಂತ ವೀರಸೊಡ್ಡಳಾ | ವೀರ ಸೊಡ್ಡಳ |
| ಏಣಾಂಕಧರ ಸೋಮೇಶ್ವರಲಿಂಗ | ಬಿಬ್ಬಿ ಬಾಚಯ್ಯ |
| ಏಲೇಶ್ವರಲಿಂಗ | ಏಲೇಶ್ವರ ಕೇತಯ್ಯ |
| ಐಘಟದೂರ ರಾಮೇಶ್ವರ | ಮೆರೆಮಿಂಡಯ್ಯ |
| ಕದಂಬಲಿಂಗಾ | ಕಂಬದ ಮಾರಿತಂದೆ |
| ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ | ಕದಿರ ರೆಮ್ಮವ್ವೆ |
| ಕಪಿಲಸಿದ್ಧಮಲ್ಲಿಕಾರ್ಜುನ | ಸಿದ್ಧರಾಮ |
| ಕಲಿದೇವರದೇವ | ಮಡಿವಾಳ ಮಾಚಯ್ಯ |
| ಕಾಮಧೂಮ ಧೂಳೇಶ್ವರ | ಮಾದಾರ ಧೂಳಯ್ಯ |
| ಕಾಮಭೀಮ ಜೀವಧನದೊಡೆಯ | ಒಕ್ಕಲಿಗ ಮುದ್ದಯ್ಯ |
| ಕಾಮಹರಪ್ರಿಯ ರಾಮನಾಥಾ | ತಳವಾರ ಕಾಮಿದೇವಯ್ಯ |

| | |
|---|---|
| ಶುದ್ಧಸಿದ್ಧಪ್ರಸಿದ್ಧಪ್ರಸನ್ನ ಕುಱುಂಗೇಶ್ವರಲಿಂಗ | ಎಚ್ಚರಿಕೆ ಕಾಯಕದ ಮುಕ್ತನಾಥಯ್ಯ |
| ಸಂಗಯ್ಯ | ನೀಲಮ್ಮ |
| ಸಕಳೇಶ್ವರ | ಸಕಳೇಶ ಮಾದರಸ |
| ಸಗರದ ಬೊಮ್ಮನೊಡೆಯ ತನುಮನ ಸಂಗಮೇಶ್ವರಲಿಂಗ | ಸಗರದ ಬೊಮ್ಮಣ್ಣ |
| ಸದಾಶಿವಮೂರ್ತಿಲಿಂಗ | ಅರಿವಿನ ಮಾರಿತಂದೆ |
| ಸದ್ಗುರು ಪುರದ ಮಲ್ಲಯ್ಯಾ | ಗುರುಪುರದ ಮಲ್ಲಯ್ಯ |
| ಸದ್ಯೋಜಾತಲಿಂಗ | ಅವಸರದ ರೇಕಣ್ಣ |
| ಸಿಮ್ಮಲಿಗೆಯ ಚೆನ್ನರಾಮ | ಚಂದಿಮರಸ |
| ಸುಂಕದೊಡೆಯ ಬಂಕೇಶ್ವರಲಿಂಗ | ಸುಂಕದ ಬಂಕಣ್ಣ |
| ಸೊಡ್ಡಳ | ಸೊಡ್ಡಳ ಬಾಚರಸ |
| ಸೌರಾಷ್ಟ್ರ ಸೋಮೇಶ್ವರ | ಆದಯ್ಯ |
| ಹಂಪೆಯ ವಿರುಪಯ್ಯ | ಅಗ್ಘವಣಿ ಹಂಪಯ್ಯ |

## ೪. ಪದಾರ್ಥಕೋಶ

ಕಠಿಣ ಪದ, ಪಾರಿಭಾಷಿಕ ಪದ, ಬೆಡಗಿನ ಅರ್ಥವಿರುವ ಪ್ರಯೋಗ ಮತ್ತು ಕೆಲವು ಸಂದರ್ಭವಿವರಣೆಗಳು ಎಲ್ಲವನ್ನೂ ಇಲ್ಲಿ ಒಂದೇ ಸಾಮಾನ್ಯ ಅಕಾರಾದಿಯಲ್ಲಿ ನೀಡಲಾಗಿದೆ. ಈ ಸಂಕಲನದ ವಚನವೊಂದರ ಸಂದರ್ಭಕ್ಕೆ ಸೂಕ್ತವಾದ ಅರ್ಥವನ್ನು ಮೊದಲು ನೀಡಲಾಗಿದೆ. ಇತರ ಸಂಭವನೀಯ ಅರ್ಥಗಳನ್ನು, ಬೆಡಗಿನ ಅರ್ಥಗಳೂ ಒಳಗೊಂಡಂತೆ ನಂತರ ನೀಡಲಾಗಿದೆ. ನಮೂದು ಪದಗಳು ೧೩ **ಪಾಯಿಂಟ್ ದಪ್ಪ ಅಕ್ಷರಗಳಲ್ಲಿ** ಮತ್ತು ವಿವರಣೆಯು ೧೨ ಪಾಯಿಂಟ್ ಅಕ್ಷರಗಳಲ್ಲಿವೆ. ಅರ್ಧವಿರಾಮ [;] ಚಿಹ್ನೆಯು ಪದವೊಂದರ ಭಿನ್ನ ಅರ್ಥಗಳನ್ನು ಪ್ರತ್ಯೇಕಿಸುತ್ತದೆ. ಪ್ರಶ್ನಾರ್ಥಕ ಚಿಹ್ನೆಯು [?] ಊಹೆಯನ್ನು ಮತ್ತು ಕೇವಲ ಅದೊಂದೇ ಚಿಹ್ನೆ ಇದ್ದಾಗ ಅರ್ಥ ತಿಳಿದಿಲ್ಲವೆಂಬುದನ್ನೂ ಸೂಚಿಸುತ್ತದೆ. = ಚಿಹ್ನೆಯು ಸಮಾನಾರ್ಥಕ ರೂಪವನ್ನು ಸೂಚಿಸುತ್ತದೆ.

**ಅಂಕ** ವೀರ; ಹೋರಾಟದ ಕಣ; ಸೈನಿಕ; ತೊಡೆ

**ಅಂಕಕಾರ** ವೀರ

**ಅಂಕುರ** ಮೊಳಕೆ

**ಅಂಗ** ದೇಹ; ಶಿವನ ಅಂಶವಾಗಿರುವ ಆತ್ಮ

**ಅಂಗನೆ** ಹೆಣ್ಣು; ಪರಾಶಕ್ತಿ, ಚಿಚ್ಛಕ್ತಿ

**ಅಂಗಭೋಗ** ದೇವತಾ ವಿಗ್ರಹಕ್ಕೆ ಪರಿಮಳ ದ್ರವ್ಯಗಳನ್ನು ಲೇಪಿಸುವುದು

**ಅಂಗವಿಡಿದವ** ದೇಹಭಾವವುಳ್ಳವನು

**ಅಂಡಿಸು** ಆಸರೆಗಾಗಿ ಸಮೀಪಿಸು; ಹಿಂದೆಗೆ, ಹಿಮ್ಮೆಟ್ಟು

**ಅಂತರೀಯ ಜ್ಞಾನ** ಒಳಗಿನ ಅಂತರಂಗದ ಜ್ಞಾನ

**ಅಂತರ್ಯಾಮಿ** ಅಂತರಂಗದ ಭಾವ, ವಿಚಾರಗಳನ್ನು ನಿಯಂತ್ರಿಸುವ ಶಕ್ತಿ, ಆತ್ಮ

**ಅಂತು** ಹಾಗೆ; ಅಂತ್ಯ

**ಅಂತುವ** ರಹಸ್ಯ

**ಅಂದಣ** ಪಲ್ಲಕ್ಕಿ

**ಅಂದಮಂದದರಂದ** ?

**ಅಂಬ ಮಾಡಿ** ಬಾಣವನ್ನು ಮಾಡಿ

**ಅಂಬಿನ ಹಿಳಿಕು** ಬಾಣದ ಹಿಂಭಾಗ

**ಅಂಬು** ಬಾಣ; ನೀರು; ಜ್ಞಾನ

**ಅಂಬುಜ** ತಾವರೆ

**ಅಕ್ಕ** ಅನಾದಿ

**ಅಕ್ಕೆ** ಅಳಲು

**ಅಗಡ** ಅಕಟ ಭಯಂಕರ; ಅಗಡು-ಕ್ರೌರ್ಯ, ಕಾಮುಕತೆ; ತುಂಟತನ; ಹಂಗು; ನಿಂದನೆ

**ಅಗಲು** ದೇಹ; ಊಟದ ತಟ್ಟೆ; ಬೇರ್ಪಡು

**ಅಗಿವುತ್ತಿದೆ** ಹೆದರುತ್ತಿದೆ; ಸಂತೋಷಿಸುತ್ತಿದೆ; ಜಗಿಯುತ್ತಿದೆ, ಕೂಗುತ್ತಿದೆ

**ಅಗ್ಘವಣೆ** ಅರ್ಘ್ಯಪಾದ್ಯ, ನೀರು, ಪವಿತ್ರವಾದ ನೀರು

**ಅಗ್ನಿಸ್ತಂಭ** ಮಂತ್ರದ ಬಲದಿಂದ ಬೆಂಕಿಯ ಕಾವು ತಟ್ಟದಂತೆ ತಡೆಯುವ ಶಕ್ತಿ

**ಅಘಟದಿಂದ** ದೇಹವಿಲ್ಲದೆ

**ಅಘಟಿತಘಟಿತ** ಅಸಂಭವವನ್ನೂ ಸಂಭವ ಮಾಡಿದಾತ

**ಅಚ್ಚ ಪ್ರಸಾದ** ಭಾವ ಸೋಂಕದ ಮುನ್ನವೆ ಲಿಂಗ ಸೋಂಕಿ ಬಂದ ಪ್ರಸಾದ ಆದಯ್ಯ

**ಅಚ್ಚುಗ** =ಅಚ್ಚಗ ಕಳವಳ; ತಳಮಳ

**ಅಚ್ಚುಗವಾಗಿ** ಪ್ರಿಯವಾಗಿ

**ಅಜಕೋಟಿ ಕಲ್ಪ** ಬ್ರಹ್ಮನ ಕೋಟಿವರ್ಷಗಳ ಕಾಲಮಾನ

**ಅಜಾತ** ಹುಟ್ಟಿಲ್ಲದವನು

**ಅಟ್ಟೆ** ೧) ಪಾದರಕ್ಷೆಯ ತಳಭಾಗದ ಹಲ್ಲೆ ೨)ಮುಂಡ ೩) ಅಜ್ಞಾನ

**ಅಟ್ಟೆನೆಂದಡೆ** ಅಡುಗೆಮಾಡಿದೆನೆಂದರೆ

**ಅಡಕದೆ** ವಶವಾಗದೆ

**ಅಡಸಿ** ಆಕ್ರಮಿಸಿ, ಅಡಗಿ, ನಾಟಿ, ಚುಚ್ಚಿ

**ಅಡಿಗರಟ** ತೆಂಗಿನ ತಳದ ಚಿಪ್ಪು

**ಅಡಿಗೂಂಟ** ಅಡಿಗಲ್ಲು; ಚಪ್ಪಲಿ ಹೊಲೆಯಲು ಬಳಸುವ ಗೂಟದ ಆಕಾರದ ಸಾಧನ

**ಅಡಿವೆಜ್ಜೆ** ಪಾದ

**ಅಡ್ಡಣಿಗೆ** ಊಟದ ತಟ್ಟೆಯನ್ನಿಟ್ಟುಕೊಳ್ಳುವ ಮೂರು ಕಾಲಿನ ಮಣೆ

**ಅಣಲು** ದವಡೆ; ಬೆಂಕಿ

**ಅಣೆ** ಹಾಸು ಮತ್ತು ಹೊಕ್ಕುಗಳ ಜೋಡಣೆ

**ಅತಿಗಳೆದ** ಮೀರಿದ, ಕಡೆಗಣಿಸಿದ

**ಅತೀತ** ಮೀರಿದ

**ಅತ್ತೆ** ಶರಣನ ಹೆಂಡತಿಯಾದ ಜ್ಞಾನಶಕ್ತಿಯ ತಾಯಿ ಪರಾಶಕ್ತಿ

**ಅತ್ಯತಿಷ್ಠದ್ದಶಾಂಗುಲ** ಅರಿಯುವ, ಕಲ್ಪಿಸಿಕೊಳ್ಳುವ, ಕಾಣುವ ಎಲ್ಲದರಿಂದ ಹತ್ತಂಗುಲ ಮೀರಿ ನಿಂತವನು, ದೇವರು

**ಅದ್ವಯ** ಎರಡಿಲ್ಲದ್ದು, ಏಕ, ಅಖಂಡವಾಗಿರುವುದು

**ಅಧರ** ತುಟಿ, ಬಾಯಿ

**ಅಧವೆ** ವಿಧವೆ

**ಅನಂಗಸಂಗಿ** ಕಾಮನ ಸಂಗದಲ್ಲಿರುವವರು

**ಅನಲ** ಬೆಂಕಿ

**ಅನು** ಜೊತೆ, ಸ್ನೇಹ, ಪ್ರೀತಿ, ರೀತಿ

**ಅನುಭಾವ** ತಾನು ಅದೇ ಆಗಿ ಅನುಭವಿಸುತ್ತಿರುವ ವ್ಯಕ್ತಿ ಮತ್ತು ಅನುಭವದ ವಸ್ತುಗಳ ನಡುವೆ ಭೇದವಿಲ್ಲದಿರುವುದು, ಸಮಾನ ಅನುಭವಿಗಳ ನಡುವಿನ ಸಂವಾದ, ಶಿವನೊಡನೆ ಒಂದಾಗುವುದು, ಲಿಂಗಾಂಗಸಾಮರಸ್ಯ

**ಅನ್ನಕ್ಕ** ವರೆಗೆ, ತನಕ

**ಅನ್ನಬರ** ಅಲ್ಲಿಯವರೆಗೆ, ಆ ತನಕ

**ಅಪೇಯ** ಕುಡಿಯಲು ಅನರ್ಹವಾದದ್ದು

**ಅಪ್ಪು** ನೀರು; ಅಪ್ಪಿಕೋ; ಮನಸ್ಸು

**ಅಪ್ಪು ಬರತಿತ್ತು** ಮನಸ್ಸು ಒಣಗಿತ್ತು, ನೀರು ಒಣಗಿತ್ತು

**ಅಪ್ರಮಾಣು** ಪ್ರಮಾಣರಹಿತ

**ಅಭಿಸಂಧಿ** ಸೇರಿಕೆ, ಮೇಳ

**ಅಭಿನವ** ಹೊಸತಾದ

**ಅಮಳ** ಮಲಿನತೆಯಿಲ್ಲದ, ಶುದ್ಧವಾದ

**ಅಮೃತಗಣ** ಛಂದಸ್ಸಿನಲ್ಲಿ ಜಗಣವನ್ನು ಹೊರತುಪಡಿಸಿ ಉಳಿದ ನಾಲ್ಕು ಮಾತ್ರೆಯ ಗಣಗಳು

**ಅರಗಿನ ಕಂಭ** ಶರಣನ ಭಾವವೆಂಬ ಸ್ತಂಭ

**ಅರಗಿನ ಬೊಂಬೆ** ನಿರ್ಭಾವ ಸ್ವರೂಪದ ಪರಬ್ರಹ್ಮ; ಮಲತ್ರಯಗಳಿಂದ ಕೂಡಿದ ದೇಹ

**ಅರತ** ಮೋಹ; ಬತ್ತಿದ; ನೊಂದ

**ಅರತಿತ್ತು** ಒಣಗಿತ್ತು

**ಅರತುದು** ಬತ್ತಿತು, ಇಂಗಿತು

**ಅರಲುಗೊಂಡ ಕೆರೆ** ಕೆಸರಾದ, ಒಣಗಿದ ಕೆರೆ

**ಅರವಟಿಗೆ** ದಾರಿಗರಿಗೆ ನೀರು, ಮಜ್ಜಿಗೆಗಳನ್ನು ನೀಡುವ ಛತ್ರ

**ಅರಿ** ಕತ್ತರಿಸು; ತಿಳಿ; ರಸಬಿಡುವಂತೆ ಹಿಂಡು
**ಅರಿಕೆ** ತಿಳಿವಳಿಕೆ; ಬಯಕೆ
**ಅರಿವ** ಕತ್ತರಿಸುವ
**ಅರಿವರತು** ಅರಿವು ಬತ್ತಿಹೋಗಿ
**ಅರಿಷಡ್ವರ್ಗ** ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ
**ಅರೆ** ಅರ್ಧ; ತೇಯು; ಬಂಡೆಗಲ್ಲು; ಒಣಗು
**ಅರ್ತಿ** ಪ್ರೀತಿ, ಬಯಕೆ
**ಅರ್ತಿಗಾರಿಕೆ** ನೋವನ್ನುಂಟುಮಾಡುವಂತಹ; ಮೋಸಗಾರಿಕೆ; ಆಸೆಬುರುಕತನ
**ಅರ್ಪಿತ** ಒಪ್ಪಿಸಿದ್ದು
**ಅಲಗು** ಕತ್ತಿ
**ಅವಗವಿಸು** ಅವಗ್ರಹಿಸು, ಅರಿತುಕೋ
**ಅವಗಹಿಸು** ಅರಿತುಕೊಳ್ಳು, ಸ್ವೀಕರಿಸು
**ಅವದಿರ** ಅವರ
**ಅವಧರಿಸಿಕೊಂಡಿಪ್ಪವರಿಗೆ** ತಾಳಿಕೊಂಡಿರುವವರಿಗೆ
**ಅವಧಾನಿಸು** ಗಮನಿಸಿ ನೋಡು
**ಅವಧಿ ಜ್ಞಾನ** ತಕ್ಕ ಕಾಲದಲ್ಲಿ ಒದಗುವ ಜ್ಞಾನ
**ಅವಧೂತ** ವ್ಯವಸ್ಥಿತ ಧರ್ಮದ ಕಟ್ಟುಪಾಡುಗಳಿಗೆ ಒಳಪಡದ, ದತ್ತಾತ್ರೇಯನನ್ನು ಆರಾಧಿಸುವ ಪಂಥ
**ಅವಿತತ** ವಿಸ್ತಾರ
**ಅವಿತಥ** ಸುಳ್ಳಲ್ಲದ್ದು, ವ್ಯರ್ಥವಲ್ಲದ್ದು
**ಅವಿರತ** ನಿರಂತರ
**ಅವುಡು** ದವಡೆ
**ಅಶನ** ಅನ್ನ, ಆಹಾರ
**ಅಷ್ಟತನು** ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಚಂದ್ರ, ಸೂರ್ಯ, ಆತ್ಮ. ಈ ಎಂಟು ತನುಗಳಿಂದ ಆದ ಮೂರ್ತಿ ಅಷ್ಟತನುಮೂರ್ತಿ.
**ಅಷ್ಟಮದ** ಕುಲ, ಛಲ, ಧನ, ರೂಪ, ಯೌವನ, ವಿದ್ಯೆ, ರಾಜ, ತಪೋ ಮದಗಳು
**ಅಷ್ಟಮಲ** ಹೊನ್ನು, ಹೆಣ್ಣು, ಮಣ್ಣು, ಅನ್ನ, ನೀರು, ವಸ್ತ್ರ, ವಾಹನ, ಆಭರಣ ಇವುಗಳ ಮೇಲಿನ ಆಕಾಂಕ್ಷೆಯಿಂದ ಉಂಟಾಗುವ ಮನಸ್ಸಿನ ಮಾಲಿನ್ಯ.
**ಅಷ್ಟವಿಧಾರ್ಚನೆ** ನೀರು, ಗಂಧ, ಅಕ್ಷತೆ, ಪತ್ರಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳ ಸಮರ್ಪಣೆ.
**ಅಷ್ಟಾಂಗಯೋಗ** ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಸಮಾಧಿ
**ಅಷ್ಟಾದಶಪುರಾಣ** ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ಮಾರ್ಕಂಡೇಯ, ಭವಿಷ್ಯ, ವಾಮನ; ನಾರದೀಯ, ಗರುಡ, ಪದ್ಮ, ವರಾಹ, ವಿಷ್ಣು, ಭಾಗವತ; ಶಿವ, ಲಿಂಗ, ಸ್ಕಂದ, ಅಗ್ನಿ, ಮತ್ಸ್ಯ, ಕೂರ್ಮ ಪುರಾಣಗಳು.
**ಅಷ್ಟಾದಶವರ್ಣ** ಹದಿನೆಂಟು ಜಾತಿ
**ಅಸಗ** ಅಗಸ
**ಅಸಿ** ಕತ್ತಿ
**ಅಸಿಯ ನಡು** ಕತ್ತಿಯಂತೆ ತೆಳ್ಳನೆಯ ನಡು
**ಅಸು** ಪ್ರಾಣ
**ಅಹಂಗಾದರೆ** ಹಾಗಾದರೆ
**ಅಳಗ** ಒಂದು ಜಾತಿಯ ಕುದುರೆ (?)
**ಅಳತದ ಕೋಲು** ಅಳತೆಗೋಲು, ಗಜಕಡ್ಡಿ
**ಅಳವಡು** ಸರಿಹೊಂದು
**ಅಳವು** ಶಕ್ತಿ, ಸಾಮರ್ಥ್ಯ
**ಅಳಿ** ದುಂಬಿ
**ಅಳಿಕಾವೃದ್ಧೆ** ಅಂಜುಬುರುಕಿಯಾದ ಮುದುಕಿ
**ಅಳಿಕುಲ** ದುಂಬಿಯ ಕುಲ
**ಅಳಿಮನ** ದುರ್ಬಲ ಮನಸ್ಸು
**ಅಳಿಯ** ಆತ್ಮ, ಶರಣ

**ಅಳಿಯೆ** ಸಾಯುವುದಿಲ್ಲ
**ಅಳಿಸಂಕುಲ** ದುಂಬಿಗಳ ಸಮೂಹ
**ಅಗುಚೇಗೆ** ಲಾಭ ನಷ್ಟ
**ಆಣೆ** ಆಜ್ಞೆ
**ಆತ್ಮತ್ರಯ** ಜೀವಾತ್ಮ, ಅಂತರಾತ್ಮ, ಪರಮಾತ್ಮ
**ಆದಿ** ನಾದ; ಮೂಲಜ್ಞಾನ; ಶಿವಲಿಂಗ; ಸಕಲ; ತನು
**ಆದಿಯ ಹೆಂಡತಿ** ಜ್ಞಾನಶಕ್ತಿ, ದೇಹಭಾವ
**ಆದ್ಯರು** ಮೊದಲಿಗರು, ಪುರಾತನ ಶರಣರು, ಪ್ರಭು ಮೊದಲಾದ ಅಮರಗಣಗಳು
**ಆನೆ** ಆನೆ; ಅಹಂಕಾರ
**ಆಪಾದಮಸ್ತಕ** ಪಾದದಿಂದ ತಲೆಯವರೆಗೆ
**ಆಪ್ಯಾಯನ** ತೃಪ್ತಿ, ಹಸಿವು, ಪ್ರಸಾದದ ಏಳು ಬಗೆಗಳಲ್ಲಿ ಒಂದು
**ಆಯ** ಅಳತೆ, ಸಮತೋಲ
**ಆಯತ** ಬಂದದ್ದು, ಗುರುವಿನಿಂದ ಬಂದದ್ದು ಆಯತಲಿಂಗ, ಇಷ್ಟಲಿಂಗ
**ಆರಂಬ** ವ್ಯವಸಾಯ
**ಆರಡಿತನ** ಆಯಾಸಗೊಳ್ಳುವುದು, ಸೂರೆಹೊಡೆವುದು
**ಆರಲುಗೊಂಡು** ಗಂಟಲೊಣಗಿ, ಬಾಯಾರಿ
**ಆರವೆ** ತೋಪು, ಗಿಡ
**ಆರಿಕೆ** ಹಂಬಲ, ಬಾಯಾರಿಕೆ
**ಆರು** ಜ್ಞಾನಗಳು: ಮತಿ, ಶ್ರುತಿ, ಖಂಡ, ಕೇವಲ, ಜ್ಯೋತಿ, ಮಹಾಜ್ಯೋತಿ: ದರ್ಶನಗಳು: ಶೈವ, ಶಾಕ್ತ, ವೈಷ್ಣವ, ಸೌರ, ಗಾಣಪತ್ಯ, ಮಾಯಾವಾದಿ; ಸಾಂಖ್ಯ, ಯೋಗ, ವೈಶೇಷಿಕ, ನ್ಯಾಯ, ಪೂರ್ವಮೀಮಾಂಸೆ, ಉತ್ತರಮೀಮಾಂಸೆ ದರ್ಶನಗಳು; ಭಕ್ತಿವಿಧಗಳು: ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ, ಸಮರಸ; ಪಂಥ ಭೇದಗಳು: ಯೋಗಿ, ಜೋಗಿ, ಶ್ರಾವಕ, ಸಂನ್ಯಾಸಿ, ಪಾಶುಪತಿ, ಕಾಳಾಮುಖಿ; ಭ್ರಮೆಗಳು: ಜಾತಿ, ವರ್ಣ, ಆಶ್ರಮ, ಕುಲ, ಗೋತ್ರ, ನಾಮ ಭ್ರಮೆಗಳು; ಮುಖಗಳು: ಭೂಮಿ, ಜಲ, ಜ್ಯೋತಿ, ವಾಯು, ಆಕಾಶ, ಆತ್ಮಪ್ರಾಣ; ಲಿಂಗಗಳು ಆಚಾರ, ಗುರು, ಶಿವ, ಜಂಗಮ, ಪ್ರಸಾದ, ಮಹಾ ಲಿಂಗಗಳು; ವ್ರತಗಳು: ಗುರು, ಲಿಂಗ, ಚರ, ಪ್ರಸಾದ, ಪಾದೋದಕ, ಭಾಕ್ತಿಕ ವ್ರತಗಳು; ಶೈವಗಳು ಆದಿ, ಮಹಾ, ಅನು, ಅಂತರ, ಅಂತ್ಯ, ಪ್ರವರ ಶೈವಗಳು; ಸ್ಥಲಗುಣಗಳು: ಭಕ್ತನ ಕ್ರೀ, ಮಾಹೇಶ್ವರನ ನಿಶ್ಚಯ, ಪ್ರಸಾದಿಯ ನಿಷ್ಠೆ, ಪ್ರಾಣ ಲಿಂಗಿಯ ಯೋಗ, ಶರಣನ ನಿಬ್ಬೆರಗು ಮತ್ತು ಐಕ್ಯನ ನಿರ್ಲೇಪ ಗುಣಗಳು
**ಆರೂಢ** ಜೀವನ್ಮುಕ್ತ, ಒಂದು ಪಂಥ
**ಆಲೇಖ** ಬರವಣಿಗೆ, ಲೇಖನಿ
**ಆಲಿ** ಕಣ್ಣುಗುಡ್ಡೆ; ಕಣ್ಣು; ಆಲಿಕಲ್ಲು
**ಆವಿಗೆ** ಕುಂಬಾರನ ಒಲೆ, ಕುಲುಮೆ
**ಆವು** ಹಸು
**ಆವುಗೆ** ಕುಂಬಾರನ ಒಲೆ, ಕುಲುಮೆ
**ಆಳವಾಡಿ** ಶಕ್ತಿಗುಂದಿಸಿ? ತಿರಸ್ಕಾರಯೋಗ್ಯನನ್ನಾಗಿ ಮಾಡಿ?
**ಆಳಾಪ** ಸಂಭಾಷಣೆ, ರಾಗಾಲಾಪ
**ಆಳಿಗೊಂಡು** ಜೊತೆಗೂಡಿ
**ಆಳಿಗೊಳಲುಬೇಡ** ಕಳವಳಗೊಳ್ಳಬೇಡ
**ಆಳಿಗೊಳ್ಳು** ಹೀಯಾಳಿಸು, ಧಿಕ್ಕರಿಸು; ಹಿಂಸಿಸು; ಮೋಡಿಗೊಳ್ಳು
**ಆಳಿತನ** ಉಪೇಕ್ಷೆ, ತಿರಸ್ಕಾರ
**ಇಂಗಡಲು** ಹಾಲಿನ ಕಡಲು
**ಇಂಬನರಿಯದ** ಸವಿ, ಸಂತೋಷವರಿಯದ
**ಇಂಬು** ಆಶ್ರಯ, ಎಡೆ
**ಇಕ್ಕೆ** ಗವಿ, ಪ್ರಾಣಿಯ ವಾಸಸ್ಥಾನ

**ಇತ್ತರದ ಭದ್ರ** ಎರಡೂ ಕಡೆಯ ರಂಗಮಂಚ
**ಇದ್ದೆಸೆ** ಎರಡು ದೆಸೆ
**ಇನ್ನೇವೆ** ಇನ್ನು ಸಹಿಸಲಾರೆ
**ಇಪ್ಪತ್ತೈದು** ಸಾಂಖ್ಯದ ಇಪ್ಪತ್ತೈದು ತತ್ವಗಳು
**ಇಪ್ಪವರ** ಇರುವವರ
**ಇಪ್ಪೆಡೆ** ಇರುವ ಸ್ಥಳ
**ಇಬ್ಬರು ಮಕ್ಕಳು** ಜೀವ ಮತ್ತು ಪ್ರಾಣ
**ಇಮ್ಮನ** ಎರಡು ಮನಸ್ಸು
**ಇಮ್ಮೈಗೊಂಡಿತ್ತು** ಮೈಯನ್ನು ಎರಡಾಗುವಂತೆ ಸೀಳಿತ್ತು
**ಇರಪರ** ಇಹ ಪರ, ಬಂಧ ಮೋಕ್ಷ
**ಇರುಹು** ಇರುವೆ
**ಇಲಿ** ವಿವೇಕ
**ಇಹಂಥಾ** ಇರುವಂಥ
**ಈರೇಳು ಭುವನಂಗಳು** ಹದಿನಾಲ್ಕು ಲೋಕಗಳು; ಅತಳ, ವಿತಳ, ಸುತಳ, ಮಹೀತಳ, ತಳಾತಳ, ರಸಾತಳ, ಪಾತಾಳ, ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳು.
**ಈರೇಳುನೂರು** ಹದಿನಾಲ್ಕು ನೂರು
**ಈರೈದು** ಎರಡು ಐದು, ಹತ್ತು
**ಈಸು** ಕೊಡಿಸು; ಕೋಲು; ಈಜು; ಇಷ್ಟು
**ಈಳೆ** ಹುಳಿಯಿರುವ ಹಣ್ಣು
**ಉಂಕೆ** ನೇಯ್ಗೆಯಲ್ಲಿ ಉದ್ದುದ್ದವಾಗಿ ಹಾಸಿದ ನೂಲು
**ಉಂಗುಷ್ಠ** ಕಾಲಿನ ಹೆಬ್ಬೆರಳು
**ಉಂಡಿಗೆ** ಮುದ್ರೆ; ಗಂಟಲು; ಹಣ್ಣುಗಳ ಪರೀಕ್ಷೆಗೆ ಮಾಡುವ ಚಿಕ್ಕ ರಂಧ್ರ
**ಉಕ್ಕಡದವರು** ಊರ ಹೊರಬಾಗಿಲ ಕಾವಲುಗಾರರು
**ಉತ್ತರಸಾಧಕ** ಮೋಕ್ಷ ಸಾಧಕ
**ಉತ್ತರಾಪಥ** ವಿಂಧ್ಯದ ಉತ್ತರಕ್ಕಿರುವ ಪ್ರದೇಶ; ಮೋಕ್ಷದ ದಾರಿ, ಮೋಕ್ಷ; ಮುಂದಿನ ದಾರಿ, ಭವಿಷ್ಯ
**ಉತ್ತರಾಪಥದ ಕೊಡಗೂಸು** ಮೋಕ್ಷಮಾರ್ಗಕ್ಕೆ ಅನುಕೂಲವಾಗುವ ಜ್ಞಾನಶಕ್ತಿ
**ಉತ್ಪತ್ಯ** ಉತ್ಪತ್ತಿ
**ಉದಕ** ನೀರು; ಮನಸ್ಸು
**ಉಪಸ್ಥಲ** ಹೆಣ್ಣಿನ ಗುಪ್ತಾಂಗ
**ಉಪಾಧಿ** ಅಡೆತಡೆ, ಬಂಧನ
**ಉಪ್ಪರ ಗುಡಿ** ಎತ್ತರದಲ್ಲಿ ಕಟ್ಟಿದ ಬಾವುಟ
**ಉಭಯ ಕರ್ಮ** ಸಂಕಲ್ಪ ಮತ್ತು ವಿಕಲ್ಪವೆಂಬ ಕರ್ಮಗಳು
**ಉಭಯ ಕುಳರಹಿತ** ಎರಡೂ ವಿಷಯಗಳಿಲ್ಲದ
**ಉಭಯ** ಎರಡು, ದ್ವಂದ್ವ. ಹಲವು ಬಗೆಯ ಜೋಡಿ ಕಲ್ಪನೆಗಳನ್ನು ಸೂಚಿಸುವ ಪದ. ಸುರಾಳ ನಿರಾಳ, ಭಾವ ನಿರ್ಭಾವ, ಯೋಗ ವಿಯೋಗ, ಲಿಂಗ ಜಂಗಮ, ಕ್ರೀ ನಿಃಕ್ರೀ, ಸಾಕಾರ ನಿರಾಕಾರ ಇತ್ಯಾದಿ.
**ಉಭಯಕುಳ** ವ್ಯಾಕುಳ ಮತ್ತು ನಿರಾಕುಳ
**ಉಭಯಸಂಚ** ಎರಡರ ರಹಸ್ಯ
**ಉಮೆಯ ಕಲ್ಯಾಣ** ಗಿರಿರಾಜ ಮತ್ತು ಮೇನಕೆಯರ ಮಗಳು ಉಮೆಯನ್ನು ಸಪ್ತಋಷಿಗಳು ಶಿವನಿಗಿತ್ತು ಮದುವೆಮಾಡಿದರು ಎಂಬ ಕಥೆ.
**ಉರ** ಎದೆ
**ಉರಗ** ಹಾವು
**ಉರದುದ್ದ** ಎದೆಯುದ್ದ, ಎದೆಯೆತ್ತರ
**ಉರವಣಿಸು** ಆತುರಪಡು, ಅವಸರಿಸು; ಅರ್ಭಟಿಸು; ಸಂಭ್ರಮಿಸು
**ಉರಿ** ಜ್ಞಾನ, ಬೆಂಕಿ
**ಉರಿಯ ಚಪ್ಪರ** ಬೆಂಕಿಯ ಚಪ್ಪರ; ಮಹಾಜ್ಞಾನವೆಂಬ ಮಂಟಪ

**ಉರಿಯುಂಡ ಕರ್ಪುರ** ಜಂಕಿಗೆ ಆಹಾರವಾದ ಕರ್ಪುರ; ಲಿಂಗಾಂಗ ಸಾಮರಸ್ಯದ ಸ್ಥಿತಿ

**ಉಲಿ** ಧ್ವನಿ

**ಉಲಿವ ಉಯ್ಯಲೆ** ಮಾತಿನ ಉಯ್ಯಾಲೆ; ಇಡಾ ಮತ್ತು ಪಿಂಗಳಗಳೆಂಬ ನಾಡಿಯಲ್ಲಿ ಸಂಚರಿಸುವ ಉಸಿರಿನ ಚಲನೆ.

**ಉಲುಹಿನ ವೃಕ್ಷ** ದೇಹ

**ಉಲುಹು** ಧ್ವನಿ, ಶಬ್ದ

**ಉಲುಹುಗೆಟ್ಟೆ** ಮೌನಿಯಾದೆ

**ಉಳಲಾಟಗೊಂಡು** ಅಸ್ಥಿರಗೊಂಡು

**ಊಡದ** ಹಾಲು ಉಣ್ಣಿಸದ

**ಊಣೆಯ** ಊನ, ಕೊರತೆ

**ಊರಕ್ಕಿ ಊರೆಣ್ಣೆ** ಗ್ರಾಮದೇವತೆಯ ಪೂಜೆಗೆ ಊರಜನರಿಂದ ಸಂಗ್ರಹಿಸಿದ ಅಕ್ಕಿ, ಎಣ್ಣೆ

**ಊರ್ಧ್ವ** ಮೇಲಿನ; ಐದು ವಾಯುಗಳು; ಮೇಲಿನ ಏಳು ಲೋಕಗಳೂ ಭಕ್ತನ ದೇಹದ ಹೊಕ್ಕುಳು, ಹೊಟ್ಟೆ, ಹೃದಯ, ಎದೆ, ಗಂಟಲು, ಹಣೆ, ನೆತ್ತಿಗಳಲ್ಲೆ ಇವೆ ಎಂಬ ಕಲ್ಪನೆ.

**ಎಂಟು** ಕುಲ, ಛಲ, ಧನ, ರೂಪ, ಯೌವನ, ವಿದ್ಯಾ, ರಾಜ, ತಪೋ ಮದಗಳು; ಹೃದಯದಲ್ಲಿರುವ ಎಂಟು ದಳ ಕಮಲ ಅಹಿಂಸೆ, ಇಂದ್ರಿಯ ನಿಗ್ರಹ, ಅಹಂಕಾರ ರಹಿತ ಶಾಂತಿ, ನಿರ್ವ್ಯಾಪಾರ, ಸದ್ಭಾವ, ಬ್ರಹ್ಮಚರ್ಯ, ಸತ್ಯ, ಶಿವಜ್ಞಾನ ಸಂಪನ್ನತೆ ಇವು ಎಂಟು ದಳಗಳು

**ಎಚ್ಚು** ಬಾಣವನ್ನು ಎಸೆ, ಬಿಡು

**ಎಡರು** ಆಪತ್ತು

**ಎಡೆಗೆಯ್ಯಬೇಕು** ಉಣ್ಣಬೇಕು, ಉಣಲು ಬಡಿಸಬೇಕು

**ಎಡೆಗೋಲು** ಅಡ್ಡಗೋಲು

**ಎಡ್ಡುಗಳ್ಳತನ** ಮೋಸ, ಮೂರ್ಖತನ, ಕಳ್ಳತನಗಳ ಮಿಶ್ರಣ

**ಎತ್ತಾನು** ಎಲ್ಲಿಯಾದರೂ

**ಎನಿಸು** ಎಷ್ಟು

**ಎನ್ನುವನಿದಿರುವನೇನೆಂದರಿಯೆನು** ನನ್ನನ್ನೂ ಇದಿರಿಗಿರುವುದನ್ನೂ ಏನೆಂದು ಅರಿಯೆನು

**ಎಯಿದು** ಸೇರು, ತಲುಪು

**ಎರದ ಮುಳ್ಳು** ಎಲ(ಗ)ಚಿಯ ಮರದ ಮುಳ್ಳು

**ಎರಳೆ** ಗಂಡು ಜಿಂಕೆ; ಜೀವ

**ಎರೆ** ದಡದ ಅಂಚಿನ ಮಣ್ಣು

**ಎರೆಯ** ಒಡೆಯ

**ಎಲು** ಎಲುಬು

**ಎಲುವೆಂಬ ಹಂಜರ** ಅಸ್ಥಿಪಂಜರ

**ಎವೆ ಹಳಚಿದಡೆ** ಕಣ್ಣರೆಪ್ಪೆ ಮುಚ್ಚಿದರೆ

**ಎಸಳು** ಬೀಗದ ಕೈ, ಪದರ

**ಎಸು** ಬಾಣವನ್ನು ಎಸೆ, ಬಿಡು

**ಎಸುಗೆ** ಬಾಣವನ್ನು ಬಿಡುವ ಸಾಮರ್ಥ್ಯ

**ಎಳಕು** ಎದ್ದು ನಿಲ್ಲು, ಚಿಗುರು

**ಎಳಗ** ಟಗರು

**ಎಳಗಂತಿ** ಹೊಸತಾಗಿ ಕರುಹಾಕಿರುವ ಹಸು ಅಥವ ಎಮ್ಮೆ

**ಎಳತಟೆ** ಹೋರಾಟ, ಸೆಳೆತ

**ಎಳೆಯಾಸೆ** ಜನಿವಾರದ ಎಳೆಯ ಆಸೆ

**ಏಡಿಸಿ** ಕಾಡಿಸಿ, ಹೀಯಾಳಿಸಿ

**ಏರಿಲ್ಲದ** ಗಾಯದಗುರುತಿಲ್ಲದ

**ಏಳು** ವ್ಯಸನಗಳು ತನು, ಮನ, ಧನ, ರಾಜ್ಯ, ವಿಶ್ವ, ಉತ್ಸಾಹ, ಸೇವಕ ವ್ಯಸನಗಳು ಪ್ರಸಾದಗಳು ಆಪ್ಯಾಯನ, ಸಮಯ, ಪಂಚೇಂದ್ರಿಯ ವಿರಹಿತ, ಕರಣ ಚತುಷ್ಟಯ ವಿರಹಿತ, ಸಧ್ಭಾವ, ಸಮತೆ, ಜ್ಞಾನ ಪ್ರಸಾದಗಳು.

**ಐಗೈಮನೆ** ಐದಂಕಣದ, ಐದು ಕೈಯಳತೆಯ, ಮನೆ; ಐದು ಇಂದ್ರಿಯಗಳಿಂದಾದ ದೇಹ

**ಐದಕ್ಷರ** ನಮಃಶಿವಾಯ ಎಂಬ ಪಂಚಾಕ್ಷರೀ ಮಂತ್ರ

**ಐದರ ಗುಣ** ಮನುಷ್ಯ ದೇಹದ ಪಂಚಭೂತಗುಣಗಳು ದೇಹ ಭೂಮಿ, ಶುಕ್ಲ ಶೋಣಿತ ನೀರು, ಹಸಿವು ಬೆಂಕಿ, ಜೀವಾತ್ಮ ವಾಯು, ಬ್ರಹ್ಮರಂಧ್ರ ಆಕಾಶ.

**ಐದು ತತ್ತ್ವ** ಪಂಚಭೂತಗಳ ತತ್ವ

**ಐದು** ಪಂಚೇಂದ್ರಿಯಗಳು, ಪಂಚಭೂತಗಳು

**ಐದು ಮುಖದ ಅಂಗನೆ** ಪಂಚಭೂತಗಳೆಂಬ ಮುಖಗಳಿರುವ ಮಾಯೆ

**ಐದು ಮುಖದ ರಕ್ಕಸಿ** ಪಂಚೇಂದ್ರಿಯಗಳ ಬಾಧೆಗೆ ಒಳಪಡಿಸುವ ಮಾಯಾಶಕ್ತಿ

**ಐದುವ** ಹೊಂದುವ

**ಒಂಬತ್ತು ನಾಯಿ** ಕರಣೇಂದ್ರಿಯ ಮತ್ತು ಪಂಚೇಂದ್ರಿಯಗಳು

**ಒಂಬತ್ತು ಬಾಗಿಲು** ಶರೀರದ ನವದ್ವಾರಗಳು

**ಒಕ್ಕು** ಉಳಿದದ್ದು; ತುಳಿ; ಬೆಳೆಯಿಂದ ಕಸ ಕಡ್ಡಿಗಳನ್ನು ಬೇರ್ಪಡಿಸು

**ಒಕ್ಕುಡತೆಯುದಕ** ಒಂದು ಬೊಗಸೆ ನೀರು

**ಒಕ್ಕುದ** ಶುಭವಾದುದನ್ನು, ಒಳ್ಳೆಯದನ್ನು

**ಒಕ್ಕುದು** ಪ್ರಸಾದ: ಹೊರಸೂಸಿದ್ದು

**ಒಚ್ಚತ** ತೃಪ್ತಿಕರ; ಅತಿಶಯ; ಮೀಸಲು

**ಒಚ್ಚೊತ್ತು** ಕೆಲ ಹೊತ್ತು

**ಒಡಮನೆ** ಕೂಡುವಮನೆ, ಸೇರಿದಮನೆ

**ಒಡಹುಟ್ಟಿದವ** ಗುರುತತ್ವವನ್ನೊಳಗೊಂಡ ಶಿಷ್ಯ

**ಒಡೆದೋಡು** ಒಡೆದ ಮಣ್ಣಿನ ಪಾತ್ರೆ, ಹಂಚು

**ಒಡೆಯ** ದಣಿ, ಜಂಗಮ

**ಒಡ್ಡದ ತಳಿಗೆ** ಒಡೆದ ತಟ್ಟೆ (?)

**ಒತ್ತೆ** ಮುಂಗಡ

**ಒಪ್ಪಚ್ಚಿ** ಕೊಂಚ ಹೊತ್ತು

**ಒಮ್ಮನ** ಒಂದೇ ಮನಸ್ಸು

**ಒರೆ** ಕತ್ತಿಯನ್ನು ಇಡುವ ಒರೆ; ಉಜ್ಜು, ಪರೀಕ್ಷಿಸು

**ಒಲವರ** ಪ್ರೀತಿ

**ಒಲ್ಲಗಾಗು**

**ಒಳಬೊಳ್ಳೆ**

**ಒಳ್ಳಿದ** ಒಳ್ಳೆಯವನು

**ಒಳ್ಳಿದಳು** ಒಳ್ಳೆಯವಳು

**ಓಗರ** ಅನ್ನ

**ಓಜೆ** ವಿದ್ಯೆ; ಕ್ರಮ, ರೀತಿ

**ಓಡು** ಮಣ್ಣಿನ ಪಾತ್ರೆ, ಹಂಚು; ಓಡಿಹೋಗು; ಹೃದಯ, ಪ್ರಕೃತಿ; ತಲೆಬುರುಡೆ

**ಓತಂತೆ** ಪ್ರೀತಿಸಿದಂತೆ, ಬಚ್ಚಿಟ್ಟಂತೆ

**ಓರಂತೆ** ಸದಾ ಒಂದೇ ರೀತಿಯಲ್ಲಿ, ಅದೇ ರೀತಿಯಲ್ಲಿ

**ಓರೆಯಾವು** ಹಾಲು ಕೊಡಲೊಲ್ಲದ ಹಸು; ತುಂಟಹಸು

**ಓಲೆಕಾರ** ಯುದ್ಧಭೂಮಿಯಲ್ಲಿ ಸೈನಿಕರಿಗೆ ಆಯುಧಗಳನ್ನು ಸರಬರಾಜು ಮಾಡುವಾತ;

**ಓಸರಿಸು** ಪಕ್ಕಕ್ಕೆ ಸರಿ, ಓರೆಯಾಗು, ದೂರವಾಗು

**ಕಂಗಳ ಕರುಳು** ದೃಷ್ಟಿಗೋಚರವಾಗುವ ಭಿನ್ನತೆ, ಭಿನ್ನರೂಪ ವಿಷಯ

**ಕಂಗಳಪಟಲ** ಕಣ್ಣಿನ ಪರದೆ, ನೋಟಕ್ಕೆ ಇರುವ ಅಡ್ಡಿ

**ಕಂಗಳ** ಕಣ್ಣಿಲ್ಲದವನು

**ಕಂಗಳೊಳಗಣ ಕತ್ತಲೆ** ಜ್ಞಾನದೊಡನೆ ಬೆರೆತ ಅಜ್ಞಾನ

**ಕಂಡಿಕೆ** ಲಾಳದಲ್ಲಿ ಸೇರಿಸುವ ದಾರದ ಉಂಡೆ

**ಕಂಥೆ** ಜೋಳಿಗೆ; ಚಿಂದಿಯಾದ ಬಟ್ಟೆ

**ಕಂಭ** ದೇಹ; ದೃಢ ಬುದ್ಧಿ
**ಕಂದಲ** ಮಣ್ಣಿನ ಚಿಕ್ಕ ಪಾತ್ರೆ
**ಕಕ್ಷಕುಳ** ಕಂಕುಳಲ್ಲಿ ಸಿಕ್ಕಿದವರು (?)
**ಕಚ್ಚುಟ** ಕೌಪೀನ
**ಕಟ್ಟಣೆಯ ಗೊತ್ತು** ಕಟ್ಟುವ ಜಾಗ
**ಕಟ್ಟಿಗೆ** ಕಟ್ಟು (ಪಾಡು), ನೋಟಕ್ಕೆ ಇರುವ ಮಾನಸಿಕ ನಿರ್ಬಂಧ
**ಕಟ್ಟಿಗುಂಟ** ಕಟ್ಟುವ ಗೂಟ (?)
**ಕಟ್ಟುಗೊತ್ತು** ಕಟ್ಟುವ ಸ್ಥಾನ
**ಕಟ್ಟೋಗರ** ಕಟ್ಟಿತಂದ ಓಗರ, ಬುತ್ತಿ
**ಕಡಬಡ್ಡಿ** ಹೆಚ್ಚಿನ ಬಡ್ಡಿ
**ಕಡವರ** ಚಿನ್ನ
**ಕಡವಸ** ಋಷಿಗಳು ಕುಳಿತುಕೊಳ್ಳಲು ಬಳಸುವ ಹಾಸು ಚರ್ಮ
**ಕಡವಸದ ಸ್ವಾಮಿ** ಕಂಕುಳಲ್ಲಿ ಚರ್ಮಾಸನವನ್ನು ಸುತ್ತಿಟ್ಟುಕೊಂಡಿರುವ ಸ್ವಾಮಿ; ಚಿನ್ನವನ್ನು ಮಾಡುವ ರಸವಿದ್ಯೆಯನ್ನು ತಿಳಿದಾತ (?); ಮಿಥ್ಯಾಚರ್ಮದೇಹಿ
**ಕಡಸು** ಇನ್ನೂ ಕರು ಹಾಕದಿರುವ ಹಸು, ಎಮ್ಮೆ
**ಕಡಿಚಣ** ಕತ್ತರಿ (?), ಉಗುರು ಕತ್ತರಿಸುವ ಸಾಧನ
**ಕಡೆಗೀಲು** ಕಡಾಣಿ, ಬಂಡಿಯ ಗಾಲಿ ಜಾರದಂತೆ ತಡೆಹಿಡಿಯುವ ಕಬ್ಬಿಣದ ಕೀಲು
**ಕಡೆಯಾಣಿ** ಶುದ್ಧಚಿನ್ನ, ಅಪರಂಜಿ; ಕಾಲಿಗೆ ಹಾಕಿಕೊಳ್ಳುವ ಚಿನ್ನದ ಆಭರಣ (?)
**ಕಣ** ಧಾನ್ಯವನ್ನು ಒಕ್ಕುವ ಸ್ಥಳ; ಯುದ್ಧಭೂಮಿ
**ಕಣಿತೆ** ಗಂಟು(?); ಹರವಿ, ಪಾತ್ರೆ
**ಕಣ್ಣಕಾಡು** ಅಜ್ಞಾನ ದೃಷ್ಟಿಯೊಳಗೆ ತನ್ಮಯವಾದ ಸಂಸಾರ
**ಕಣ್ಣಡ** ಕಣ್ಣ ಪಟ್ಟಿ; ಸಂಸಾರ
**ಕಣ್ಣೆ** ಪಶುಗಳ ಕೊರಳ ಹಗ್ಗ
**ಕಣ್ಬೇಟ** ದೃಷ್ಟಿಮೈಥುನ
**ಕತ್ತಲೆ** ಅಜ್ಞಾನ; ಮಾಯೆ
**ಕದಿರು** ನೂಲು ತೆಗೆಯುವ ಸಾಧನ, ಬಣ್ಣ(?); ತೆನೆ
**ಕಬಳೀಕರಿಸು** ಬಾಯಿ ತುಂಬುವ ತುತ್ತುಮಾಡಿಕೊ
**ಕಬ್ಬದ್ದು** ಕಳ್ಳ ಹದ್ದು
**ಕಬ್ಬಲಿಗ** ಅಂಬಿಗ
**ಕಬ್ಬಿಲ** ಬಲೆ ಬೀಸಿ ಹಕ್ಕಿಗಳನ್ನು ಹಿಡಿಯುವವ; ಬೆಸ್ತ
**ಕಬ್ಬುನ ಉಂಡ ನೀರಿನಂತೆ** ದೇಹವನ್ನೊಳಗೊಂಡ ಮನಸ್ಸಿನಂತೆ
**ಕಮಟ** ನೀರಿನ ಪಾತ್ರೆ (?)
**ಕರಣಂಗಳು** ನಾಲ್ಕು ಅಂತಃಕರಣೇಂದ್ರಿಯಗಳು, ಚಿತ್ತ, ಬುದ್ಧಿ, ಅಹಂಕಾರ, ಮನಸ್ಸು
**ಕರಣೇಂದ್ರಿಯ** ನಾಲ್ಕು ಅಂತಃಕರಣೇಂದ್ರಿಯಗಳು ಮತ್ತು ಐದು ಪಂಚೇಂದ್ರಿಯಗಳು
**ಕರವಳ** ಕೈಯಳತೆ (?)
**ಕರಸ್ಥಲ** ಅಂಗೈ
**ಕರಿ** ಆನೆ; ನಾನು ಎಂಬ ಅಹಂಕಾರ
**ಕರಿಕೆ** ಗರಿಕೆ
**ಕರಿಗೊಂಡಲ್ಲಿ** ಬೆಂದುಹೋದಲ್ಲಿ, ಹುರಿದುಹೋದಲ್ಲಿ
**ಕರಿಗೊಳ್ಳುವುದು** ಸಮರಸವಾಗು, ಲಿಂಗವೇ ಆಗುವುದು
**ಕರುವಿಟ್ಟ ರೂಹು** ಅಚ್ಚೊತ್ತಿದ ರೂಪು
**ಕರುವಿನ ಬೊಂಬೆ** ಅರಗಿನ ಬೊಂಬೆ
**ಕರುವಿನ ರೂಹು** ಎರಕದ ರೂಪ, ಬೊಂಬೆ
**ಕರ್ಪರ** ಭಿಕ್ಷಾಪಾತ್ರೆ

**ಕರ್ಪುರ್** ಕಾಡಿಗೆ

**ಕರ್ಮಕಾಂಡಿ** ವೇದಗಳ ಕರ್ಮಕಾಂಡವನ್ನು, ಆಚರಣೆಯ ಭಾಗ, ನಂಬುವಾತ

**ಕಲಕೇತ** ವೇಷಧಾರಿಯಾಗಿ ಹಣ ಸಂಪಾದಿಸುವಾತ, ಮಾಯಗಾರ

**ಕವಳಿಗೆ** ಶಿವನ ಕೈಯ ಭಿಕ್ಷಾಪಾತ್ರ; ಸಾಲು; ವೀಳೆಯದೆಲೆಯ ಕಟ್ಟು

**ಕವುಳಿಕ** ಮೋಸಗಾರಿಕೆ; ಡಂಭಕತನ

**ಕವುಳುಗೋಲು** ಗರಡಿಯ ಮನೆಯಲ್ಲಿ ಅಭ್ಯಾಸಕ್ಕಾಗಿ ಉಪಯೋಗಿಸುವ ಆಯುಧ

**ಕಹರು** ?

**ಕಳ** ಹೋರಾಟದ ಅಂಕಣ, ಅಖಾಡ

**ಕಳವೆ** ಬತ್ತ

**ಕಳಹಂಸಿ** ರಾಜಹಂಸ

**ಕಳೆಯರತ ದೀಪ** ಬೆಳಕು ಆರಿಹೋದ ದೀಪ

**ಕಳ್ಳದಮ್ಮ** ಕಳ್ಳನಾಣ್ಯ, ಖೋಟಾ ನಾಣ್ಯ

**ಕಾಂಬ** ಕಾಣುವ

**ಕಾಟಿ** ಚಿರತೆ (?) ಬೇಟೆಗಾರ (?)

**ಕಾಣಿ** ಕಾಸು

**ಕಾತಂತೆ** ಹಣ್ಣುಬಿಟ್ಟಂತೆ. ತೀವ್ರಭಾವದಲ್ಲಿ ಕುದಿದಂತೆ

**ಕಾತು** ಹೂ ಬಿಟ್ಟು, ಫಲಭರಿತವಾಗಿ, ಕಾತರದಿಂದ ಕಾದಿದ್ದು

**ಕಾಬ** ಕಾಣುವ

**ಕಾಬೆ** ಕಾಣುವೆ

**ಕಾಯಕ** ದೇಹ ಶ್ರಮದ ದುಡಿಮೆ, ವೃತ್ತಿ, ಕಸುಬು, ಜೀವನ ಮೌಲ್ಯ

**ಕಾರ ಮೇಘ** ಮಳೆಯ ಮೋಡ; ತನು, ಶರೀರ

**ಕಾಲಸಡಗರ ಕೈಯಲಿದೆ** ಸದಾಚಾರಕ್ಕೆ ಕರ್ತೃವಾದ ಲಿಂಗದ ಪ್ರವರ್ತನೆ ಕೈಯಲ್ಲಿರುವುದು

**ಕಾಶಾಂಬರ** ಹೊಳಪಿನ ಬಟ್ಟೆ (ಕಾಶ– ಹೊಳೆಯುವ)

**ಕಾಹ ಹೇಳು** ಕಾವಲು ಹೇಳು

**ಕಾಹಕೊಡು** ಕಾವು ಕೊಡು

**ಕಾಹಿನ** ಕಾವಲಿನ

**ಕಾಳರಕ್ಕಸಿ** ತಾಮಸ ಸ್ವರೂಪದ ಮಾಯೆ

**ಕಾಳಿಕೆ** ಕಲ್ಮಶ, ದೋಷ, ಕುಂದು

**ಕಾಳಿಯ ಕಂಕಾಳ** ಕಾಳಿಯ ಅಸ್ಥಿಪಂಜರ ಬಲಿಯ ಸಂಹಾರ ಸಂದರ್ಭದಲ್ಲಿ ವಾಮನನ ಒಂದು ಪಾದ ಆಕಾಶವನ್ನು ವ್ಯಾಪಿಸಿದಾಗ ಬ್ರಹ್ಮನು ಅಂಜಿ, ಈ ಪಾದವು ಶಿವನದಲ್ಲದಿದ್ದರೆ ಕಳಚಿ ಬೀಳಲೆಂದು ನುಡಿದು, ಕಳಚಿ ಬಿದ್ದ ಪಾದವು ಆಕಾಶದಲ್ಲಿ ಹಾವಳಿ ಎಬ್ಬಿಸಿತು. ಭೈರವಗಣೇಶ್ವರನು ವಾಮನ ಸಂಹಾರ ಮಾಡಿದ. ವಾಮನನ ಬೆನ್ನೆಲುಬನ್ನು ಶಿವ ಕೈಯಲ್ಲಿ ಧರಿಸಿದ. ಸ್ಕಂದಪುರಾಣದ ಈ ಕಥೆ ಕಾಳಿಕಾಖಂಡಲ್ಲಿದ್ದು ಕಾಳಿಯ ಕಂಕಾಳವೆಂಬ ಹೆಸರು ಪಡೆದಿದೆ.

**ಕಾಳುತನ** ದುಷ್ಟತನ; ಅಸಂಸ್ಕೃತ ವರ್ತನೆ

**ಕಾಳುಮಾತು** ವ್ಯರ್ಥವಾದ ಮಾತು, ಕೆಟ್ಟಮಾತು

**ಕೀಲ** ರಹಸ್ಯ

**ಕೀಲಿಗ** ಬೆಸ್ತರವನು, ಮೀನುಗಾರ

**ಕೀಳು** ಕೆಳ ಮಟ್ಟ, ಹಸುವಿನ ಕರು

**ಕುಂಜರ** ಆನೆ

**ಕುಂದಣ** ಹರಳನ್ನು ಚಿನ್ನದಲ್ಲಿ ಜೋಡಿಸುವ ಕೆಲಸ; ಹರಳಿಗೆ ಹಿನ್ನೆಲೆಯಾಗಿರುವ ಚಿನ್ನ

**ಕುಂಭಿನಿಯುದರ** ಭೂಮಿಯ ಹೊಟ್ಟೆ; ಅಹಂಕಾರವೆಂಬ ಭಿತ್ತಿ

**ಕುಕ್ಕತೆನೆ** ಜೊಳ್ಳು ತೆನೆ

**ಕುಕ್ಕುಟ** ಕೋಳಿ

**ಕುಕ್ಕುರ** ನಾಯಿ
**ಕುಠಾರ** ಕೊಡಲಿ
**ಕುಡಿತೆ** ಸಣ್ಣಪಾತ್ರೆ, ಒಂದು ಬೊಗಸೆಯಷ್ಟು
**ಕುತ್ತದ ಕೊಮ್ಮೆ** ರೋಗದ ಬುಟ್ಟಿ, ಪಾತ್ರೆ
**ಕುತ್ತರಿ** ಮೇಟಿಯ ಸುತ್ತಲೂ ಒಟ್ಟಿದ ಬೆಳಸು
**ಕುರುಹು** ಗುರುತು, ಇಷ್ಟಲಿಂಗ
**ಕುಳ** ವ್ಯಾಕುಳ ಮತ್ತು ನಿರಾಕುಳ. ವ್ಯಾಕುಳವು ಭವ, ಭವಿ, ಪಾಪ ಮತ್ತು ನಿರಾಕುಳವು ನಿರ್ಭವ, ಭಕ್ತ ಮತ್ತು ನಿಷ್ಪಾಪ
**ಕೂಪ** ಪ್ರಿಯಕರ, ಬಾವಿ
**ಕೂಪರ** ಒಲಿದವರ
**ಕೂರ್ತಡೆ** ಪ್ರೀತಿಸಿದರೆ
**ಕೃತಕ** ನೆರವೇರಿಸುವ ಕಾರ್ಯ, ಮೋಸ
**ಕೆಂಡದ ಗಿರಿ** ಮಹದಹಂಕಾರ
**ಕೆಚ್ಚು** ಕೆಂಪು ಬಣ್ಣ, ಕೋಪ, ಗಿಡ ಮರಗಳ ಸಾರ
**ಕೆಡೆದಿಹ** ಬಿದ್ದಿರುವ
**ಕೆನ್ನೆವಾರೆ** ಕೆನ್ನೆಯ ಬದಿ, ಕೆನ್ನೆಯ ಉದ್ದಕ್ಕೂ
**ಕೆಮ್ಮನೆ** ಸುಮ್ಮನೆ
**ಕೆಯ್** ಹೊಲ, ಬೆಳೆ
**ಕೆರೆಯೊಳಗಣ ಕಪ್ಪೆ** ಸಂಸಾರ ವಿಷಯದಲ್ಲಿ ವ್ಯವಹರಿಸುತ್ತಿರುವ ಮಾಯೆ
**ಕೇಡು** ಕೆಡು, ಇಲ್ಲವಾಗು, ಕೆಡುಕು
**ಕೇಣಸರ** ರತ್ನಗಳನ್ನು ಪೋಣಿಸುವ ಕೆಲಸ
**ಕೈದು** ಆಯುಧ
**ಕೈ ಬೆಸಲಾಗು** ಕೈಗೆ ಇಷ್ಟಲಿಂಗ ಪ್ರಾಪ್ತಿಯಾಗು
**ಕೈಯಾನು** ಕೈಯೊಡ್ಡು
**ಕೊಂತ** ಒಂದು ಬಗೆಯ ಆಯುಧ
**ಕೊಂಡೆಯ** ಚಾಡಿ
**ಕೊಟ್ಟಣ** ಬತ್ತವನ್ನು ಕುಟ್ಟುವ ಒರಳು
**ಕೊಡಗೂಸು** ಹದಿವಯಸಿನ ಹುಡುಗಿ; ಇಷ್ಟಲಿಂಗ; ಚಿಚ್ಛಕ್ತಿ
**ಕೊನರು** ಚಿಗುರು
**ಕೊರಚು** ಕರ್ಕಶಧ್ವನಿ, ತೊದಲು ಮಾತು
**ಕೊರೆಯ ಕೂಳು** ಉಳಿದ ಅನ್ನ
**ಕೊಲೆ** ಸ್ಥೂಲ ಸೂಕ್ಷ್ಮ ಕಾರಣ ತನುಗಳಲ್ಲಿ ಬ್ರಹ್ಮ, ವಿಷ್ಣು, ಶಿವತತ್ವಗಳು ಇಲ್ಲವಾಗುವಂತೆ ಮಾಡಿಕೊಳ್ಳುವುದು
**ಕೊಲ್ಲೆ** ವಕ್ರತೆ
**ಕೋಡಗ** ಕೋತಿ
**ಕೋವೆ** ಚಿನ್ನವನ್ನು ಕರಗಿಸುವ ಮೂಷೆ
**ಕೋಳಿ** ವೃತ್ತಿಜ್ಞಾನ
**ಕೌರು** ಕಮರು, ಕೆಟ್ಟವಾಸನೆ
**ಕ್ರಿಯೆ** ಬಾಹ್ಯದ ಮಾರ್ಗ ಮತ್ತು ಅಂತರಂಗದ ಮೀರಿದ ಕ್ರಿಯೆಗಳು
**ಕ್ರೀ** ಕ್ರಿಯೆ
**ಕ್ರೀಭಾವವಂತರು** ಕ್ರಿಯೆಯ ಭಾವವನ್ನು ಮಾತ್ರ ಹೊಂದಿರುವವರು; ಕ್ರಿಯೆ ಮತ್ತು ಭಾವನೆಗಳನ್ನು ಹೊಂದಿದವರು.
**ಕ್ಷುಧೆ** ಹಸಿವು
**ಖಂಡಭಂಡ** ಸರಕು
**ಖಂಡಿತ** ನಿಶ್ಚಿತ; ಅಸಂಪೂರ್ಣ
**ಖಗ** ಹಕ್ಕಿ
**ಖಟ್ವಾಂಗ** ತುದಿಯಲ್ಲಿ ತಲೆಬುರುಡೆಯಿರುವ ಶಿವನ ಗದೆ,
**ಖರ್ಪರ** ತಲೆಬುರುಡೆ; ಚಿಪ್ಪು; ಭಿಕ್ಷಾಪಾತ್ರೆ
**ಖಾರ** ತೀಕ್ಷ್ಣವಾದ ರುಚಿ ಇರುವುದು, ಕಟುವಾದದ್ದು
**ಗಂಗಾದೇವಿ** ಶಿವನ ಹೆಂಡತಿ; ಜ್ಞಾನಶಕ್ತಿ; ಪರಾಶಕ್ತಿ
**ಗಂಗೆ ಗೌರಿ** ಆದಿಶಕ್ತಿ–ಪರಾಶಕ್ತಿ
**ಗಂಡ** ಗಂಡ; ಗುರು; ಲಿಂಗಪತಿ; ಪ್ರಾಣಧರ್ಮ
**ಗಂಪ** ಬುಟ್ಟಿ
**ಗಡಿಗೆ ಬಟ್ಟಲು** ಗಳಿಗೆ ಬಟ್ಟಲು, ಮರಳು

ಅಥವ ನೀರಿನ ಸಹಾಯದಿಂದ ವೇಳೆಯನ್ನು ಅಳೆಯುವ ಸಾಧನ

**ಗಡಿವಾಡ** ಸುಂಕದ ಕಟ್ಟೆ

**ಗಣಾಚಾರ** ಪಂಚಾಚಾರಗಳಲ್ಲಿ ಒಂದು. ಶಿವನಿಂದೆಯನ್ನು ಸಹಿಸದಿರುವುದು.

**ಗಣೆಮಿಣೆ** ದೊಂಬರ ಆಟದ ಕೋಲು (?)

**ಗನ್ನ** ಮೋಸ, ತಂತ್ರ

**ಗಮನ** ಚಲನೆ: ಲಕ್ಷ್ಯ

**ಗರಿ** ಬಾಣದ ಹಿಳಕು, ಗರಿ

**ಗಸಣೆ** ಘರ್ಷಣೆ; ಗೋಜು, ಗೊಡವೆ

**ಗಳೆ** ಗಳು, ಕೋಲು

**ಗಾಣ** ಗಾಳ

**ಗಾರಾಗು** ಬೊಕ್ಕೆಯೇಳು

**ಗಾರು** ಒರಟು; ದಿಗಿಲು; ಹಿಂಸೆ

**ಗಾವಳಿ** ಗದ್ದಲ

**ಗಾವಿಲರು** ಹಳ್ಳಿಗರು, ಅಶಿಕ್ಷಿತರು

**ಗಾವುದಿ** ದಡ್ಡತನ, ಹೆಡ್ಡ

**ಗಿಣ್ಣಿಲು** ಗಿಚಿಡಿ, ಸಣ್ಣ ಬಟ್ಟಲು

**ಗುಂಗಿ** ಹುಳು; ಅತಿಸೂಕ್ಷ್ಮ ಮಾಯೆ

**ಗುಂಟ** ಗೂಟ

**ಗುಜ್ಜ ಹೊಲೆಯ** ಗಿಡ್ಡ ಹೊಲೆಯ

**ಗುಡಿಗಟ್ಟು** ಬಾವುಟ ಹಾರಿಸು, ಗಡಿಯನ್ನು ಗುರುತಿಸು, ಗುಡಿಯನ್ನು ಕಟ್ಟು

**ಗುಡುಗೂರಿ** ಗೊರಗೊರ ಸದ್ದು ಗಂಟಲಲ್ಲಿ ಹುಟ್ಟಿ; ಗೂರಲು ರೋಗ

**ಗುತ್ತಗೆ** ಗುತ್ತಿಗೆ; ಆಸ್ತಿಯ ಮಾಲಿಕನೊಂದಿಗೆ ಗುತ್ತಿಗೆ ಕರಾರು

**ಗುದಿಯಿಕ್ಕಿದಂತೆ** ಗುಂಪುಕಟ್ಟಿದಂತೆ

**ಗುರಿಯನೆಚ್ಚಡೆ** ಗುರಿಯನ್ನು ಹೊಡೆದಾಗ

**ಗುರಿಯನೆಚ್ಚಲ್ಲಿ** ಗುರಿಗೆ ಹೊಡೆವಲ್ಲಿ

**ಗುರು ಚರ** ತಾನು ಬೇಡದೆ ಅನ್ಯರಿಗೆ ಹೇಳಿ ಈಸಿಕೊಂಬವನು

**ಗುರು ಲಿಂಗ ಜಂಗಮ** ಪರಸ್ಪರ ಭೇದ ಭಿನ್ನವಿಲ್ಲದ ತತ್ವಗಳು.

**ಗುರು** ಮಾರ್ಗದರ್ಶಕ ದೀಕ್ಷೆಯನ್ನು ನೀಡುವ ವ್ಯಕ್ತಿ ಪರಮಾತ್ಮ ಪ್ರತಿವ್ಯಕ್ತಿಯ ಅಂತರಂಗದಲ್ಲೂ ಇರುವ ತತ್ವ

**ಗುಸುಟು** ಗೂಷ್ಟು, ಬೂಷ್ಟು, ಘರ್ಷಣೆ; ಪಿಸುಮಾತು; ಗೊಣಗು

**ಗೊಜಡು** ಗೊಂದಲ, ಅಸ್ಪಷ್ಟ ಗೊಣಗಾಟ

**ಗೊತ್ತಿಗೆ** ಗುರುತಾದ ಜಾಗ, ಸಂಧಿಸುವ ಸ್ಥಳ

**ಗೊತ್ತು** ಇರುವ, ಗೊತ್ತಾದ ಜಾಗ; ವಿಧಿ, ನಿಬಂಧನೆ; ಯೋನಿ

**ಗೊರಜೆ** ಜೊಂಡು ಸಸ್ಯ; ಒಂದು ಬಗೆಯ ಚಿಪ್ಪಿನ ಪ್ರಾಣಿ

**ಗೋಟಿಗೊಳಗಾಗು** ಕಾಟಕ್ಕೆ ಒಳಗಾಗು, ಮೂಲೆಗುಂಪಾಗು

**ಗೋರಿಗೊಳಗಾಗು** ಬಲೆಗೆ ಒಳಗಾಗು; ಹಾಡಿನಿಂದ ಮರುಳುಗೊಂಡು ಬಲೆಗೆ ಸಿಕ್ಕಿಬೀಳು

**ಗೋವತ್ಸ** ಹಸುವಿನ ಕರು

**ಘಟ** ದೇಹ

**ಘಟಸರ್ಪ** ಮಡಕೆಯೊಳಗಿನ ಹಾವು; ಮಡಕೆಯೊಳಗಿನ ಹಾವನ್ನು ಹಿಡಿಯುವುದು ಒಂದು ಬಗೆಯ ದಿಬ್ಯ

**ಘಟಿತ** ಆದ, ಸಂಭವಿಸಿದ; ಸಂಬಂಧವನ್ನು ಹೊಂದಿರುವ

**ಘಟ್ಟಿವಾಳ** ಗಂಧವನ್ನು ತೇಯುವಾತ

**ಘನ** ದೊಡ್ಡದು ಮಹತ್ತಾದದ್ದು ಭೌತಿಕವಾದದ್ದು ಲಿಂಗ, ಪರಮಾತ್ಮ

**ಘುಟಿಕಾಸಿದ್ಧಿ** ಎಂಟು ಪ್ರಮುಖ ಸಿದ್ಧಿಗಳಲ್ಲಿ ಒಂದು; ಪಾದರಸದ ಗುಳಿಗೆಗಳನ್ನು

ತಯಾರಿಸಿ, ನುಂಗುವ ಮೂಲಕ ವಜ್ರಕಾಯವನ್ನು ಪಡೆಯುವ ಸಿದ್ಧಿ; ಮಾದಕವಸ್ತು ಸೇವನೆಯ ಮೂಲಕ ಪಡೆವ ಸಿದ್ಧಿ (?)

**ಚಂದ್ರ** ಚಂದ್ರ; ಮೂಗಿನ ಎಡ ಹೊರಳೆಯ ಉಸಿರಾಟದ ನಾಳ ಇಡಾಕ್ಕೆ ಸಂಬಂಧಿಸಿದ್ದು, ಚಂದ್ರನಾಡಿ

**ಚಂದ್ರಗಿರಿ** ಚಂದ್ರನ ಕಾಂತಿಗೆ ಸ್ರವಿಸುವ ಗಿರಿ; ಪರಮಶಾಂತಿಯಿಂದ ಕೂಡಿದ ಜ್ಞಾನ

**ಚಂದ್ರಗಿರಿ ಪಟ್ಟಣ** ಪರಮಶಾಂತಿಯಿಂದ ಕೂಡಿದ ಶಿವೋಹಂ ಭಾವ ತುಂಬಿರುವ ಅಂತರಂಗ

**ಚಟ್ಟೆ ಹತ್ತದೆ** ತಳ ಹತ್ತದೆ, ಸೀಯದೆ

**ಚತುರಾಶ್ರಮಗಳು** ಕರ್ಮ, ಭಕ್ತ, ಜ್ಞಾನ, ಲೌಕಿಕ

**ಚತುರ್ವಿಧ ಅರ್ಪಿತ** ಅರ್ಪಿತ, ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತ

**ಚತುರ್ವಿಧ ಸಂಬಂಧಿಗಳು** ಗುರು, ಲಿಂಗ, ಜಂಗಮ, ಪ್ರಸಾದ ಸಂಬಂಧಿಗಳು

**ಚಬುಕು** ಚಾಬೂಕ, ಚಾವಟಿ

**ಚಮ್ಮಾವುಗೆ** ಚರ್ಮದ ಪಾದುಕೆ

**ಚಮ್ಮಾಳಿಗೆ** ಚರ್ಮದ ಪಾದುಕೆ

**ಚಾರುಚ್ಚು** ಚೆನ್ನಾಗಿ ಬಿಚ್ಚು

**ಚಿಕ್ಕುಟು** ಚಿಕ್ಕಾಡು, ಸೂಳ್ಳೆಯ ರೀತಿಯ ಕೀಟ; ಅತಿ ಸೂಕ್ಷ್ಮವಾದ ಚಿತ್ತು

**ಚಿತ್‌ಶಕ್ತಿ** ಪರಾ, ಆದಿ, ಇಚ್ಛಾ, ಜ್ಞಾನ, ಕ್ರಿಯಾ ಎಂಬ ಐದು ವಿಧದ ಶಕ್ತಿಗಳಿಂದ ಒಡಗೂಡಿದ ಚೇತನಾತ್ಮಕ ಶಿವಶಕ್ತಿ

**ಚಿತ್ತಜ** ಮನ್ಮಥ

**ಚಿನ್ನಗೆಯ್ಕ** ಚಿನ್ನದಕೆಲಸ ಮಾಡುವವನು

**ಚುಕ್ಕಿ** ಮೈಮೇಲೆ ಗುರುತುಗಳುಳ್ಳ ಮೇಕೆ

**ಚುಳುಕು** ಅಂಗೈಯ ತಗ್ಗು, ಹಳ್ಳ

**ಚೂಣಿ** ಮುಂಭಾಗ, ಮುಂದಿನ ಸಾಲು

**ಚೇಗು** ಲಾಭ, ಸಾಮರ್ಥ್ಯ, ಮರದ ಸಾರ; ಹಾನಿ, ಕೇಡು, ಭಂಗ

**ಚೇಳು** ಮಿಥ್ಯೆ

**ಚೇಷ್ಟೆ** ವರ್ತನೆ, ಇಷ್ಟಬಂದಂತೆ ಮಾಡುವ ವರ್ತನೆ

**ಚೋದ್ಯ** ಅಚ್ಚರಿ

**ಚೋಹ** ವೇಷ, ಪಾತ್ರ

**ಚೌರಾಸಿ ಲಕ್ಷ** ಎಂಬತ್ತುನಾಲ್ಕು ಲಕ್ಷ

**ಛೇಗೆ** ಕೇಡು, ನಾಶ

**ಜಂಗಮ** ಚಲನಶೀಲ ಪ್ರಜ್ಞೆ; ಗುರು ಮತ್ತು ಲಿಂಗ ಪರಿಕಲ್ಪನೆಗಳಿಗೆ ಸಮನಾದ ಪರಿಕಲ್ಪನೆ ವ್ಯಕ್ತಿರೂಪದಲ್ಲಿ ಕಾಣಿಸಿಕೊಳ್ಳುವ ಪರಮಾತ್ಮ

**ಜಂಘೆ** ತೊಡೆ

**ಜಂಪ** ಗೊಂಚಲು

**ಜಂಬುಕ** ನರಿ

**ಜಂಬೂದ್ವೀಪ** ಪುರಾಣಗಳಲ್ಲಿ ಬರುವ ಏಳು ದ್ವೀಪಗಳಲ್ಲಿ ಒಂದು; ಉಳಿದ ಆರು–ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ

**ಜಂಬೂಫಲ** ನೇರಿಲೆ ಹಣ್ಣು

**ಜಕ್ಕವಕ್ಕಿ** ಚಕ್ರವಾಕ ಪಕ್ಷಿ

**ಜಗದೆರೆಯ** ಜಗತ್ತಿನ ಒಡೆಯ

**ಜತ್ತಿಗೆ** ನೊಗವನ್ನು ಎತ್ತಿನ ಕೊರಳಿಗೆ ಕಟ್ಟುವ ಹಗ್ಗ

**ಜನ್ನಿಗೆಯರ** ದೇವರಿಗೆ ಮೀಸಲಿಟ್ಟ ಹಸು ಮತ್ತು ಅದರ ಹಾಲು (?)

**ಜರಗು** ಚಿನ್ನದ ಕಣ ಬೆರೆತ ಮಣ್ಣು

**ಜಲಗ** ಚಿನ್ನದ ಕಣ ಬೆರೆತ ಮಣ್ಣು, ಅದನ್ನು ತೊಳೆಯುವ ವಿಧಾನ

**ಜಲಸ್ತಂಭ** ನೀರಿನಲ್ಲಿದ್ದೂ ನೀರಿನಿಂದ ಬಾಧೆಯೊಳಗಾದಂತಿರುವ ವಿದ್ಯೆ

**ಜವ** ಯಮ

**ಜವನಿಕೆ** ತೆರೆ

**ಜವ್ವನ** ಯೌವನ

**ಜಾತ** ಹುಟ್ಟಿದವನು

**ಜಾತಸ್ಯ ಮರಣಮ್ ಧ್ರುವಂ** ಹುಟ್ಟಿದವರಿಗೆ ಸಾವು ನಿಶ್ಚಿತ

**ಜಾಲಂಧ್ರ** ಬೆಳಕಿಂಡಿ

**ಜಾವಳಿಗ** ಸಾಮಾನ್ಯ ಮನುಷ್ಯ

**ಜಿಗುಡು** ಜಿಗಟು, ಅಂಟು

**ಜಿಗುಳುಗಂಟು** ಜಾರುಗಂಟು, ಜೀರ್ಕುಣಿಕೆ

**ಜಿಹ್ವೆ** ನಾಲಗೆ

**ಜುಗ** ಯುಗ

**ಜೂಬು** ಯಜ್ಞಸ್ತಂಭ

**ಜೂಳಿ** ಕಮಂಡಲು, ಗಿಂಡಿ ಮೊದಲಾದವುಗಳ ನಳಿಕೆ

**ಜ್ಞಾನ** ನೋಡಿ ಆರು, ಮೂರು

**ಝುಂಕಿಸು** ಗದರಿಸು, ಬೆದರಿಸು

**ಟೊಂಬರ** ಹಸನು ಮಾಡದ ಧಾನ್ಯ

**ಡಂಬಕ** ಮೋಸ, ಉದ್ಧಟತನ

**ಡಳಹು** ಅಂತರಂಗದ ಕಪಟ

**ಡಾವರಿಸು** ಆತಂಕಪಡು

**ಡಾಳ** ಕಾಂತಿ, ಹೊಳಪು

**ಡಿಂಬ** ದೇಹ

**ಢಾಳಿಸು** ಹೆರೆ, ಕೀಳು, ಹೊಳೆ

**ತಂಗಿ** ಮಾಯೆ

**ತಂದೆ** ಗುರು

**ತಿಂಥಿಣಿ** ಸಮೂಹ, ಗುಂಪು

**ತಕ್ಕೈಸು** ಆಲಿಂಗಿಸು

**ತಗರ ಹೋರಟೆ** ಜೂಜಾಟದ ಹೋರಾಟ; ತಗರ–ಹತ್ತು ಬಗೆಯ ಪಗಡೆಯಾಟಗಳಲ್ಲಿ ಒಂದು; ತಗರ–ಟಗರು; ಟಗರು ಕಾಳಗ

**ತಗಹು** ಮೋಸ

**ತತ್ತಲಮಗ** ತೊತ್ತಲು ಮಗ, ಜೀತದಾಳು

**ತದುಗತ** ತದ್ಗತ, ಅದರೊಳಗೆ ಒಂದಾಗು

**ತದ್ರೂಪವಾಗಿ** ಅದೇ ರೂಪವಾಗಿ

**ತನಿರಸ** ಸವಿಯಾದ ರಸ

**ತಪ್ಪಲ** ಬೆಟ್ಟದ ತಪ್ಪಲು; ಸೊಪ್ಪು; ತಳ

**ತಪ್ಪಲಕ್ಕಿ** ನೆಲದಮೇಲೆ ಬಿದ್ದ ಅಕ್ಕಿ ?

**ತಪ್ಪುಕ** ತಪ್ಪು ಮಾಡಿದವನು. ಅಪರಾಧಿ

**ತಮ** ಕತ್ತಲೆ

**ತಮಂಧ** ಕುರುಡಾಗಿಸುವ ಕತ್ತಲು

**ತಮಸೂನು** ಕತ್ತಲೆಯ ಮಗ

**ತರಕಟಗಾಡು** ವಿಪರೀತವಾಗಿ ನೋಯಿಸು

**ತರತರಂಬೋಗು** ಅತಿಯಾದ ಸಂತೋಷದಿಂದ ಕಂಪಿಸು

**ತರಹರ** ಸಹನೆ; ಆತುರ; ಸೇರಿಕೆ, ಹೊಂದಿಕೆ

**ತಲೆ** ಖಂಡಿತ ಜ್ಞಾನದ ನಿಲುವು

**ತಲೆಯಿಲ್ಲದ ಅಟ್ಟೆ** ಜ್ಞಾನವಿಲ್ಲದ ಅಜ್ಞಾನ

**ತಲೆಯಿಲ್ಲದ ಮೃಗ** ತಲೆಯಿಲ್ಲದ ಜಿಂಕೆ; ಮಾಯೆ

**ತಲ್ಲೀಯ** ಅದರಲ್ಲೇ ಒಂದಾಗು

**ತವನಿಧಿ** ಅಕ್ಷಯ ನಿಧಿ

**ತವರಾಜ** ಒಂದು ಬಗೆಯ ಬಿಳಿಯ ಸಕ್ಕರೆ; ಪ್ರಿಯವಾದದ್ದು

**ತಸ್ಕರ** ಕಳ್ಳ

**ತಳಿಗೆ** ತಟ್ಟೆ

**ತಾಯಿ** ಚಿತ್‌ಶಕ್ತಿ; ಮಾಯೆ; ಶರಣ

**ತಾಯಿ ತಂದೆಯಿಲ್ಲದ ಕಂದ** ಸ್ವಯಂಭು; ನಿಷ್ಕಲ ಪರಬ್ರಹ್ಮ

**ತಾರಕ ಕೊಂಡ ವಾರಿ**

**ತಾರುಗಂಟು** ಒಂದು ಬಗೆಯ ಗಂಟು

**ತಾರ್ಕಣೆ** ಹೊಂದಾಣಿಕೆ, ವಿವಾದ

**ತಾವಡಿಸು** ಆಯಾಸಗೊಳ್ಳು

**ತಾಳು** ತಳ

**ತಾಳೋಷ್ಠ ಸಂಪುಟ** ಬಾಯ ಅಂಗಳ

ಮತ್ತು

ತುಟಿಗಳು ಇರುವ ಪುಟ್ಟಪೆಟ್ಟಿಗೆ, ಬಾಯಿ

**ತಿಕ್ಕವಟ್ಟ** ಒರೆಗಲ್ಲು

**ತಿಗುಡು** ಮರದ ತೊಗಟೆ

**ತಿಗುರು** ಲೇಪನ

**ತಿಟ್ಟು** ತೆಗಳು, ಬೈಯಿ

**ತಿತ್ತಿ** ಚರ್ಮದ ಚೀಲ

**ತಿತ್ತಿಗ** ಗುಟುಕು (?)

**ತಿರಿಪಂತೆ** ಭಿಕ್ಷೆ ಬೇಡುವಂತೆ

**ತೀತ** ಅತೀತದ ವಿರುದ್ಧಪದ: ಪರಿಮಿತ, ಬದ್ಧ

**ತೀವಿ** ತುಂಬಿ, ಭರ್ತಿಯಾಗಿ

**ತುಂಬಿ** ದುಂಬಿ ಮತ್ತು ತುಂಬಿಕೊಂಡು; ಪರಿಪೂರ್ಣತೆ; ಪರಿಪೂರ್ಣತೆಯೇ ತಾನೆಂಬ ಅಹಂಕಾರ; ಲಿಂಗ ಜ್ಞಾನ

**ತುಡುಗುಣಿ** ಕದ್ದು ಉಣ್ಣುವ ಪ್ರಾಣಿ, ವ್ಯಕ್ತಿ

**ತುಯ್ಯಲ** ಪಾಯಸ

**ತುರೀಯ** ನಾಲ್ಕನೆಯ ಅವಸ್ಥೆ, ಜಾಗ್ರತ, ಸ್ವಪ್ನ, ಸುಷುಪ್ತಿಗಳಾಚೆಯದು; ದೇವರೊಡನೆ ಒಂದಾದ ಸ್ಥಿತಿ

**ತುರು** ಹಸು, ಹಸುಗಳ ಗುಂಪು

**ತುಷ್ಟಿ** ತೃಪ್ತಿ

**ತೂರ್ಯಸಂಭಾಷಣೆ** ನಾಲ್ಕು ಬಗೆಯ ಸಂಗೀತವಾದ್ಯಗಳ ಸಂಭಾಷಣೆ; ಏರು ದನಿಯ ಮಾತುಕತೆ

**ತೆಕ್ಕೆ** ಅಪ್ಪುಗೆ; ಜೋಡಣೆ

**ತೆತ್ತಿಗ** ಸೇವಕ, ನಂಟ, ಹಿತವನ್ನುಂಟುಮಾಡುವವ

**ತೆರಣೆಯ ಹುಳು** ರೇಶಿಮೆಯ ಹುಳು

**ತೆರಪು** ಅವಕಾಶ

**ತೆವರು** ಬೋರಲಾಗಿ ಮಲಗು

**ತೇಜಿ** ಕುದುರೆ

**ತೊಂಡು ಹೋಗು** ಹತೋಟಿ ಇಲ್ಲದೆ ವರ್ತಿಸು; ದಾರಿತಪ್ಪು

**ತೊಡಚಿ** ತೊಟ್ಟು

**ತೊಡರು** ಬಾವುಲಿ, ತೊಡಕು

**ತೊಡೆಯ ಮೇಲಿಪ್ಪ ಗೌರಿ** ಆಧಾರ ಸ್ಥಾನದಲ್ಲಿರುವ ಆದಿಶಕ್ತಿ

**ತೊಟ್ಟಿಲು** ದೇಹ

**ತೊರೆ** ಕಿರುನದಿ, ಬಿಡು

**ತೊರೆಗೂರ** ?

**ತೋಕುಳು** ?

**ತೋಟಿ** ತೊಳಲಾಟ

**ತೋಮರ** ಆಯುಧ, ಈಟಿ (?)

**ತೋರುವರೊಳರು** ತೋರುವವರು ಇದ್ದಾರೆ

**ತ್ರಾಸು** ತಕ್ಕಡಿ

**ತ್ರಿಕರಣ** ಕಾರ್ಯ ಸಾಧಕಗಳಾದ ಮನಸ್ಸು, ಮಾತು, ದೇಹಗಳು

**ತ್ರಿಕೂಟ** ಇಡಾ, ಪಿಂಗಳ, ಸುಷುಮ್ನಾ ನಾಡಿಗಳ; ಗಂಗೆ, ಯಮುನೆ, ಸರಸ್ವತಿ ನದಿಗಳ; ಸೂರ್ಯ, ಚಂದ್ರ, ಅಗ್ನಿ ನೇತ್ರಗಳು ಕೂಡುವ ಸ್ಥಾನ; ಭ್ರೂಮಧ್ಯ; ಆಜ್ಞಾಚಕ್ರ; ಅ ಉ ಮಕಾರಗಳ ಸಂಗಮ.

**ತ್ರಿವಿಧ ಸಾಧನಗಳು** ಅರ್ಚನ, ಅರ್ಪಣ, ಅನುಭಾವ

**ತ್ರಿವಿಧ** ಮೂರು ಪರಿಕಲ್ಪನೆಗಳ ಗುಂಪು. ಅಚ್ಚ, ನಿಚ್ಚ, ಸಮಯ ಪ್ರಸಾದಿ; ಅರ್ಪಿತಗಳು; ಅರ್ಥ ಪ್ರಾಣ ಅಭಿಮಾನಗಳು; ತ್ರಿವಿಧ ಮಲಗಳು; ಲಿಂಗಗಳು; ಕರಣಗಳು; ಭಕ್ತಿ, ಜ್ಞಾನ, ವೈರಾಗ್ಯ ಇತ್ಯಾದಿ ಅಸಂಖ್ಯ ಮೂರು ವಿಧಗಳನ್ನು ಸಂದರ್ಭಾನುಸಾರ ಗುರುತಿಸಿಕೊಳ್ಳಬಹುದು.

**ತ್ರಿವಿಧ ಮಲ** ಆಣವ, ಕಾರ್ಮಿಕ ಮಾಯಾ ಮಲಗಳು

**ತ್ವಕ್ಕು** ಚರ್ಮ

**ಥಟ್ಟಾಗಿ** ಗೋಣಿಯಚೀಲವಾಗಿ

**ದಂಡಿಗೆ** ಏಕತಾರಿಯ ಕೋಲು; ಪಲ್ಲಕ್ಕಿ. ಅಂದಣ

**ದಂಬು** ಆಡಂಬರ

**ದಗ್ಧವಾದ ಪಟ** ಸುಟ್ಟುಹೋದ ಬಟ್ಟೆ

**ದಡಿಗೋಲು** ದೊಣ್ಣೆ; ಬಿದಿರ ಕೋಲು

**ದಶಾವಸ್ಥೆ** ವಿರಹದ ಹತ್ತು ಸ್ಥಿತಿಗಳು– ಅಭಿಲಾಷ, ಚಿಂತನ, ಅನುಸ್ಮೃತಿ, ಗುಣಕೀರ್ತನ, ಉದ್ವೇಗ, ವಿಲಾಪ, ಉನ್ಮಾದ, ವ್ಯಾಧಿ, ಜಡತೆ ಮತ್ತು ಮರಣ

**ದಸರಿದೊಡಕು** ದಸರಿ=ರೇಶಿಮೆಯ ಬಟ್ಟೆ, ಅತ್ಯಂತ ನಾಜೂಕಾದ ತೊಡಕು, ಸಮಸ್ಯೆ

**ದಾಯಗಾರಿಕೆ** ಪಾಲುಗಾರಿಕೆ

**ದಾಸೋಹ** ಗುರು, ಲಿಂಗ, ಜಂಗಮಗಳಿಗೆ ದಾಸನೆಂಬ ಭಾವನೆ; ಭೋಜನ

**ದಿಂಡೆ** ಒರಟು, ಹದ್ದುಮೀರಿದ, ಹೆಂಗಸು; ದಿಬ್ಬ

**ದಿಂಡೆಯತನ** ಒರಟುತನ

**ದಿಬ್ಯ** ಬೆಂಕಿ ಮೊದಲಾದವನ್ನು ಹಿಡಿದು ಮಾಡುವ ಪ್ರಮಾಣ

**ದುಡ್ಡಿಸ್ತರು** ಹಣವಂತರು

**ದೃಷ್ಟ** ಕಂಡದ್ದು, ದೃಷ್ಟಾಂತ, ನಿದರ್ಶನ

**ದೇವಾಂಗ** ಮಡಿಯಾದ ರೇಶಿಮೆ ಬಟ್ಟೆ

**ದೇಹಾರ** ಲಿಂಗಪೂಜೆ ದೇವಾಲಯ

**ದೊಡ್ಡೆ** ಕೋಣ; ಕಾಡುಕೋಣ

**ಧರಣಿ** ಭೂಮಿ

**ಧವಳಾರ** ಸುಣ್ಣ ಬಳಿದ ಮನೆ; ಮಹಾನುಭಾವಾಂತರಂಗ

**ಧಾರಾವರ್ತ** ಧಾರಾಕಾರ; ಸಂಸಾರವೆಂಬ ಮಳೆ

**ಧೇನು** ಕಾಮಧೇನು

**ನಕ್ಕುಬಚ್ಚನೆ** ನಗೆಯ ವೇಷ?

**ನಚ್ಚುವೆ** ನಂಬುವೆ

**ನಟನೆಯನೇನುವ** ನಟನೆಯನ್ನೇನನ್ನೂ

**ನಡೆಗೆಟ್ಟ** ನಡೆ ಇಲ್ಲವಾದ, ನಿಶ್ಚಲವಾದ

**ನಡೆವ ಸತಿ** ಕ್ರಿಯಾಶಕ್ತಿ

**ನಡೆವೆಣ** ನಡೆಯುವ ಹೆಣ

**ನನೆ** ಮೊಗ್ಗು

**ನನ್ನಿ** ನಿಜ

**ನರವಿಂಧ್ಯ** ಜನರಿಂದ ತುಂಬಿದ ಅರಣ್ಯ; ಜನರಿರುವ ಸ್ಥಾನ

**ನಲ್ಲೊ** ಒಳ್ಳೆಯದೊ

**ನವಖಂಡ** ಒಂಬತ್ತು ಖಂಡಗಳ ಭೂಪ್ರದೇಶ; ಒಂಬತ್ತು ತುಂಡು

**ನವಚಿತ್ರ ಪತ್ರದ ವೃಕ್ಷ** ವಿವೇಕವೆಂಬ ಮರ, ಹೊಸ ಎಲೆಗಳಿರುವ ಮರ

**ನವರತ್ನದ ಖಂಡಿತ ಹಾರ** ನವಲಿಂಗ ಪ್ರಯುಕ್ತವಾದ ಜ್ಞಾನರತ್ನ, ಅಪರಿಪೂರ್ಣವಾದ ಮನುಷ್ಯ ದೇಹ

**ನಳನ** ಹೊಳಪಿನ, ಚೆಲುವಿನ

**ನಾಡಕೀಡೆ** ನಾಡಿನ ಕ್ರಿಮಿ

**ನಾಣ** ನಾಚಿಕೆಯ

**ನಾದ ಬಿಂದು ಕಳೆ** ಶಿವನು ನಾದ, ಶಕ್ತಿಯು ಬಿಂದು, ಅವರಿಬ್ಬರ ಸಂಯೋಗವು ಕಳೆ ಅಕಾರ, ಉಕಾರ ಮತ್ತು ಮಕಾರಗಳು ಇದರ ಧ್ವನಿ ಸಂಕೇತಗಳು

**ನಾದವ ನುಡಿಸಿದ ರಾವಳ** ಸಂಗೀತ ನುಡಿಸಿದ ರಾವಣ

**ನಾದಿನಿ** ಮಾಯೆ

**ನಾರಿ** ಬಿಲ್ಲಿನ ಹಗ್ಗ

**ನಾರಿವಾಳ** ತೆಂಗಿನಕಾಯಿ

**ನಾಲ್ಕು** ೧) ಪುರುಷಾರ್ಥ–ಧರ್ಮ, ಅರ್ಥ, ಕಾಮ, ಮೋಕ್ಷ ೨) ಚಕ್ರಗಳು–ಕಾಲ, ಕರ್ಮ,

ನಾದ, ಬಿಂದು ೩) ಪೂರ್ವಾಶ್ರಯಗಳು ಲಿಂಗ, ಲಾಂಛನ, ಪ್ರಸಾದ, ಪಾದೋದಕ ೪) ಲಿಂಗಗಳು ಗುರು. ಶಿವ, ಜಂಗಮ, ಪ್ರಾಣಲಿಂಗಗಳು

**ನಾವಿದ** ನಾಪಿತ, ಕ್ಷೌರಿಕ

**ನಿಃಕರಿಸು** ನಿರಾಕರಿಸು

**ನಿಃಕರ್ಮಿ** ಕರ್ಮರಹಿತ

**ನಿಃಕಲ** ಸಕಲಕ್ಕೆ ವಿರುದ್ಧವಾದದ್ದು, ಪರಿಪೂರ್ಣತೆ

**ನಿಃಕ್ರೀ** ಕ್ರಿಯಾರಹಿತ

**ನಿಃಪತಿ** ನಿಷ್ಪತ್ತಿ, ಸಿದ್ಧಿ, ಪರಿಪೂರ್ಣತೆ

**ನಿಗಳ** ಆನೆಯನ್ನು ಕಟ್ಟುವ ಸರಪಳಿ

**ನಿಗುಚಿ** ಹರಡಿ

**ನಿಚ್ಚಕ್ಕೆ** ನಿತ್ಯಕ್ಕೆ, ಸತ್ಯಕ್ಕೆ

**ನಿಚ್ಚಣಿಕೆ** ಏಣಿ

**ನಿತ್ಯಭಂಡಾರ** ನಿತ್ಯ ದಾಸೋಹ, ಭೋಜನ

**ನಿಧಾನ** ಸಂಪತ್ತು, ನಿಕ್ಷೇಪ

**ನಿನ್ನರಿಕೆಯ** ನಿನ್ನನ್ನು ಅರಿಯದಿರುವ

**ನಿಬ್ಬಣ** ಮದುವೆಯ ನಂತರ ಮೆರವಣಿಗೆ; ನಿಜೋಪದೇಶ

**ನಿಬ್ಬಣಿಗರು** ಮದುವೆಯ ನಿಬ್ಬಣದಲ್ಲಿರುವವರು; ವಿಶ್ವ

**ನಿರಾಕುಳ** ನಿಶ್ಚಿಂತೆ, ಕುಳವಿಲ್ಲದ; ವ್ಯಾಕುಳರಹಿತ, ಪರಮಾತ್ಮ

**ನಿರಾಭಾರಿ** ಸಂಸಾರಾಭಿಮಾನವಿಲ್ಲದವನು

**ನಿರಾಮಯ** ನಿಷ್ಕಲಂಕ; ನಿರೋಗಿ

**ನಿರಾಲಂಬ** ಯಾವುದೇ ಅವಲಂಬನೆಗಳಿಲ್ಲದ ಸ್ಥಿತಿ

**ನಿರಾಳ** ವ್ಯಾಕುಲತೆ ಇಲ್ಲದ; ಪರಬ್ರಹ್ಮ

**ನಿರಾಳವೆಂಬ ಶಿಶು** ಮಹಾಜ್ಞಾನತತ್ವ

**ನಿರಿ** ಸೀರೆಯ ನಿರಿಗೆ

**ನಿರಿಗೆಯಾಗು** ಸುವ್ಯವಸ್ಥೆಗೊಳ್ಳು

**ನಿರುತ** ಮಗ್ನನಾದವನು, ತೊಡಗಿದವನು; ಸತ್ಯ, ದಿಟ

**ನಿರೂಪ** ರೂಪವಿಲ್ಲದ್ದು, ಅಮೂರ್ತ; ಒಕ್ಕಣೆ, ಆಜ್ಞೆ

**ನಿರ್ಬಂಧ** ಪರಿಮಿತಿ, ಬಂಧನ, ಬಂಧರಹಿತ ಸ್ಥಿತಿ

**ನಿರ್ಬುದ್ಧಿ** ಬುದ್ಧಿ ಇಲ್ಲದ

**ನಿರ್ವಯಲು** ಬಯಲು, ಶೂನ್ಯ

**ನಿರ್ವಾಣ** ೧) ಬತ್ತಲೆ ೨) ವಾಣಿ ಇಲ್ಲದ, ಮೌನ

**ನಿಷ್ಪತ್ತಿ** ನಿಲುಕಡೆ, ಲಿಂಗಾಂಗಸಾಮರಸ್ಯ, ಮುಕ್ತಿ

**ನಿಸ್ಸರ** ಸ್ವರವಿಲ್ಲದ

**ನಿಸ್ಸೀಮ** ಗಡಿ, ಮಿತಿ ಇಲ್ಲದವನು

**ನೀರಲಾದ ನಿರ್ಮಿತಂಗಳು** ಕೇವಲ ಮಾನಸಿಕವಾದ ಪರಿಕಲ್ಪನೆಗಳು; ಜಲಬುದ್ಬುದವಾದ ಪಿಂಡ

**ನೀಲಗಿರಿ** ಅಜ್ಞಾನಾಹಂಕಾರ

**ನುಡಿಗೆಟ್ಟ** ನುಡಿ ಇಲ್ಲವಾದ, ಮೌನವಾದ

**ನುಲಿ** ಹಗ್ಗ

**ನೆಮ್ಮು** ನಂಬು, ಅವಲಂಬನೆಯನ್ನು ಪಡೆ

**ನೆಮ್ಮುಗೆ** ನಂಬಿಕೆ

**ನೆಯಿ** ತುಪ್ಪ

**ನೆರವಿ** ಜನಸಮೂಹ

**ನೆರಹಿ** ಒಟ್ಟುಗೂಡಿಸಿ

**ನೆರಿಗೆ** ನಿರಿಗೆ. ಸುವ್ಯವಸ್ಥೆ

**ನೆರೆ** ಕೂಡು

**ನೆಲದ ಬೊಂಬೆ** ದೇಹ

**ನೆಳಲು** ನೆರಳು; ಮರವೆ; ಮನಸ್ಸು; ಮಾಯೆ

**ನೇಣಿಲ್ಲದೆ** ಹಗ್ಗವಿಲ್ಲದೆ

**ನೇಹವಿಲ್ಲದ ಮಾಟ** ಸ್ನೇಹವಿಲ್ಲದೆ ಕಾರ್ಯವನ್ನು ಮಾಡುವ ಪರಿ

**ನೊರಜು** ಸಣ್ಣ ಸೊಳ್ಳೆ; ಬೆಣಚುಕಲ್ಲು

**ನೋಂತು** ನೋಂಪಿಯನ್ನು ಮಾಡಿ, ಹರಕೆಯ ಪೂಜೆಯನ್ನು ಮಾಡಿ
**ನೋನು** ವ್ರತವನ್ನು ಮಾಡು
**ಪಂಕ** ಕೆಸರು
**ಪಂಚಮುಖ** ಶಿವನ ಐದು ಮುಖಗಳು, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ
**ಪಂಚಾಚಾರ** ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರಗಳು
**ಪಂಜರ** ಪಂಜರ; ದೇಹಭಾವ
**ಪಕ್ಕ** ರೆಕ್ಕೆ
**ಪಕ್ವವಾಹನ್ನಕ್ಕ** ಮಾಗುವವರೆಗೆ
**ಪಟಂತರ** ತೆರೆಯ ಆಚೆ, ತೆರೆಯ ಅಂತರ
**ಪಟ್ಟಣ** ಅಂತರ್ದೇಹ; ಶರೀರವೆಂಬ ಪಟ್ಟಣ
**ಪಟ್ಟದ ರಾಣಿ** ಇಚ್ಛಾಶಕ್ತಿ
**ಪಡಿಕೈದು** ಪ್ರತಿ ಆಯುಧ
**ಪಡಿಪದಾರ್ಥ** ಸಕಲಪದಾರ್ಥಗಳು
**ಪಡಿಪುಚ್ಚ** ಪ್ರತಿಪ್ರಶ್ನೆ
**ಪತಿಕರಿಸು** ಪ್ರತಿಕರಿಸು, ತಿರಸ್ಕರಿಸು
**ಪನ್ನಗ** ಹಾವು
**ಪರಟೆ** ಚಿಪ್ಪು
**ಪರದಳವಿಭಾಡರು** ಶತ್ರು ಸೈನ್ಯವನ್ನು ನಾಶಮಾಡುವವರು
**ಪರಮಹಂಸ** ಪರಮ ಆತ್ಮ
**ಪರವಶ** ಅನ್ಯಕ್ಕೆ, ಅನ್ಯರಿಗೆ, ವಶವಾಗು
**ಪರಾಕಿ** ಸ್ತುತಿಪಾಠಕ
**ಪರಿಣಾಮ** ಕಾಶ್ಮೀರ ಶೈವದ ಪರಿಭಾಷೆ ಮತ್ತೆ ಪೂರ್ವಸ್ಥಿತಿಗೆ ಹಿಂದಿರುಗುವುದು ಸಾಧ್ಯವೇ ಇಲ್ಲದ ಪರಿವರ್ತನೆ
**ಪರಿತೋಷ** ಸಂತೋಷ
**ಪರಿಭ್ರಮಣದ** ಅಲೆದಾಡುವ
**ಪರಿಯಹ** ಬಗೆಯದಾಗುವ
**ಪರಿಯಾಣ** ಹರಿವಾಣ, ತಟ್ಟೆ
**ಪರುಷ** ಲೋಹವನ್ನು ಚಿನ್ನವಾಗಿಸಬಲ್ಲ ಸ್ಪರ್ಶಮಣಿ
**ಪರುಷದ ಪುತ್ಥಳಿ** ಕಬ್ಬಿಣವನ್ನು ಚಿನ್ನವಾಗಿಸುವ ಸ್ಪರ್ಶಮಣಿಯ ಬೊಂಬೆ
**ಪಲ್ಲವ** ಚಿಗುರು
**ಪವಣಿಕೆ** ಪೋಣಿಸುವಿಕೆ
**ಪವನ** ಪವಣ=ಪ್ರಮಾಣ, ಪವನ ಗಾಳಿ
**ಪಶ್ಚಿಮ** ಸುಷುಮ್ನಾದ್ವಾರ, ಪಶ್ಚಿಮಚಕ್ರ, ಶಿರಸ್ಸಿನ ಹಿಂಭಾಗ
**ಪಸರ** ಅಂಗಡಿ, ಸಂಗ್ರಹ, ಬಯಲಂಗಡಿ
**ಪಳುಕದ ಭಾಂಡ** ಸ್ಫಟಿಕದ ಪಾತ್ರೆ
**ಪಾಕ ನೇಮಿ** ಇಂಥ ಅಡುಗೆಯನ್ನೇ ಉಣ್ಣುವೆನೆಂಬ ನೇಮ ಇರುವಾತ
**ಪಾತಾಳದಗ್ಘವಣಿ** ಪಾತಾಳದ ನೀರು
**ಪಾದೋದಕ** ಗುರುವಿನ ಪಾದವನ್ನು ತೊಳೆದ ತೀರ್ಥ
**ಪಾಷಾಣ** ಕಲ್ಲು
**ಪಿಂಡಿಗೆ** ಪೀಠ, ಲಿಂಗದ ಪೀಠ
**ಪಿಪೀಲಿಕ** ಇರುವೆ
**ಪೂರ್ವಗತಿ ಮಧ್ಯಗತಿ ಉತ್ತರಗತಿ** ಭೂತ, ವರ್ತಮಾನ ಭವಿಷ್ಯ ಎಂದು ಅರ್ಥಮಾಡಿಕೊಳ್ಳಲು ಸಾಧ್ಯವಿದೆ
**ಪೆರತನರಿಯದೆ** ಬೇರೆ ಇನ್ನೊಂದನ್ನು ತಿಳಿಯದೆ
**ಪೆರತಾರನರಿಯದವರು** ಬೇರೆ ಯಾರನ್ನೂ ಅರಿಯದವರು
**ಪೆರತೇನೂ** ಬೇರೇನೂ
**ಪೇಯ** ಕುಡಿಯಬಹುದಾದದ್ದು
**ಪ್ರಣವ** ಓಂಕಾರ
**ಪ್ರಥಮ ಭಿತ್ತಿ** ಸ್ಥೂಲ ಶರೀರ
**ಪ್ರಥಮ ಭಿತ್ತಿಯ ಚಿತ್ರ** ಇಷ್ಟಲಿಂಗ

**ಪ್ರಮಾಣ** ಪ್ರತ್ಯಕ್ಷ, ಅನುಭವ, ಉಪಮಾನ (ಹೋಲಿಕೆ, ಶಬ್ದ ಭಾಷೆ, ಅರ್ಥಾಪತ್ತಿ, ಅನುಪಲಬ್ಧಿ, ಐತಿಹ್ಯ, ಸ್ವಾನುಭವ ಇವು ಎಂಟು ಪ್ರಮಾಣಗಳು)

**ಪ್ರಸಾದ** ಸಂತೋಷ, ಅದಕ್ಕೆ ಕಾರಣವಾಗುವ ಎಲ್ಲವೂ; ಲಿಂಗಕ್ಕೆ ಅರ್ಪಿಸಿದ ಪದಾರ್ಥ

**ಫಣಾಮಣಿ** ಆದಿಶೇಷನ ಹೆಡೆಯ ಮಣಿ

**ಬಂಡು** ಮಕರಂದ

**ಬಕುತಿ** ಭಕ್ತಿ

**ಬಕ್ಕಟ** ಬರಿಯ

**ಬಗದಳ** ಬಾಯಿ ಹುಣ್ಣು

**ಬಗರಿಗೆ** ನದಿಯ ಬಳಿ ನೀರಿಗಾಗಿ ತೋಡಿದ ಕುಳಿ

**ಬಚ್ಚಣೆ** ವತ್ಸಲೆ, ಕರುವಿನ ಮೇಲೆ ಪ್ರೀತಿಯುಳ್ಳ ಹಸು; ಬಣ್ಣದ ಮಾತು; ವೇಷ

**ಬಜಾವಣೆ** ವಾದನ

**ಬಟ್ಟೆ** ದಾರಿ; ವಸ್ತ್ರ

**ಬೆಣ್ಣೆ** ಪರಿಪೂರ್ಣ ಶಿವತತ್ವ; ಪರಿಪೂರ್ಣ ವಿವೇಕ

**ಬೆಣ್ಣೆಯನಿಕ್ಕು** ಅರಿವಿನ ಬಗ್ಗೆ ಮಾತನಾಡು

**ಬತ್ತೀಸ ರಾಗ** ಮೂವತ್ತೆರಡು ರಾಗಗಳು

**ಬಪ್ಪಂತೆ** ಬರುವಂತೆ

**ಬಯ್ಕೆ** ನಿಕ್ಷೇಪ, ನಿಧಿ, ಆಕಾಂಕ್ಷೆ

**ಬಯ್ಚಿಡು** ಮುಚ್ಚಿಡು, ಅವಿಸಿಡು

**ಬರಬರ** ಬರಬರುತ್ತಾ

**ಬರಲುಗೊಂಡ ಸಸಿ** ಬೋಳಾದ ಗಿಡ

**ಬರು ಸಠಗ** ಬಲು ಮೋಸಗಾರ

**ಬರುದೊರೆ ಹೋಹುದು** ಪೂರ್ಣವಾಗಿ ವ್ಯರ್ಥವಾಗುವುದು

**ಬರುದೊರೆವೋಗು** ಬತ್ತಿಹೋದತೊರೆಯಂತೆ ಆಗು

**ಬರುಬ** ನಿಸ್ಸಹಾಯಕ

**ಬರುಸೂರೆವೋಗು** ಅತ್ಯಂತವಾಗಿ ನಾಶವಾಗು, ಸೂರೆಹೋಗು

**ಬಲುಗೈ** ಶಕ್ತಿ; ಪರಾಕ್ರಮಿ

**ಬಲುಹಿಂದ** ಬಲವಂತ, ಒತ್ತಾಯದಿಂದ

**ಬಲ್ಲಿತ್ತು** ದೃಢ, ಶಕ್ತಿವಂತ

**ಬಲ್ಲಿದ** ಉಳ್ಳವನು

**ಬಲ್ಲೆತ್ತು** ಬಲಿಷ್ಠವಾದ ಎತ್ತು

**ಬಲ್ಲೆವೈಸೆ** ಬಲ್ಲೆವಷ್ಟೆ

**ಬಹುಕುಳ** ಅನೇಕ ಅಳತೆಯ[?]

**ಬಳಹದೋಲೆ** ಬಳಪದಕಲ್ಲಿನ ಓಲೆ

**ಬಳಿದೊತ್ತು** ವಂಶಪರಂಪರೆಯಿಂದ ತೊತ್ತು ಆದವನು

**ಬಳಿವಿಡಿ** ಹಿಂಬಾಲಿಸು

**ಬಳ್ಳಿವರಿ** ಬಳ್ಳಿಯಂತೆ ಹಬ್ಬು

**ಬಳ್ಳು** ನರಿ

**ಬಾಣದಲೆಚ್ಚಡೆ** ಬಾಣದಲ್ಲಿ ಹೊಡೆದರೆ

**ಬಾಣಸ** ಅಡುಗೆ

**ಬಾತೆ** ಪ್ರಯೋಜನ, ಉಪಯೋಗ

**ಬಾರ ತೆಗೆದು** ಚರ್ಮವನ್ನು ಸುಲಿದು

**ಬಾರಿ** ಬಾಯಿ, ದವಡೆ

**ಬಾವನ್ನ** ಶ್ರೀಗಂಧ

**ಬಾವನ್ನಕ್ಷರ** ಐವತ್ತೆರಡು ಅಕ್ಷರ

**ಬಾಹಂತೆ** ಬರುವಂತೆ

**ಬಾಹಾಗ** ಬರುವಾಗ

**ಬಾಳುವನ್ನಕ್ಕರ** ಬಾಳುವವರೆಗೆ

**ಬಿಟ್ಟಿ** ಕೂಲಿಯಿಲ್ಲದ ದುಡಿಮೆ

**ಬಿದ್ದು** ಔತಣ

**ಬಿನುಗು** ಕ್ಷುದ್ರ

**ಬಿನ್ನಾಣ** ವಿಜ್ಞಾನ, ಚೆಲುವು, ಹೊರಗಿನ ತೋರಿಕೆ

**ಬಿರುಬ** ಒರಟ, ಒಡ್ಡ

**ಬಲಿಯ ಹೋದರೆ** ಬೆಲೆಕೊಟ್ಟು ಕೊಳ್ಳಲು

ಹೋದರೆ
**ಬೀಯಕ್ಕೆ** ಖರ್ಚಿಗೆ
**ಬೀಸರ** ಕೊನೆ, ನಾಶ, ವ್ಯರ್ಥ
**ಬುದ್ಧಲಿಕೆ** ಚರ್ಮದ ಚೀಲ
**ಬೆಂಗೋಲು** ಬಾರಕೋಲು, ಬೆನ್ನೆಲುಬು
**ಬೆಂತರ** ಭೂತ, ಪ್ರೇತ
**ಬೆಂದ ಮನ** ದಗ್ಧವಾದ ಮನಸ್ಸು
**ಬೆಂಬಳಿ** ತರುವಾಯ, ನಂತರ, ವಂಶ
**ಬೆಚ್ಚಂತೆ** ಬೆಸುಗೆಯಾದಂತೆ
**ಬೆಚ್ಚು** ಬೆಸುಗೆಯಾಗು; ಬೆರೆಸು, ಹೊಂದಿಸು
**ಬೆನ್ನ ಬಾರು** ಬೆನ್ನೆಲುಬು
**ಬೆಣ್ಣೆ** ವಿವೇಕ; ಶಿವತತ್ವ
**ಬೆವಸಾಯ** ವ್ಯವಸಾಯ
**ಬೆವಹಾರ** ವ್ಯವಹಾರ
**ಬೆವಹಾರಿ** ವ್ಯವಹಾರಿ
**ಬೆಸಗೊಂಡಡೆ** ಬೇಡಿದರೆ
**ಬೆಸಗೊಂಬಡೆ** ಕೇಳುವುದಾದರೆ, ಬೆಸೆಯುವ ಎಡೆ ಅಥವ ಸ್ಥಾನ
**ಬೆಸನಿ** ವ್ಯಸನಿ
**ಬೆಸಲಾಗು** ಹೆರು, ಪ್ರಸವಿಸು
**ಬೆಳುಹಾಗು** ಬೆಳ್ಳಗಾಗು
**ಬೆಳ್ಳ** ಮೂರ್ಖ
**ಬೆಳ್ಳಾರ** ಬಲೆ
**ಬೇಟ** ಸಂಭೋಗ
**ಬೊಂತೆ** ಕೌದಿ
**ಬೊಕ್ಕಣ** ಬೊಕ್ಕಸ, ಚೀಲ
**ಬೊಜಗ** ವಿಟ
**ಬೊಟ್ಟಿನ** ಚುಕ್ಕೆಗಳಿರುವ ಮೇಕೆ (?)
**ಬೊಟ್ಟುಗ** ಮೈಮೇಲೆ ಚುಕ್ಕೆಗಳಿರುವ ಪ್ರಾಣಿ, ಚಿರತೆ (?)
**ಬೊಬ್ಬುಳಿಕೆ** ನೊರೆ, ನೀರಗುಳ್ಳೆ
**ಬೊಮ್ಮ** ಬ್ರಹ್ಮ
**ಬೋಸರಿಸು** ಕೃತಕವಾದ ಗೌರವ ತೋರು, ಹೊಗಳು
**ಬ್ರಹ್ಮನ ಶಿರ ಹೋಯಿತ್ತು** ಬ್ರಹ್ಮನಿಗೂ ಐದು ತಲೆಗಳಿದ್ದುದರಿಂದ ತಾನೂ ಶಿವನಷ್ಟೇ ಹಿರಿಯನೆಂದು ಅಹಂಕಾರಪಟ್ಟನೆಂದೂ ಶಿವ ಅವನ ಒಂದು ತಲೆಯನ್ನು ಕತ್ತರಿಸಿದನೆಂದೂ ಆ ತಲೆ ಶಿವನ ಭಿಕ್ಷಾಪಾತ್ರೆಯಾಯಿತೆಂದೂ ಕಥೆ.
**ಭಂಡ** ಪಾತ್ರೆ
**ಭವಿ** ಭವ ಅಥವ ಸಂಸಾರಕ್ಕೆ ಕಟ್ಟುಬಿದ್ದವರು ವೀರಶೈವ ತತ್ವಗಳನ್ನು ಒಪ್ಪದವರು
**ಭಾಂಡ** ಪಾತ್ರೆ, ಸಂಗೀತವಾದ್ಯ
**ಭಾಜನ** ಪಾತ್ರೆ, ಸಂಗೀತ ವಾದನ
**ಭಾನು** ಸೂರ್ಯ
**ಭಾಳ** ಹಣೆ
**ಭೃತ್ಯಾಚಾರಿ** ಶಿವಶರಣರ ಸೇವಕನಂತೆ ನಡೆದುಕೊಳ್ಳುವುದು
**ಭೈತ್ರ** ಹರಿಗೋಲು, ತೆಪ್ಪ
**ಮಂಡೂಕ** ಕಪ್ಪೆ
**ಮಗಳು** ಕ್ರಿಯಾಶಕ್ತಿ
**ಮಚ್ಚು** ಮೆಚ್ಚುಗೆ, ಮೋಹ
**ಮಡ** ಹಿಮ್ಮಡಿ
**ಮಡದಿ** ಚಿತ್‌ಶಕ್ತಿ
**ಮಣೆಘಟ್ಟಿನ** ?
**ಮದನ ಪಿತನ ಅಕ್ಷಿಯಾದೆ ಉಂಗುಷ್ಠದಲ್ಲಿ** ?
**ಮದವಣಿಗ** ಮದುವೆ ಗಂಡು; ಮಹಾಲಿಂಗ; ಲಿಂಗಭಾವ
**ಮದವಳಿಗೆ** ಮದುವೆ ಹೆಣ್ಣು; ಶರಣಭಾವ
**ಮದಾಳಿ** ರಸವನ್ನು ಹೀರಿ ಮತ್ತವಾದ ದುಂಬಿ
**ಮನಕತ** ಮನಸ್ಸಿನ ದುಃಖ
**ಮನದ ತಿರುಳು** ಸಂಕಲ್ಪ ವಿಕಲ್ಪಗಳಿರುವ

ಸಂಶಯ ಸ್ಥಾನ
**ಮನ ಪವನ ಬಿಂದು** ಕಳೆ ನಾದ ಬಿಂದು (?)
**ಮನದಳವಿಭಾಡ** ಮನಸ್ಸು ಎಂಬ ಸೈನ್ಯವನ್ನು ನಾಶಮಾಡುವವ
**ಮನವಿಚ್ಛಂದವಾಗದೊಂದೆಯಂದದಲಿಪ್ಪಂತಪ್ಪಾ** ಮನವು ಇಚ್ಛಂದವಾಗದೆ ಒಂದೇ ಅಂದದಲ್ಲಿರುವಂತೆ ಆಗುವ
**ಮನಸಿಜ** ಮನ್ಮಥ
**ಮರಹು** ಮರೆವು
**ಮರೀಚಿ** ಬಿಸಿಲ್ಗುದುರೆ
**ಮರುಜವಣಿ** ಮರಳಿ ಪ್ರಾಣವನ್ನು ತರುವ ಸಂಜೀವಿನಿ
**ಮರುಳುದಲೆಯಲ್ಲಿ** ಹಿಂದಿರುಗುವ ದಾರಿಯಲ್ಲಿ
**ಮರೆಯಲಹುದು** ಮರೆಯಲು ಸಾಧ್ಯ, ಮರೆಯಲ್ಲಿ ಆಗುತ್ತವೆ
**ಮರ್ಕಟ** ಕೋತಿ
**ಮಸೆದ ಕೂರಲಗು** ಮಸೆದ ಚೂಪಾದ ಕತ್ತಿ
**ಮಸೆದಲಗು** ಮಸೆದ ಕತ್ತಿ
**ಮಹಾಂತ** ಪರಂಜ್ಯೋತಿ ಸ್ವರೂಪ
**ಮಹಾರ್ಣವ** ದೊಡ್ಡ ಸಮುದ್ರ
**ಮಾಟ ಕೂಟ** ಮಾತು ಕೃತಿಗಳ ಅನ್ಯೋನ್ಯ ಸಂಬಂಧ, ಭಕ್ತಿ
**ಮಾಟ** ಮಾಡುವ ಕ್ರಿಯೆ, ಕಾರ್ಯ
**ಮೂರನೆಯ ಭಿತ್ತಿ** ಸೂಕ್ಷ್ಮತನು
**ಮೂರನೆಯ ಭಿತ್ತಿಯ ಚಿತ್ರ** ತೃಪ್ತಿ ಲಿಂಗ
**ಮೂರು ಬಗೆಯ ಜ್ಞಾನಗಳು** ೧) ಉನ್ಮನಿ, ಶಾಂಭವ, ಸುಜ್ಞಾನ ೨) ಶ್ವಾನ, ಗಜ, ಕುಕ್ಕುಟ ಜ್ಞಾನ ೩) ಮೂರು ಲಿಂಗಗಳು ಇಷ್ಟ, ಪ್ರಾಣ ಮತ್ತು ಭಾವಲಿಂಗಗಳು
**ಮಾಣದು** ಬಿಡದು
**ಮಾಣಿಸಿ** ತಪ್ಪಿಸಿ
**ಮಾತಿಗೆ ಮೊದಲ ಕಂಡಾತ** ಮಾತಿನ ಮೂಲವಾದ ಮೌನ, ನಿಶ್ಶಬ್ದವನ್ನು ಕಂಡಾತ
**ಮಾನ** ಸೇರು ಇತ್ಯಾದಿಗಳಂತೆ ಅಳತೆಯ ಪಾತ್ರೆ
**ಮಾನಿಸಗಳ್ಳೆ** ಮನುಷ್ಯ ವಂಚಕಳು
**ಮಾಬನೆ** ಬಿಡುವನೆ
**ಮಾಯಾಮಂಜರ** ಮಾಯೆ ಎಂಬ ಬೆಕ್ಕು
**ಮಾರಂಕ** ಇದಿರಾಳಿ
**ಮಾರಡೆ** ಹಂಗು, ಆಧಾರ
**ಮಾರ್ಗ ಕ್ರಿಯೆ** ಹೊರಗಿನ ಆಚರಣೆಗಳು. ಭಕ್ತ, ಮಾಹೇಶ್ವರ ಮತ್ತು ಪ್ರಸಾದಿ ಸ್ಥಲಗಳ ಆಚರಣೆಗಳು
**ಮಾರ್ಜಾಲ** ಬೆಕ್ಕು
**ಮಾಡ** ಹೆಣವನ್ನು ಕುಳಿತ ಸ್ಥಿತಿಯಲ್ಲಿ ಒಯ್ಯುವ ಸಿದಿಗೆ, ಚಟ್ಟ
**ಮಾದು** ಪಕ್ವವಾಗಿ, ಮಾಗಿ; ಕಾಂತಿಗುಂದಿ, ಮಂಕಾಗಿ; ತಪ್ಪಿಹೋಗಿ, ಕಳೆದುಕೊಂಡು; ನಿಲ್ಲಿಸಿ, ಬಿಟ್ಟು
**ಮಾವ** ಪುರುಷ
**ಮಾಳ** ಉಪ್ಪು ತಯಾರಿಸುವ ಮಡಿ; ಗಂಡುಬೆಕ್ಕು; ಬಯಲು
**ಮಿಟ್ಟೆ** ಮಣ್ಣಿನ ಹೆಂಟೆ
**ಮಿಸುನಿ** ಅಪರಂಜಿ, ಶುದ್ಧ ಚಿನ್ನ
**ಮೀಂಬುಲಿಗನ ಹಕ್ಕಿ** ಮೀನನ್ನು ಕೊಂದು ತಿನ್ನುವ ಹಕ್ಕಿ, ಕೊಕ್ಕರೆ
**ಮೀರಿದ ಕ್ರಿಯೆ** ಅಂತರಂಗದ ಕ್ರಿಯೆ. ಪ್ರಾಣಲಿಂಗಿ, ಶರಣ ಮತ್ತು ಐಕ್ಯಸ್ಥಲಗಳ ಆಚರಣೆಗಳು
**ಮುಂಚು** ಮೀರು, ಅತಿಕ್ರಮಿಸು
**ಮುಂಡಿಗೆ** ಒಗಟು, ಸಮಸ್ಯೆ
**ಮುಕುತಿ** ಮುಕ್ತಿ

**ಮುಖಗುರುಹು** ಮುಖದ ಗುರುತು
**ಮುಚ್ಚಿಗ** ಮೋಚಿ
**ಮುಡಿ** ಸ್ಪರ್ಶ, ಅಂತ್ಯ, ನಾಶ
**ಮುಡಿವಾಳ** ಲಾವಂಚದ ಜಾತಿಯ ಸುಗಂಧ ಸಸ್ಯ
**ಮುಯ್ಯಾನು** ತೋಳು ನೀಡು; ಬೀಗು, ಹೆಮ್ಮೆಪಡು; ಎದುರಾಗು; ಸಲುಗೆತೋರು
**ಮುರುವು** ಕಲಗಚ್ಚು
**ಮೂಕೊರತಿ** ಮೂಗು ಕತ್ತರಿಸಿಹೋದವಳು
**ಮೂಕೊರೆಗ** ಮೂಗು ಕತ್ತರಿಸಿಕೊಂಡವನು
**ಮೂರು** ೧) ಕಾಯತ್ರಯ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳು ೨) ಕೋಶತ್ರಯ ಅನ್ನಮಯ ಸ್ಥೂಲತನು, ಪ್ರಾಣಮಯ ಮನೋಮಯ ವಿಜ್ಞಾನಮಯ ಸೂಕ್ಷ್ಮತನು ಮತ್ತು ಆನಂದಮಯ ಕಾರಣ ತನು ೩) ಮೂರು ಬಗೆಯ ಗುರು ದೀಕ್ಷಾ, ಶಿಕ್ಷಾ ಮತ್ತು ಮೋಕ್ಷಗುರು
**ಮೂಲ** ಬೇರು
**ಮೂಷಕ** ಇಲಿ
**ಮೃಡ** ಶಿವ
**ಮೃತ್ತಿಕೆ** ಮಣ್ಣು
**ಮೇಘವರ್ಷ** ಲಿಂಗಾನಂದ. ಆತಂಕ
**ಮೇಟಿ** ತೆನೆ ಬಡಿಯುವ ಸ್ಥಳದ ನಡುವೆ ಇರುವ ಕಂಬ
**ಮೇದಿನಿ** ಭೂಮಿ
**ಮೇರಳ** ಮೇಲಿನ
**ಮೇಲುದಾಯ** ಮೇಲುಡುಪು, ಉತ್ತರೀಯ
**ಮೇಹನಿಕ್ಕಿ** ಮೇವನ್ನು ಇಕ್ಕಿ
**ಮೈಗಾಹು** ಮೈಕಾವಲು
**ಮೈದುನ** ಗಂಡನ ಸೋದರ
**ಮೈಸೋಂಬತನ** ಸೋಮಾರಿತನ, ಆಲಸಿಕೆ
**ಮೊರಹು** ಮೊರೆತ
**ಮೊಳಡಂಗೆ** ?
**ಮೊಳಪಾದ** ಮೊಳಕಾಲು
**ಮೋನ** ಮೌನ
**ಮೋಳಿಗೆ** ಕಟ್ಟಿಗೆಯ ಹೊರೆ
**ಯುಕುತಿ** ಯುಕ್ತಿ
**ರಕ್ಕಸಿ** ಮಾಯೆ
**ರಜ** ಧೂಳು
**ರಸವರತಿತ್ತು** ರಸ ಬತ್ತಿತ್ತು
**ರಾಯಕಂಪಣ** ರಾಜನ ಮನೆಗೆ ಹೇರುವ ಹುಲ್ಲಿನ ಹೊರೆ
**ರಾವಳ** ರಾವಣ
**ರಾವುತಿಕೆ** ಕುದುರೆಯ ಸವಾರಿ
**ರಾಶಿವಾಳ** ಜೀವರಾಶಿಯನ್ನು ಕಾಪಾಡುವಾತ
**ರಿತು** ಋತು
**ರೂಹಿಲ್ಲದ ಚೋಹ** ರೂಪವಿಲ್ಲದ ವೇಷ, ಪಾತ್ರ
**ಲಂದಣಗಿತ್ತಿ** ಅಡುಗೆ ಮಾಡಿ ಬದುಕು ಸಾಗಿಸುವಾಕೆ; ವೇಶ್ಯೆ (?)
**ಲದ್ದೆ** ಹೊರೆ; ತಲೆಯ ಮೇಲೆ ಹೊರಬಲ್ಲ ಹುಲ್ಲಿನ ಹೊರೆ
**ಲಾಕುಳ** ಸನ್ಯಾಸಿಯ ಕೈಯ ದಂಡ; ಶೈವದ ಒಂದು ಪ್ರಭೇದ
**ಲಾಗ** ಕೌಶಲ್ಯ
**ಲಾಗು** ಲಾಘವ, ಕೌಶಲ
**ಲಾಳಿ** ಮಗ್ಗದಲ್ಲಿ ಹೊಕ್ಕಿನ ದಾರವನ್ನು ಸೇರಿಸುವ ಸಾಧನ
**ಲಿಂಗ** ಇಡೀ ಸೃಷ್ಟಿ ಚೈತನ್ಯ; ಶಿವನ ಸಂಕೇತವಾದ ಲಿಂಗ
**ಲಿಂಗಾಂಗ ಸಾಮರಸ್ಯ** ದೈವ ಮತ್ತು ಮನುಷ್ಯವ್ಯಕ್ತಿಗಳ ಸಾಮರಸ್ಯ. ಅಂಗ ಗುಣಗಳನ್ನು ಬಿಟ್ಟು ಲಿಂಗಗುಣಗಳನ್ನು ಹೊಂದಿದವರಾಗುವುದು.
**ಲೀಢ** ಲೇಪ

**ಲೀಯ** ಲೀನ, ಕರಗು

**ಲೆಂಕ** ಅರಸನಿಗಾಗಿ ಜೀವಕೊಡುವ ಪಣತೊಟ್ಟ ಸೇವಕ

**ಲೆಪ್ಪ** ಅರಗು

**ಲೋಗರು** ಜನರು, ಸಾಮಾನ್ಯರು

**ಲೋಯಿಸರ** ನಾಗದಾಳಿ ಜಾತಿಗೆ ಸೇರಿದ ಸಸ್ಯ

**ವಚನಾನುಭವೋ ವಚೋ ನ** ಮಾತಿನ ಅನುಭವ ಮಾತಲ್ಲ, ವಚನದ ಅನುಭವ ಹೇಳಲಾಗದು

**ವಂಕ** ದಾರಿ; ಪಕ್ಕ; ಅಗಸೆ, ಹೆಬ್ಬಾಗಿಲು

**ವರ್ಣಕ** ಕಾವ್ಯದ ಒಂದು ಪ್ರಭೇದ; ಷಟ್ಪದಿ ಮೊದಲಾದ ಹಾಡುಗಬ್ಬಗಳು

**ವರ್ತನ** ವರ್ತನೆ, ಅಭ್ಯಾಸ

**ವರ್ಮ** ರಹಸ್ಯ

**ವಸ್ತು** ದೇಹ, ಪರಮಾತ್ಮ

**ವಸ್ತುಕ** ಮಾರ್ಗ ಕಾವ್ಯದ ಒಂದು ಪ್ರಭೇದ; ಚಂಪೂ ಕಾವ್ಯ

**ವಾಕ್ಕು** ಮಾತು

**ವಾಙ್ಮನಾತೀತ** ಮಾತು ಮನಸ್ಸುಗಳಿಗೆ ಅತೀತ

**ವಾಣಿ** ನಾಲ್ಕು ಬಗೆಯ ವಾಣಿಗಳು, ಪರಾ, ಪಶ್ಯಂತೀ, ಮಧ್ಯಮಾ, ವಾಕ್, ವೈಖರೀ

**ವಾಯ** ಮೋಸ, ಕಪಟ, ನೆಪ, ವ್ಯರ್ಥ

**ವಾರಾಸಿ** ಸಮುದ್ರ

**ವಾರಿ** ನೀರು

**ವಾರಿಕಲ್ಲು** ಆನೆಕಲ್ಲು, ನೀರ್ಗಲ್ಲು

**ವಾರಿಧಿ** ಸಮುದ್ರ

**ವಿಗಡ** ಸಾಹಸ, ಧೈರ್ಯ

**ವಿಡಂಗ** ಔಷಧೀ ಸಸ್ಯ

**ವಿರಾಟ್ಪುರುಷ** ಪುರುಷಾಕೃತಿಯಲ್ಲಿರುವ ಇಡೀ ಸೃಷ್ಟಿ

**ವಿರಿಂಚಿ** ಬ್ರಹ್ಮ

**ವಿಶ್ವಗೋಧ** ವಿಶ್ವವೆಂಬ ಗೋ ಸಮೂಹವನ್ನು ಕಾಪಾಡುವಾತ

**ವಿಷಯ** ದೇಹದ ಸುಖ, ಕಾಮನೆ

**ವಿಸ್ಮೃತಿ** ಮರೆವು

**ವಿಹಂಗ** ಹಕ್ಕಿ, ಹದ್ದು

**ವೆಗ್ಗಳ** ಹಿರಿಮೆ, ಶ್ರೇಷ್ಠತೆ; ಶ್ರೇಷ್ಠ ವ್ಯಕ್ತಿ

**ವೇಧಿಸು** ಭೇಧಿಸು

**ವೇಶಿ** ವೇಶ್ಯೆ, ವೇಷಗಾರ

**ವೈಶಿಕ** ಕಪಟ ಕೃತ್ಯ, ಮೋಸ

**ವ್ಯಾಕುಳ** ಚಿಂತೆ

**ಶಬುದ** ಶಬ್ದ

**ಶಬ್ದ ಸಾರಾಯ** ಶರಣರ ಅನುಭವದ ತಿರುಳು

**ಶರಣಸತಿ ಲಿಂಗಪತಿ** ಶರಣನು ಸತಿ, ಲಿಂಗವು ಪತಿ ಎಂಬ ಭಾವ, ಲಿಂಗಾಂಗ ಸಾಮರಸ್ಯ

**ಶರಧಿ** ಸಮುದ್ರ

**ಶಸ್ತ್ರದ ಫಲ** ?

**ಶಾಲ್ಯನ್ನ** ಉತ್ತಮವಾದ ಬತ್ತದಿಂದ ಮಾಡಿದ ಅನ್ನ

**ಶಿಖಿ** ಜುಟ್ಟು, ಜ್ವಾಲೆ

**ಶುದ್ಧ ಸಿದ್ಧ ಪ್ರಸಿದ್ಧ** ಪ್ರಸಾದದ ಮೂರು ಬಗೆಗಳು. ಗುರು, ಲಿಂಗ, ಜಂಗಮ ಪ್ರಸಾದಗಳು

**ಶುನಿ** ನಾಯಿ

**ಶ್ರವ** ಕಠಿಣವಾದ ಅಭ್ಯಾಸ, ಶ್ರಮ, ವ್ಯಾಯಾಮ

**ಶ್ರುತ ದೃಷ್ಟ ಅನುಮಾನ** ಕೇಳಿದ್ದು, ಕಂಡದ್ದು, ಊಹಿಸಿದ್ದು, ತಿಳಿವಳಿಕೆಯ ಮೂರು ದಾರಿಗಳು

**ಶ್ವಪಚ** ನಾಯಿಯನ್ನು ತಿನ್ನುವಾತ

**ಷಟ್‌ಸ್ಥಲಗಳು** ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ

**ಷಡುವರ್ಣ** ಶ್ವೇತ, ಪೀತ, ಹರಿತ, ಕಪೋತ, ಮಾಂಜಿಷ್ಠ, ಗೌರ

**ಷೋಡಶೋಪಚಾರ** ಅರ್ಘ್ಯ, ಪಾದ್ಯ,

ಆಚಮನ, ಪತ್ರಪುಷ್ಪ, ಗಂಧ, ಅಕ್ಷತೆ, ರುದ್ರಾಕ್ಷಮಾಲಾ, ಛತ್ರ, ಚಾಮರ, ವ್ಯಜನ, ಗೀತ, ವಾದ್ಯ, ನರ್ತನ, ಪ್ರದಕ್ಷಿಣ, ನಮಸ್ಕಾರ, ಸ್ತೋತ್ರ.

**ಸಂಕುಳ** ಸಮೂಹ

**ಸಂಗಿಗ** ಸಂಗವನ್ನು ಹೊಂದಿರುವವನು

**ಸಂಚ** ಸಮೂಹ, ರಹಸ್ಯ, ಸಂಗ್ರಹ

**ಸಂಚದ ತಲೆ** ಸುಜ್ಞಾನ

**ಸಂಚದ ನೋಟ** ಮೂಲ ಜ್ಞಾನದೃಷ್ಟಿ

**ಸಂಚಲ** ಚಪಲತೆ; ಚಲನೆ

**ಸಂಚಿತ ಪ್ರಾರಬ್ಧ ಆಗಾಮಿ** ಕರ್ಮದ ಮೂರು ಬಗೆಗಳು, ಹಿಂದಿನಿಂದ ಬಂದದ್ದು, ವಿಧಿಯ ಕಾರಣದಿಂದ ಒದಗಿದ್ದು, ತನ್ನ ಕ್ರಿಯೆಗಳಿಂದ ಉಂಟಾದದ್ದು.

**ಸಂಚುವ** ರಹಸ್ಯವ

**ಸಂತ** ಶಾಂತ

**ಸಂತವಿಡು** ಸಂತೋಷಪಡಿಸು

**ಸಂಪಲಿ** ಸಂಬಲಿ, ಕುಂಟಲಗಿತ್ತಿ

**ಸಂಪುಟ** ಕರಡಿಗೆ

**ಸಂಬೋಳಿ** ಸಂಬಾಳಿಸಿಕೊಳ್ಳಿ (?) ಅಸ್ಪೃಶ್ಯರು ದಾರಿಯಲ್ಲಿ ತಾವು ಬರುತ್ತಿರುವುದನ್ನು ಸೂಚಿಸಲು ಗಟ್ಟಿಯಾಗಿ ಕೂಗಬೇಕಾಗಿದ್ದ ಎಚ್ಚರಿಕೆ ನುಡಿ

**ಸಂಸ್ಮೃತಿ** ನೆನಪು

ಸಿಂಗಿ ಘೋರವಾದ ವಿಷ

**ಸಕಟಿಂಗೆ** ಶಕಟಕ್ಕೆ, ಬಂಡಿಗೆ

**ಸತಿ** ಕ್ರಿಯಾಶಕ್ತಿ

**ಸತುವಿಲ್ಲದೆ** ಸತ್ವವಿಲ್ಲದೆ, ಶಕ್ತಿಯಿಲ್ಲದೆ

**ಸತ್ತಿಗೆ** ಛತ್ರಿ

**ಸನಕ** ಬ್ರಹ್ಮನ ಒಬ್ಬ ಮಗ

**ಸನ್ನಹಿತ** = ಸನ್ನಿಹಿತ, ಸಮೀಪ. ಕಾಯಕ್ಕಿಂತ ಪ್ರಾಣವೂ ಪ್ರಾಣಕ್ಕಿಂತ ಭಾವವೂ ಸೂಕ್ಷ್ಮತರ. ಈ ಭಾವವು ನಿಃಕಲ ಲಿಂಗವಾದರೆ ಅದೇ ಸನ್ನಹಿತ

**ಸಪ್ತಧಾತು** ರಸ, ರುಧಿರ, ಮಾಂಸ, ಮಜ್ಜೆ, ಮೇಧಸ್ಸು, ಅಸ್ಥಿ, ಶುಕ್ಲ

**ಸಬ** ಶವ

**ಸಮಯ** ಧರ್ಮ

**ಸಯ** ವಶ, ಅಧೀನ, ಯೋಗ್ಯ, ಅರ್ಹ, ಐಕ್ಯ, ಲೀನ

**ಸಯದಾನ** ಸಯಿದಾನ ಪ್ರಸಾದ

**ಸರ** ಕದನಾಭ್ಯಾಸ; ಮಾಲೆ; ಸ್ವರ; ಧ್ವನಿ; ಸಾಲು; ಉಸಿರು;

**ಸರಗೈ** ಸ್ವರವನ್ನು ಹಾಡು

**ಸರವರ** ಸರೋವರ

**ಸರವಿ** ಹುಲ್ಲಿನ ಹಗ್ಗ

**ಸರಿ** ಬೆಸುಗೆ?

**ಸರಿಗೆ** ನೂಲು, ಎಳೆ, ದಾರ

**ಸರಿಸ** ಕಟ್ಟುಪಾಡು, ನಿಯಮ; ನೇರ, ಸರಿಯಾದದ್ದು

**ಸರಿ ಹರಿದ** ತುಂಡಾದ

**ಸಲಗೆ** ಅಳತೆಯ ಪಾತ್ರೆ

**ಸಲಿಲ** ನೀರು

**ಸವಣ** ಶ್ರಮಣ, ಜೈನ ಯತಿ

**ಸಸಿನ** ನೇರ, ಒಪ್ಪಿಗೆ

**ಸಾಜ** ಸಹಜ

**ಸಾಮೀಪ್ಯ, ಸಾಯುಜ್ಯ, ಸಾರೂಪ್ಯ, ಸಾಲೋಕ್ಯ** ಮೋಕ್ಷದ ನಾಲ್ಕು ವಿಧಗಳು

**ಸಾರಾಯ** ತಿರುಳು; ಸಾರಾಂಶ; ನಿಜತತ್ವ

**ಸಾವನ್ನಕ್ಕರ** ಸಾಯುವವರೆಗೆ

**ಸಿಕ್ಕು** ಸಿಗು, ತೊಡಕು ?

**ಸಿಡಿಹು** ?

**ಸಿದಿಕೆ** ಚಟ್ಟ

**ಸಿನೆ** ಶೂನ್ಯ, ಪೂರ್ಣ

**ಸೀಮೆ** ಮಿತಿ
**ಸುಖದಡಗಿಂಗೆ** ಸುಖ ಮರೆಯಾದುದಕ್ಕೆ
**ಸುಗಡಿ** ವಿಲಾಸಿನಿ, ವೇಶ್ಯೆ
**ಸುಯಿದಾನ** ಲಕ್ಷ್ಯ, ಎಚ್ಚರ
**ಸುರಾಳ** ಸಗುಣ
**ಸುಷುಪ್ತಿ** ಗಾಢನಿದ್ರೆ
**ಸೂಡು** ಧರಿಸು; ತೊಡು; ಸುಡು; ಕಂತೆ
**ಸೂತಕ** ಮೈಲಿಗೆ. ಜಾತಿ, ಜನನ, ಪ್ರೇತ, ರಜಸ್, ಉಚ್ಛಿಷ್ಟ ಇವು ಭೌತಿಕವಾದ ಸೂತಕಗಳು. ಕುಲ, ಛಲ, ತನು, ಮನ, ನೆನಹು, ಭಾವ ಇವು ಅಂತರಂಗಕ್ಕೆ ಸಂಬಂಧಿಸಿದ ಸೂತಕಗಳು.
**ಸೂರ್ಯ** ಸೂರ್ಯ ಮೂಗಿನ ಬಲಹೊರಳೆಗೆ ಸಂಬಂಧಿಸಿದ ಪಿಂಗಳ ನಾಡಿ, ಸೂರ್ಯನಾಡಿ.
**ಸೆಜ್ಜೆ** ಕರಡಿಗೆ
**ಸೆಲದಿ** ಜೇಡರ ಹುಳು
**ಸೈವೆರಗಾಗು** ಅತಿಯಾಗಿ ಅಚ್ಚರಿಪಡು
**ಸೊಡರು** ದೀಪ, ದೀಪದ ಬತ್ತಿ
**ಸೊಣಗ** ನಾಯಿ
**ಸೊಮ್ಮು** ಐಶ್ವರ್ಯ
**ಸೋರೆ** ಏಕತಾರಿಯ ಬುರುಡೆ
**ಸ್ತೋತ್ರ** ಹೊಗಳಿಕೆ
**ಸ್ಥಳ** ಐಕ್ಯ ಮತ್ತು ವೈವಿಧ್ಯಗಳನ್ನು ವಿವರಿಸುವ ಪರಿಭಾಷೆ. ಇರುವುದು ಒಂದೇ ಸ್ಥಲ. ತನ್ನ ಶಕ್ತಿಯ ಪ್ರಭೆಯಿಂದ ಅಂಗ ಮತ್ತು ಲಿಂಗಸ್ಥಲವೆಂದು ಎರಡಾಯಿತು; ಅಂಗಸ್ಥಲವು ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗವೆಂದು; ಲಿಂಗಸ್ಥಲವು ಇಷ್ಟ, ಭಾವ ಮತ್ತು ಪ್ರಾಣಲಿಂಗವೆಂದು; ತ್ಯಾಗಾಂಗದಲ್ಲಿ ಭಕ್ತ, ಮಾಹೇಶ್ವರವೆಂಬ, ಭೋಗಾಂಗದಲ್ಲಿ ಪ್ರಸಾದಿ ಮತ್ತು ಪ್ರಾಣಲಿಂಗಿಯೆಂಬ, ಯೋಗಾಂಗದಲ್ಲಿ ಶರಣ ಮತ್ತು ಐಕ್ಯವೆಂಬ; ಇಷ್ಟಲಿಂಗವು ಆಚಾರ ಮತ್ತು ಗುರುಲಿಂಗವೆಂಬ, ಪ್ರಾಣಲಿಂಗವು ಶಿವ ಮತ್ತು ಜಂಗಮಲಿಂಗವೆಂಬ, ಭಾವಲಿಂಗವು ಪ್ರಸಾದ ಮತ್ತು ಮಹಾಲಿಂಗವೆಂಬ ವಿಭಾಗಗಳನ್ನು ವಿವರಿಸಲಾಗಿದೆ.
ಸ್ವಯ ತನ್ನದು; ಜಂಗಮಲಿಂಗದ ಮೂರು ವಿಧಗಳಲ್ಲಿ ಒಂದು. ಉಳಿದೆರಡು ಚರ ಮತ್ತು ಪರ.
**ಸ್ವಯ** ನಿತ್ಯ, ಶಾಶ್ವತ; ತಾದಾತ್ಮ್ಯ; ಸ್ವಯಂಪೂರ್ಣ; ತನ್ನತನ, ಸ್ವಂತಿಕೆ
**ಸ್ವಯವಳಿದ** ತಾನು ಎಂಬುದಿಲ್ಲದ
**ಸ್ವಾಯತ** ತನ್ನದಾದದ್ದು; ಪ್ರಾಣಲಿಂಗ ಮತ್ತು ಅದರ ಅನುಭವ
**ಸ್ನೇಹ** ಗೆಳೆತನ; ಜಿಡ್ಡು, ತೇವ
**ಹಂಗನೂಲು** ಹಸಿಯ ನೂಲು, ಜನಿವಾರ
**ಹಂಚುಹರಿ** ಪಾಲಾಗಿ, ಭಾಗವಾಗಿ ಹೋಗು
**ಹಂಜರ** ಪಂಜರ
**ಹಂದೆ** ಹೇಡಿ
**ಹಂಸೆ** ಹಂಸ
**ಹಕ್ಕೆ** ನೆಲೆ, ಆಶ್ರಯ, ಹಕ್ಕಿ
**ಹಗರಣ** ನಾಟಕ, ಗೊಂದಲ
**ಹಗಹ** ಧಾನ್ಯವನ್ನು ತುಂಬಿಡುವ ಹಗೇವು
**ಹಗೆಯ** ಹಗೇವು
**ಹಡೆದಲ್ಲಿ** ಪಡೆದಲ್ಲಿ
**ಹಣವಡ್ಡ** ಏಳು ಆಣೆ
**ಹತ್ತೆ** ಸಮೀಪ
**ಹದಿರು** ಚಮತ್ಕಾರ, ಚಮತ್ಕಾರದ ಮಾತು
**ಹದುಳ** ಕ್ಷೇಮ
**ಹದುಳಿಗ** ಸುಖಿ, ಸಮಾಧಾನಿ
**ಹನ್ನಿಬರು** ಹನ್ನೆರಡು ಜನ

**ಹಪ್ಪು** ಮಾಂಸದ ಚೂರು, ಬಾಡಿನ ತುಂಡು
**ಹಮ್ಮದಂಬೋದರು** ಅಹಂಕಾರಪಟ್ಟರು, ಅಹಂಕಾರಿಗಳಾದರು (?)
**ಹಯನು** ಹಾಲು ನೀಡುವ ಹಸು
**ಹರಗುಲ** ಹರಿಗೋಲಿನ
**ಹರಣ** ಪ್ರಾಣ
**ಹರದ** ವ್ಯಾಪಾರಿ
**ಹರವಸ** ಪರವಶ
**ಹರವಿ** ಮಣ್ಣಿನ ಪಾತ್ರೆ, ಮಡಕೆ
**ಹರಿಗೆ** ಗುರಾಣಿ
**ಹರಿನುಡಿ** ಸತತವಾದ ಮಾತು
**ಹರಿಬ** ಕಾರಣ
**ಹರಿವಾಣ** ತಟ್ಟೆ
**ಹರಿಹಂಚು** ಚೂರುಚೂರಾಗು, ಛಿದ್ರವಾಗು
**ಹರುಗುಲ** ಹರಿಗೋಲು, ತೆಪ್ಪ
**ಹರುಹು** ಸ್ಥಿತಿ, ಸ್ವರೂಪ
**ಹರೆ** ಚರ್ಮದ ವಾದ್ಯ; ಹರೆಯ; ಹರಿದು ತುಂಡಾಗು; ಚದುರು, ಬಯಲಾಗು
**ಹಲರು** ಹಲವರು
**ಹಲ್ಲಣ** ಕುದುರೆಯ ಜೀನು
**ಹವಣು** ಅಳತೆ; ರೀತಿ; ಶಕ್ತಿ; ಕಟ್ಟಳೆ; ಸಾಮರ್ಥ್ಯ; ಪ್ರಮಾಣ; ಪ್ರಯತ್ನ; ಒದಗು; ವಿವರಿಸು
**ಹವಿ** ಹವಿಸ್ಸು
**ಹಸರ** ಮಾರಾಟದ ಸಾಮಗ್ರಿಗಳು
**ಹಸರದವನು** ಮಾರಾಟಗಾರ
**ಹಸುಬೆ** ಚೀಲ
**ಹಳಚು** ಕೂಡು; ಎದುರಿಸು; ರಭಸದಿಂದ ತಾಗು; ಕಳಚು
**ಹಳವಿಗೆ** ಬಾವುಟ
**ಹಳು** ಕಾಡು, ಅಡವಿ
**ಹಾಗ** ಮಡ್ಡು, ನಾಣ್ಯವೊಂದರ ನಾಲ್ಕನೆಯ ಒಂದು ಭಾಗ
**ಹಾರಿ** ಬಯಸಿ
**ಹಾವಚೆ** ಪಾಚಿ, ಹಲ್ಲಿನ ಪಾಚಿ
**ಹಾವನ್ನಕ್ಕ** ಹಾಯುವವರೆಗೆ
**ಹಾವಸೆ** ಪಾಚಿ
**ಹಾವಸೆಗಲ್ಲು** ಪಾಚಿಕಲ್ಲು
**ಹಾವುತಲೊಮ್ಮೆ** ಒಮ್ಮೆ ಹಾಯುತ್ತ
**ಹಾವುದಕ್ಕೆ** ಹಾಯುವುದಕ್ಕೆ
**ಹಾಹೆ** ಕಣ್ಣು ಗುಡ್ಡೆ, ಗೊಂಬೆ
**ಹಿಂದಣ ಹುಟ್ಟರತುಹೋಗು** ಪೂರ್ವದ ಸ್ಥಿತಿ ಒಣಗಿ ಇಲ್ಲವಾಗು
**ಹಿಡಿವಡೆ** ಹಿಡಿಯುವುದಾದರೆ, ಹಿಡಿಯುವಲ್ಲಿ; ಬಂಧನವನ್ನು ಹೊಂದು, ಸೆರೆಯಾಗು
**ಹಿದಿಕೆ** ಹುಲ್ಲಿನ ಬಣವೆ
**ಹೀಲಿ** (?)
**ಹುಗದು** ಸರಿಹೋಗದು
**ಹುಗಿಲು** ರಂಧ್ರ, ಸೀಳು
**ಹುಡುಕು ನೀರು** ಬಿಸಿ ನೀರು
**ಹುದಿ** ಮುಳುಗು, ಸೇರು, ಕೂಡು
**ಹುದುಗು** ಸಮಪಾಲು
**ಹುದುವಾಳಿಗೆ** ಕೂಡಿ ಬಾಳುವಿಕೆ
**ಹುಯ್ಯಲ** ಕೂಗು, ಗೋಳು
**ಹುಲುಗಿಳಿ** ಸಾಮಾನ್ಯ ಗಿಳಿ
**ಹುಲುಮೊರಡಿ** ಕಿರಿ ಬೆಟ್ಟ, ಗುಡ್ಡ
**ಹುಲ್ಲಸರವಿ** ಹುಲ್ಲಿನಲ್ಲಿ ಹೊಸೆದ ಹಗ್ಗ
**ಹುಲ್ಲೆ** ಹೆಣ್ಣು ಜಿಂಕೆ
**ಹುಳುವಟ್ಟೆ** ಹುಳು ಹಿಡಿದ ದೇಹ
**ಹುಳ್ಳಿ** ಸಣ್ಣ ಕಟ್ಟಿಗೆ, ಪುರಲ
**ಹೂಣೆ** ಹೂಳಿ, ಬಲವಾಗಿ ನಟ್ಟು, ಶಪಥಮಾಡಿ, ಎದುರಿಸಿ ಹೋರಾಡಿ
**ಹೂಳಿಹೆನು** ಹೂಳಿದ್ದೇನೆ
**ಹೆರೆಸಾರಿ** ಪಕ್ಕಕ್ಕೆ ಸರಿದು, ದೂರ ಸರಿದು

**ಹೆಕ್ಕಳ** ಹಿಗ್ಗು, ಸಂತೋಷ
**ಹೆಡಗೈ** ಕೈಯ ಹಿಂಭಾಗ
**ಹೇಕಣ್ಣು** ದೊಡ್ಡಕಣ್ಣು
**ಹೇಳಿಗೆ** ಬುಟ್ಟಿ, ಹಾವಿನ ಬುಟ್ಟಿ
**ಹೊಂದೊಡಿಗೆ** ಚಿನ್ನದ ತೊಡಿಗೆ
**ಹೊಡವಡು** ಸಾಷ್ಟಾಂಗ ನಮಸ್ಕರಿಸು
**ಹೊಡೆಗಿಚ್ಚು** ದಳ್ಳುರಿ
**ಹೊತ್ತು ಹೋಗದ ಮುನ್ನ** ಸಮಯ ಮೀರುವ ಮುನ್ನ, ಹೊತ್ತುಕೊಂಡು ಹೋಗುವ ಮುನ್ನ
**ಹೊದಕುಳಿ** ದುಃಖ, ತಾಪ
**ಹೊರಸು** ಪಾರಿವಾಳ, ಬೆಳುವ
**ಹೊರಹಂಚೆ** ಹೊರಗಿನ ವೇಷ; ಬಾಹ್ಯ ತೋರಿಕೆ
**ಹೊಲಬು** ಆಶ್ರಯ, ರೀತಿ, ಸ್ಪಷ್ಟತೆ, ದಾರಿ
**ಹೊಲಬುದಪ್ಪದೆ** ದಾರಿ–ರೀತಿ–ಮಾರ್ಗ, ತಪ್ಪದೆ
**ಹೊಳಲ ಸುಂಕಿಗ** ನಗರದ ಸುಂಕಿಗ
**ಹೊಳಲು** ಪಟ್ಟಣ
**ಹೋಟೆ** ಪೊಟರೆ, ಡೊಗರು, ಹೊದರು
**ಹೋರು** ಹೋರಾಡು
**ಹೋಹ** ಹೋಗುವ
**ಹೋಹವನ** ಹೋಗುವವನ
**ಹೋಹಾತ** ಹೋಗುವಾತ

ಕನ್ನಡವು ಕಾಗದರಹಿತ ಮಾಧ್ಯಮದಲ್ಲಿ ಕಾಣಿಸಿಕೊಳ್ಳುತ್ತಿರುವಾಗಲೂ ಪುಸ್ತಕ ರೂಪದಲ್ಲಿ ಕನ್ನಡ ಕೃತಿಗಳ ಪ್ರಕಟಣೆ ಸಮಾನಾಂತರವಾಗಿ ಕ್ರಿಯಾಶೀಲವಾಗಿ ನಡೆಯುವುದು ಬಹಳ ಮುಖ್ಯವಾದದ್ದು. ತಾಂತ್ರಿಕ-ಮೌಖಿಕ ಮಾಧ್ಯಮದಲ್ಲಿ ಕನ್ನಡವು ಬಳಕೆಯಾಗುತ್ತಿರುವಾಗಲೇ ಕಾಗದದಲ್ಲಿ ಕನ್ನಡ ಅಕ್ಷರಗಳು ಮುದ್ರಣ ಗೊಂಡು ಕಣ್ಣಿಗೆ, ಕಿವಿಗೆ ಮತ್ತು ಮನಸ್ಸಿಗೆ ಕನ್ನಡವನ್ನು ಸಂವಹನಗೊಳಿಸುವ ಪ್ರಕ್ರಿಯೆ ನಿರಂತರವಾಗಿ ನಡೆಯಬೇಕಿದೆ. ಇಲ್ಲಿ ಪ್ರಕಟಗೊಳ್ಳುವ ಮಾಧ್ಯಮ ದೊಂದಿಗೆ ಅಭಿವ್ಯಕ್ತಗೊಳ್ಳುವ ಚಿಂತನಾ ಶರೀರವೂ ಮುಖ್ಯವಾದದ್ದು. ಭಾಷೆ, ಸಾಹಿತ್ಯ, ಕಲೆಗಳು, ವಿಜ್ಞಾನ, ತಂತ್ರಜ್ಞಾನ, ಸಮಾಜವಿಜ್ಞಾನ ಎನ್ನುವ ಬೌದ್ಧಿಕ ಗಡಿ ರೇಖೆಗಳನ್ನು ಕಳಚಿಕೊಂಡು ಕನ್ನಡ ಜ್ಞಾನವು ಕನ್ನಡ ವಿಶ್ವವಿದ್ಯಾಲಯದಲ್ಲಿ ರೂಪುಗೊಳ್ಳುವ ಮತ್ತು ಪ್ರಕಟಗೊಳ್ಳುವ ಪ್ರಕ್ರಿಯೆ ನಡೆಯುತ್ತಿದೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಇಂಥ ಪ್ರಕ್ರಿಯೆಯ ಅನಂತ ರೂಪಗಳನ್ನು ಸಾಕಾರಗೊಳಿಸುವ ಒಂದು ನವರಂಗ. ಈ ಪ್ರಕಟಣೆಗಳು ಚಿಂತನೆ ಮತ್ತು ಪ್ರಯೋಗಗಳ ಫಲಗಳಾಗಿರುವುದರ ಜೊತೆಗೆ ಕರ್ನಾಟಕವನ್ನು ಮತ್ತು ಕನ್ನಡ ಸಂಸ್ಕೃತಿಯನ್ನು ಇಪ್ಪತ್ತೊಂದನೇ ಶತಮಾನದುದ್ದಕ್ಕೂ ಮುನ್ನಡೆಸುವ ಬೆಳಕಿನ ಬೀಜಗಳಾಗಿವೆ. ಈ ಆಶಯದ ಹಿನ್ನೆಲೆಯಲ್ಲಿ ರೂಪುಗೊಂಡ ಪ್ರಸ್ತುತ ಕೃತಿ 'ವಚನ ಸಾವಿರ'. ವಚನಗಳು ಕನ್ನಡದ ವಿಶಿಷ್ಟ ರಚನೆಗಳು. ಈ ವಚನ ಸಾವಿರ ಕೃತಿಯನ್ನು ಕನ್ನಡಿಗರ ಕೈಯಲ್ಲಿಡಲು ವಿಶ್ವವಿದ್ಯಾಲಯಕ್ಕೆ ತುಂಬಾ ಸಂತೋಷವೆನಿಸುತ್ತದೆ. ಇದೊಂದು ಅಪೂರ್ವವಾದ ಪ್ರಯತ್ನ. ಯಾವುದೇ ವಿಂಗಡಣೆಗಳಿಲ್ಲದೆ ವಚನಕಾರರ ವಚನಗಳನ್ನು ಅಕಾರಾದಿಯಾಗಿ ಇಲ್ಲಿ ನೀಡ ಲಾಗಿದೆ. ವಚನಗಳು ಮತ್ತು ಓದುಗರ ನಡುವೆ ಯಾವುದೇ ಬಗೆಯ ಉಪಾಧಿ ಇರಬಾರದೆಂಬ ಉದ್ದೇಶದಿಂದ ಇದನ್ನು ಸಿದ್ಧಪಡಿಸಲಾಗಿದೆ. ಇಂತಹ ಸಾವಿರದ ಅರವತ್ತೆಂಟು ವಚನಗಳನ್ನು ಪ್ರೊ. ಓ.ಎಲ್. ನಾಗಭೂಷಣಸ್ವಾಮಿ ಅವರು ಸಂಪಾದಿಸಿಕೊಟ್ಟಿದ್ದಾರೆ. ಅವರಿಗೆ ನಮ್ಮ ಅಭಿನಂದನೆಗಳು.

ಬಿ.ಎ. ವಿವೇಕ ರೈ
ಕುಲಪತಿ